# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



ಚಿತ್ರಗಳು : ಸಂಕೇತ್, ಶ್ರೀಹರಿ, ರಾಂಚಂದ್ರ ಕೊಪ್ಪಲು
ಕಮಲಂ ಅರಸು, ಜಿ. ಎಂ. ಬೊಮ್ನಳ್ಳಿ, ವಿಲ್ಸನ್, ಬಿ. ವಿ. ಹೀರೇಮಠ
ಮುಖಚಿತ್ರ : ನಿಯತಿ, ವರ್ಣಚಿತ್ರ : ಎಂ. ವೈ. ಘೋರ್ಪಡೆ (೨೦೧೦)
ವಿನ್ಯಾಸ : ನವಕರ್ನಾಟಕ ವಿನ್ಯಾಸ
ಕಚೇರಿ ಸಹಕಾರ : ಜಿ. ವಿ. ತೇಜೋವತಿ

## ಈ ತಿಂಗಳು

ಕರ್ನಾಟಕದ ಮಾಜಿ ಸಚಿವ ಶ್ರೀ. ಎಂ. ವೈ. ಘೋರ್ಪಡೆ ತೀರಿಕೊಂಡಿದ್ದಾರೆ. ಅವರು ಹಣಕಾಸು, ಗ್ರಾಮೀಣಾಭಿವೃದ್ಧಿ, ಪಂಚಾಯತ್ ರಾಜ್ ಹೀಗೆ ಅನೇಕ ಖಾತೆಗಳಲ್ಲಿ ಕೆಲಸ ಮಾಡಿದ್ದಾರೆ. ಸಂಡೂರಿನಿಂದ ಅವರು ಶಾಸನಸಭೆಗೆ ಆಯ್ಕೆಯಾಗುತ್ತಿದ್ದರು. ಅದೊಂದು ಸಂಸ್ಥಾನವಾಗಿದ್ದಾಗ ಅದನ್ನಾಳುತ್ತಿದ್ದವರ ವಂಶಜರಾದ ಘೋರ್ಪಡೆ ಮೆದುಸ್ವಭಾವದವರು ಮತ್ತು ಮೃದುಭಾಷಿ. ಸಂಡೂರಿನ ಖನಿಜ ನಿಕ್ಷೇಪದಿಂದ ಮ್ಯಾಂಗನೀಸ್ ಅದಿರನ್ನು ತೆಗೆಯುವ ಉದ್ದಿಮೆ ಹೊಂದಿದ್ದ ಈತ ಬಳ್ಳಾರಿ ಜಿಲ್ಲೆಯಲ್ಲಿ ಕಬ್ಬಿಣದ ಅದಿರನ್ನು ಯದ್ವಾತದ್ವಾ ಲೂಟಿಮಾಡಿ ಬೆಟ್ಟಗಳನ್ನು ಇಲ್ಲವಾಗಿಸಿದ ಮತ್ತು ಕೃಷಿ ಭೂಮಿಯನ್ನು ಹಾಳುಮಾಡಿದ ಖದೀಮರ ಬಗ್ಗೆ ಎಂದಾದರೂ ಸೊಲ್ಲೆತ್ತಿದ್ದರೇನೋ ತಿಳಿಯದು. ಓದು, ಬರಹ ಮತ್ತು ಛಾಯಾಚಿತ್ರಗ್ರಹಣದಲ್ಲಿ ಅವರು ನಿಷ್ಣಾತರು. ಬೆಟ್ಟಗಳು, ಕೋಟೆಗಳು, ಕಾಡುಗಳು, ವನ್ಯಜೀವಿಗಳು, ಸಾಮಾನ್ಯಜನ, ಮಕ್ಕಳು, ಹೀಗೆ ಅವರ ಛಾಯಾಚಿತ್ರಗಳ ವ್ಯಾಪ್ತಿ ವಿಶಾಲವಾದುದು. ಇದೇ ೨೦೧೧ರಲ್ಲಿ ಅವರ ''ಸಾಹಸದ ಒಂದು ಸೀಮಾ ರೇಖೆ'' ಎಂಬ ಪುಸ್ತಕವು ಕನ್ನಡ ಅನುವಾದದಲ್ಲಿ ಪ್ರಕಟವಾಗಿತ್ತು. ಅದರ ಅನುವಾದಕರು ಶ್ರೀಮತಿ. ಭಾರತೀ ಕಾಸರಗೋಡು. ಪ್ರಸ್ತುತ ಸಂಚಿಕೆಯ ಮುಖಪುಟಕ್ಕೆ ಮೊಮ್ಮಗಳು ನಿಯತಿಯ ಛಾಯಾಚಿತ್ರವನ್ನು ಅವರು ಒದಗಿಸಿದ್ದಕ್ಕಾಗಿ ಅವರಿಗೆ 'ಹೊಸತು' ಋಣಿಯಾಗಿದೆ. ಆ ಛಾಯಾಚಿತ್ರ ತೆಗೆದವರು ಶ್ರೀ. ಎಂ. ವೈ. ಘೋರ್ಪಡೆ. ಶ್ರೀಯುತರಿಗೆ ಗೌರವ ಸಲ್ಲಿಸುವಾಗ ಅವರೇ ತೆಗೆದ ಚಿತ್ರವೊಂದನ್ನು ಪ್ರಕಟಿಸುವ ಅವಕಾಶವು ಅಪೂರ್ವವೆನಿಸುತ್ತದೆ.

* * *

ನಮ್ಮ ದೇಶದ ತಲೆಯ ಮೇಲೆ ಬುತ್ತಿಯ ಬುಟ್ಟಿ ಬೇಕೋ ಅಥವಾ ರಬ್ಬರು ಚಕ್ರಗಳ ಕಿರೀಟ ಬೇಕೋ ? ಬುತ್ತಿಯ ಚಿಂತೆ ಇಲ್ಲದವರಿಗೆ ರಬ್ಬರು ಚಕ್ರವೆಂದರೆ ಪುಲಕ, ಆದರೆ ಬುತ್ತಿಗಾಗಿ ಪರದಾಡುವವರಿಗೆ ತಲೆಯ ಮೇಲೆ ರಬ್ಬರಿನ ಹೊರೆಯು ನೇಣುಗಂಬದ ಹಬ್ಬದಂತೆ ಭಾಸವಾಗುತ್ತದೆ. ಬರೆದಿಟ್ಟ ಸಂವಿಧಾನ ಮತ್ತು ಬ್ರಿಟಿಷರ ಕಾಲದ ಕಾನೂನು ಏನೇ ಹೇಳಲಿ, ಬುತ್ತಿಯಿಲ್ಲದವರ ತಲೆಗಳನ್ನು ಚೆಂಡಾಡಬಹುದೆಂಬುದು ಅಲಿಖಿತ ನಿಯಮ. ಇದೆಲ್ಲಾ ಒಗಟಿನ ಮಾತಲ್ಲ. ದೆಹಲಿಯಾಚೆ ನೋಯಿಡಾದಲ್ಲಿ ಜಮೀನು ಕಳೆದುಕೊಳ್ಳುತ್ತಿರುವ ಸಣ್ಣ ಮತ್ತು ದೊಡ್ಡ ರೈತರ ಬವಣೆಯನ್ನು ಬಿಡಿಸಿರುವ ಲೇಖನವೊಂದು ಪ್ರಸ್ತುತ ಸಂಚಿಕೆಯಲ್ಲಿ ಪ್ರಕಟವಾಗಿದೆ. ಅದಕ್ಕೊಂದು ಪುಟ್ಟ ಷರಾ ಬೇಕಿದ್ದರೆ ಅದ್ಭುತವೆಂದು ಅಸಹ್ಯವಾಗಿ ಬಿಂಬಿಸಲಾದ ಫಾರ್ಮುಲಾ - ೧ ಎಂಬ ಕಿರೀಟವನ್ನು ನೆನಪಿಸಿಕೊಳ್ಳಬಹುದು. ಪತ್ರಿಕೆಗಳೂ ಸೇರಿದಂತೆ ನಮ್ಮ ಮಾಧ್ಯಮಗಳು ಅದನ್ನು ವಿಜೃಂಭಿಸಿದ್ದು ವಸಾಹತು ಕಾಲದ ಪ್ರಜ್ಞೆ ಎಷ್ಟು ಆಳವಾಗಿ ಬೇರೂರಿದೆಯೆಂಬುದನ್ನು ತೋರಿಸುವ ನಾಚಿಕೆಗೇಡಿನ ಪ್ರಸಂಗ. ಯಾವ ಕ್ರಿಕೆಟ್ಟಿಗ ಅಲ್ಲಿ ಹಾಜರಿದ್ದ, ಯಾವ ಸಿನಿಮಾ ತಾರೆ ಏನು ಉಡುಗೆ ತೊಟ್ಟು ಅಥವಾ ತೊಡದೆ ಅಲ್ಲಿ ಮೆರೆದಳು, ಯಾವ ಲೂಟಿಕೋರ ಬಂಡವಳಿಗ ಅಲ್ಲಿದ್ದು ವ್ಯವಹಾರ ಕುದುರಿಸಿಕೊಳ್ಳುತ್ತಿದ್ದ, ಇತ್ಯಾದಿ 'ಪ್ರಶಸ್ತ' ಸಮಾಚಾರಗಳನ್ನು ಉಂಡು ನೋಯಿಡಾ ಬಳಿ ಫಾರ್ಮುಲಾ-೧ಗಾಗಿ ಭೂಮಿ ಕಳೆದುಕೊಂಡವರು ತಲೆಯ ಮೇಲೆ ಮಣ್ಣು ಸುರಿದುಕೊಂಡರು. ಇದು ನಮ್ಮ ದೇಶದ ಸಂಸ್ಕೃತಿ. ''ನಮ್ಮ ಭೂಮಿ ಕಿತ್ತುಕೊಂಡು ನೀವು ಹೀಗೆ ಮೆರೆಯುತ್ತೀರಲ್ಲಾ, ನಿಮಗೆ ಸದಾಕಾಲಕ್ಕೂ ಧಿಕ್ಕಾರ'', ಎಂದು ಹೇಳಲು ಬಂದ ರೈತರಿಗೆ ಪೊಲೀಸರ ಲಾಠಿ-ಬೂಟು ರುಚಿಯ ಪರಿಚಯವಾಯಿತು. ಮನಮೋಹನ ಸಿಂಗ್ ಮತ್ತು ಸುಷ್ಮಾ ಸ್ವರಾಜ್ ಇಬ್ಬರೂ ಇದನ್ನು ಕಂಡು ಕುನ್ನಿಗಳಂತೆ ಕುಂಇಗುಡಲೂ ಇಲ್ಲ, ಮಹಾಧ್ಯಾನದಲ್ಲಿ ಮುಳುಗಿದ ಮೌನಿಗಳಂತೆ ತುಟಿ ಗಟ್ಟಿಯಾಗಿ ಬಿಗಿಹಿಡಿದರು. ಕತ್ತೆಗಳ ಬಣ್ಣದಲ್ಲಿ ಅಷ್ಟಾಗಿ ವ್ಯತ್ಯಾಸವಿರುವುದಿಲ್ಲ, ಹಾಗೇ ಇವರಿಬ್ಬರದೂ ಒಂದೇ ಮನೋಭಾವ. ವ್ಯತ್ಯಾಸ ಇದ್ದರೂ ಅದು ತೋರಿಕೆ ಮಾತ್ರ. ಪತ್ರಿಕೆಗಳ ಮುಖಪುಟದಲ್ಲಿ ರಬ್ಬರ್ ಚಕ್ರದ ಗಾಡಿಗಳು, ಅವುಗಳಲ್ಲಿ ಕೃಷ್ಣ ಪರಮಾತ್ಮನಿಗೆ ಸಮನಾದ ಸಾರಥಿಗಳು ! ಕೆಲವು ಪತ್ರಿಕೆಗಳಂತೂ ಹೊಸಯುಗವೇ ಆರಂಭವಾಯಿತೆಂದು ಪೃಷ್ಠ ಬಡಿದುಕೊಂಡು ಕುಣಿದಾಡುವ ರೀತಿಯಲ್ಲಿ ಸಂಪಾದಕೀಯಗಳನ್ನು ಬರೆದವು. ಉಳ್ಳವರ ಉದ್ಧಟತನದ ವಿಷ ಪಾತ್ರೆ ಇನ್ನೂ ತುಂಬಿಲ್ಲವೇ ?

* * *

ಪತ್ರಿಕೆಗಳ ಪ್ರಸ್ತಾಪ ಬಂದಾಗ ''ಪ್ರಜಾಪ್ರಭುತ್ವ ಮತ್ತು ಜನಪ್ರಗತಿಗೆ ಬದ್ಧ''ವಾದ ಮದ್ರಾಸಿನ ''ದಿ ಹಿಂದು'' ಪತ್ರಿಕೆಯನ್ನು ಮರೆಯಲಾದೀತೇ ? ಅದರ ಸಂಪಾದಕ ಕ್ರಾಂತಿಕಾರಿ

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

# ಹೊಸತು

ನೆಚ್ಚಿಡಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೩ ಸಂಚಿಕೆ-೫ ಡಿಸೆಂಬರ್ ೨೦೧೧

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**URL : www.navakarnataka.com**
**http : //navakarnataka.blogspot.com**
**http : //hosathu.blogspot.com**





## ಆರ್ಥಿಕ ಸಂಕಷ್ಟಕ್ಕೆ ಪರಿಹಾರ ಕಾಣದ ಕಾನ್ ಶೃಂಗಸಭೆ

ಬಂಡವಾಳಶಾಹಿ ದೇಶಗಳಲ್ಲಿ ಆರ್ಥಿಕ ಬಿಕ್ಕಟ್ಟು ಬಿಗಡಾಯಿಸುತ್ತಿದೆಯೇ ಹೊರತು - ಬಗೆಹರಿಯುವ ಸೂಚನೆಯೇ ಇಲ್ಲ. ಯೂರೋಪು, ಅಮೆರಿಕಾ ಮೊದಲಾದ ಮುಂದುವರಿದ ದೇಶಗಳಲ್ಲಿ ಹೆಚ್ಚುತ್ತಿರುವ ನಿರುದ್ಯೋಗ, ಕುಸಿಯುತ್ತಿರುವ ಬೆಳವಣಿಗೆ ದರ, ಹಣಕಾಸಿನ ಬಿಕ್ಕಟ್ಟು, ಬ್ಯಾಂಕುಗಳು ಹಾಗೂ ಹಣಕಾಸಿನ ಸಂಸ್ಥೆಗಳ ದಿವಾಳಿ, ಏರುತ್ತಿರುವ ಸಾಲದ ಹೊರೆ ಇವೆಲ್ಲ ಆಡಳಿತ ನಡೆಸುತ್ತಿರುವವರಿಗೆ ತಲೆನೋವಾಗಿದೆ. ಮುಂದುವರಿಯುತ್ತಿರುವ ಆರ್ಥಿಕ ಹಿಂಜರಿಕೆಯನ್ನು ತಡೆಯಲು, ಪರಿಸ್ಥಿತಿಯನ್ನು ನಿಯಂತ್ರಿಸಲು ಶ್ರೀಮಂತ ದೇಶಗಳ ನಾಯಕತ್ವ ನಡೆಸಿರುವ ಪ್ರಯತ್ನಗಳೆಲ್ಲ ನಿಷ್ಫಲಗೊಂಡಿವೆ. ಕಳೆದ ಶತಮಾನದ ಎರಡು ಮೂರನೇ ದಶಕಗಳಲ್ಲಿ ಬಂಡವಾಳಶಾಹಿ ಜಗತ್ತಿನಲ್ಲಿ ಸಂಭವಿಸಿದ ಮಹಾ ಆರ್ಥಿಕ ಕುಸಿತವನ್ನೇ ಈಗಿನ ಮುಗ್ಗಟ್ಟು ನೆನಪಿಗೆ ತರುತ್ತಿದೆ. ಜಾಗತೀಕರಣ, ಉದಾರೀಕರಣ, ಮುಕ್ತಮಾರುಕಟ್ಟೆ ಮೊದಲಾದ ಮಂತ್ರಗಳು ಉಳ್ಳವರು ಮತ್ತು ಇಲ್ಲದವರ ಮಧ್ಯೆ ಕಂದಕವನ್ನು ಹೆಚ್ಚಿಸಿದೆ. ಈ ವ್ಯತ್ಯಯ ಕಣ್ಣಿಗೆ ಬಡಿಯುವಂತೆ ಎದ್ದುಕಾಣುತ್ತಿದೆ. ಬಡಜನರ ಸಂಖ್ಯೆ ಅಪಾರವಾಗಿ ಹೆಚ್ಚಿದೆ. ಶ್ರೀಮಂತಿಕೆಯ ಅಟ್ಟಹಾಸ ಎಲ್ಲೆಡೆ ಮುಗಿಲು ಮುಟ್ಟುತ್ತಿದೆ. ಜನ ಬೇಸತ್ತಿದ್ದಾರೆ, ಪ್ರತಿಭಟಿಸುತ್ತಿದ್ದಾರೆ. ಇಂದು ಅಮೆರಿಕಾ, ಯೂರೋಪುಗಳಲ್ಲಿ ನಡೆಯುತ್ತಿರುವ ಬಂಡವಾಳಶಾಹಿಗಳ ಜೂಜುಕಟ್ಟೆಗಳಾದ ಷೇರುಮಾರುಕಟ್ಟೆಗಳ ಆಕ್ರಮಣದ ಜನಾಂದೋಳನ, ಪ್ರತಿಭಟನೆಗಳಲ್ಲಿ ಇದನ್ನು ಕಾಣಬಹುದು.

ತಲೆದೋರಿರುವ ಆರ್ಥಿಕ ಮುಗ್ಗಟ್ಟಿನಿಂದ ಪಾರಾಗಲು ಬಂಡವಾಳಶಾಹಿ ಜಗತ್ತಿನ ಮುಖಂಡರು ಹರಸಾಹಸ ಮಾಡುತ್ತಿದ್ದಾರೆ. ಸಭೆ, ಸಮಾವೇಶಗಳನ್ನು ನಡೆಸುತ್ತಿದ್ದಾರೆ. ಆದರೆ ದಾರಿಕಾಣದಾಗಿದೆ. ಇತ್ತೀಚೆಗೆ ಫ್ರಾನ್ಸ್‌ನ ಕಾನ್ ನಗರದಲ್ಲಿ ಜರುಗಿದ ಜಿ-೨೦ ರಾಷ್ಟ್ರಗಳ ಶೃಂಗಸಭೆ ಅದಕ್ಕೆ ಉದಾಹರಣೆ. ಸಂಕಷ್ಟದಲ್ಲಿರುವ ಗ್ರೀಸ್, ಇಟಲಿಯಂಥ ದೇಶಗಳಿಗೆ ನೆರವಾಗಲು ಯಾರೂ ಮುಂದೆ ಬರುತ್ತಿಲ್ಲ, ಬರಲೂ ಇಲ್ಲ. ಎರಡು ದಿನಗಳು, ಅಂತರರಾಷ್ಟ್ರೀಯ ಚಲನಚಿತ್ರೋತ್ಸವಗಳಿಗೆ ಹೆಸರಾದ ರಮಣೀಯ ಪ್ರದೇಶ ಕಾನ್‌ನಲ್ಲಿ ಪ್ರಧಾನಿಗಳು, ರಾಷ್ಟ್ರಾಧ್ಯಕ್ಷರುಗಳು ಆರಾಮವಾಗಿ ಮಾತುಕತೆ ನಡೆಸಿ ತೃಪ್ತರಾಗಿ ಕೈತೊಳೆದುಕೊಂಡದ್ದೇ ಸಾಧನೆ. ನಮ್ಮ ಪ್ರಧಾನಿ ಅರ್ಥಶಾಸ್ತ್ರಜ್ಞ ಮನಮೋಹನ ಸಿಂಗ್ ಈ ಶೃಂಗಸಭೆಯಲ್ಲಿ ಪಾಲ್ಗೊಂಡಿದ್ದರು. ಇವರೂ ಅವರ ಗರಡಿಯಲ್ಲೇ ತಯಾರಾದವರು. ತಮ್ಮದೇ ನೂರೆಂಟು ಸಮಸ್ಯೆ ಇರುವಾಗ ಏನು ಮಾಡಿಯಾರು? ಐ.ಎಂ.ಎಫ್., ವರ್ಲ್ಡ್‌ಬ್ಯಾಂಕುಗಳ ವರಿಷ್ಠರು, ಆರ್ಥಿಕ ತಜ್ಞರು ಇದ್ದರೂ ಕೂಡ ನಡೆದದ್ದು ಒಣಚರ್ಚೆ. ಯಾವುದೇ ಒಪ್ಪಂದಕ್ಕೆ ಬಾರದೆ ಕಾದುನೋಡುವ ತವಕದಲ್ಲಿ ಸಭೆ ಅಂತ್ಯಗೊಂಡಿತು. ಈ ಬಾರಿಯ ಶೃಂಗಸಭೆಯ ವೈಫಲ್ಯ ಎದ್ದುಕಾಣುತ್ತಿತ್ತು. ಕಳೆದ ಶೃಂಗಸಭೆಯಿಂದ ಇಲ್ಲಿಯವರೆಗೆ ಅವಲೋಕಿಸಿದಲ್ಲಿ ಮುಂದುವರಿದ ದೇಶಗಳಲ್ಲಿ ಆರ್ಥಿಕ ಚೇತರಿಕೆಯಾಗುವುದಕ್ಕೆ ಪ್ರತಿಯಾಗಿ ಮತ್ತಷ್ಟು ದುರ್ಬಲಗೊಂಡಿರುವುದನ್ನು ಶೃಂಗಸಭೆ ಒಪ್ಪಿಕೊಳ್ಳಬೇಕಾಯಿತು. ಜಾಗತಿಕ ಆರ್ಥಿಕವನ್ನು ನಿಯಂತ್ರಿಸುವವರು ನಾವೇ ಎಂದುಕೊಂಡಿರುವ ಜಿ-೨೦ ರಾಷ್ಟ್ರಗಳ ನಾಯಕರು ಅಂಗೀಕರಿಸಿದ ದಸ್ತಾವೇಜಿನಲ್ಲಿ ಸೋಲನ್ನು ನಿಸ್ಸಂಕೋಚವಾಗಿ ಒಪ್ಪಿಕೊಂಡಿದ್ದಾರೆ. ಯಾವುದೇ ಪರಿಹಾರ ಸೂಚಿಸದೆ ಕೈಚೆಲ್ಲಿದ್ದಾರೆ. ಮುಂದುವರಿದ ಶ್ರೀಮಂತ ಬಂಡವಾಳಶಾಹಿ ದೇಶಗಳಲ್ಲಿ ಮಿತಿಮೀರಿ ಹೆಚ್ಚುತ್ತಿರುವ ನಿರುದ್ಯೋಗ, ಹಣಕಾಸಿನ ಮಾರುಕಟ್ಟೆಗಳಲ್ಲಿನ ಅಲ್ಲೋಲಕಲ್ಲೋಲ ಯೂರೋಪಿನ ದೇಶಗಳಲ್ಲಿ ತಲೆದೋರಿರುವ ಬಿಕ್ಕಟ್ಟು ಬೆಳವಣಿಗೆಯನ್ನು ಕುಂಠಿತಗೊಳಿಸಿವೆ ಎಂದು ಪ್ರಕಟಣೆಯಲ್ಲಿ ಹೇಳಿಕೊಂಡಿದ್ದಾರೆ. ಅಂತರರಾಷ್ಟ್ರೀಯ ವಿತ್ತೀಯ ಸಂಸ್ಥೆಗಳಾದ, ಶ್ರೀಮಂತ ಬಂಡವಾಳಶಾಹಿ ದೇಶಗಳ ಸೃಷ್ಟಿಯಾದ ಐಎಂಎಫ್, ವರ್ಲ್ಡ್ ಬ್ಯಾಂಕುಗಳ ನಿಷ್ಪ್ರಯೋಜಕತೆ ಈ ಶೃಂಗಸಭೆಯಲ್ಲಿ ಸ್ಪಷ್ಟವಾಗಿ ಗೋಚರಿಸಿತು. ಭಾಗವಹಿಸಿದ್ದ ದೇಶಗಳು ತಾವೇ ಕೋಟಿ ಸಮಸ್ಯೆಗಳನ್ನು ಎದುರಿಸುತ್ತಿರುವಾಗ ಸಂಕಷ್ಟದಲ್ಲಿರುವವರ ನೆರವಿಗೆ ಬರುವುದು ಹೇಗೆ ಸಾಧ್ಯ? ಒಂದು ಕಾಲದಲ್ಲಿ ಜಾಗತಿಕ ಆರ್ಥಿಕದ ಯಜಮಾನರು ತಾವೇ ಎಂದುಕೊಂಡಿದ್ದ ಶ್ರೀಮಂತ ಬಂಡವಾಳಶಾಹಿ ರಾಷ್ಟ್ರಗಳು ಈಗ ಮುಗ್ಗಟ್ಟಿನಲ್ಲಿ ತೊಳಲಾಡುತ್ತಿರುವುದನ್ನು ಕಾನ್ ಶೃಂಗಸಭೆ ಹೊರಗೆಡಹಿದೆ.

ಇಪ್ಪತ್ತನೇ ಶತಮಾನದಲ್ಲಿ, ಎರಡನೇ ಮಹಾಯುದ್ಧದ ನಂತರ ೧೯೭೫ರಲ್ಲಿ ಅಂದಿನ ಶ್ರೀಮಂತ ರಾಷ್ಟ್ರಗಳು ಫ್ರಾನ್ಸ್, ಜರ್ಮನಿ, ಇಟಲಿ, ಜಪಾನ್, ಬ್ರಿಟನ್, ಅಮೆರಿಕಾಗಳು ಜಾಗತಿಕ ಆರ್ಥಿಕವನ್ನು ನಿಯಂತ್ರಿಸಲು ಒಂದಾದುವು. ೧೯೭೬ರಲ್ಲಿ ಕೆನಡಾ, ೧೯೯೮ರಲ್ಲಿ ರಷ್ಯಾ ಸೇರಿ ಜಿ-೮, ಎಂದರೆ ಎಂಟು ರಾಷ್ಟ್ರಗಳ ಗುಂಪು ಎಂದು ಹೆಸರುವಾಸಿಯಾಯಿತು. ಈಗಲೂ ಈ ಗುಂಪಿನ ರಾಷ್ಟ್ರಗಳ ವರಿಷ್ಠರು ಸಭೆಗಳನ್ನು ನಡೆಸುತ್ತಿದ್ದಾರೆ. ಆದರೆ ಯಜಮಾನಿಕೆ ನಡೆಸಲಾಗುತ್ತಿಲ್ಲ. ಶತಮಾನದ ಅಂತ್ಯದಲ್ಲಿ ಭಾರತ, ಚೀಣ, ದಕ್ಷಿಣ ಆಫ್ರಿಕ, ಬ್ರೆಜಿಲ್, ಅರ್ಜೆಂಟೈನಾ ಮೊದಲಾದ ಅಭಿವೃದ್ಧಿಶೀಲ ದೇಶಗಳನ್ನು ಸೇರಿಸಿಕೊಂಡು ಅದು ಜಿ-೨೦ ಆಯಿತು. ಈ ಗುಂಪಿನ ರಾಷ್ಟ್ರಗಳು ಆಗಾಗ ಸಭೆ ಸೇರಿ ಚರ್ಚೆ ನಡೆಸುವುದನ್ನು ಬಿಟ್ಟರೆ ಬೇರೇನೂ ಪ್ರಯೋಜನವಾಗಿಲ್ಲ. ಎಲ್ಲವೂ ಒಂದು ರೀತಿಯಲ್ಲಿ ತೂಗಿಕೊಂಡು ಹೋಗುತ್ತಿರುವವರೆಗೆ ಯಶಸ್ಸನ್ನು ತಮ್ಮದೆಂದು ಕೊಚ್ಚಿಕೊಳ್ಳುವ ಈ ದೇಶಗಳು ಬಿಕ್ಕಟ್ಟು ಉಂಟಾದಾಗ ಕಕ್ಕಾಬಿಕ್ಕಿ. ಒಂದು ದಶಕಕ್ಕೂ ಹೆಚ್ಚು ಕಾಲದ ಅದರ ಅಸ್ತಿತ್ವದಲ್ಲಿ ಅದನ್ನು ಕಂಡಿದ್ದೇವೆ. ಕಾನ್‌ನಲ್ಲಿ ನಡೆದ ಶೃಂಗಸಭೆ ಅದನ್ನು ದೃಢಪಡಿಸಿದೆ ಅಷ್ಟೆ.

## ಪ್ರಾದೇಶಿಕತೆ - ರಾಷ್ಟ್ರೀಯತೆ

ರಾಜ್ಯೋತ್ಸವದ ಸಂಭ್ರಮ ಮುಗಿಯುತ್ತಿದ್ದಂತೆ ಕನ್ನಡ ಮತ್ತು ಕರ್ನಾಟಕ ನಮ್ಮ ಮಾಧ್ಯಮಗಳ ಚಿತ್ರಪಟಲದಿಂದ ದೂರವಾಗುವುದು ಅಸಂಭವವಲ್ಲ. ಸರ್ಕಾರಿ ಪ್ರಾಥಮಿಕ ಶಾಲೆಗಳನ್ನು ಮುಚ್ಚುವ ಯೋಜನೆ ಮುಂದುವರಿಯುತ್ತದೆ, ಆದರೆ ಅದಕ್ಕೆ ಸಿಹಿಯೆಂದು ತೋರುವ ಬೇರೆ ಹೆಸರುಗಳನ್ನು ನೀಡಲಾಗುತ್ತದೆ. ಬೆಳಗಾವಿಯ ರಾಜ್ಯೋತ್ಸವ ಸಂದರ್ಭದ ಘಟನೆಯ ಮಾತು ಇನ್ನೂ ಕೆಲಕಾಲ ಜೀವಂತವಾಗಿರುತ್ತದೆ, ಆದರೆ ಆ ನಗರದ ವಾತಾವರಣವನ್ನು ಗುಣಾತ್ಮಕವಾಗಿ ಬದಲಾಯಿಸುವ ಯೋಜನೆ ಯಾವುದೂ ಅನುಷ್ಠಾನಕ್ಕೆ ಬರುವುದಿಲ್ಲ. ಶಾಲೆಗಳ ಪ್ರಶ್ನೆಗೆ ಉತ್ತರವಿರುವುದು ಪ್ರತಿಭಟನೆಗಳ ಮೂಲಕ ಅಲ್ಲ; ಸರ್ವೋಚ್ಚ ನ್ಯಾಯಾಲಯದಲ್ಲಿ ಒಂದು ದಶಕದಿಂದ ತಡೆಯಾಜ್ಞೆಯ ಪಂಜರದಲ್ಲಿ ಬಿದ್ದಿರುವ ಮಾಧ್ಯಮ ಕುರಿತ ಸರ್ಕಾರದ ಆಜ್ಞೆಗೆ ಜೀವ ತುಂಬುವುದು ಮೊದಲ ಕೆಲಸವಾಗಬೇಕು. ನಮ್ಮ ರಾಜ್ಯದ ಸರ್ಕಾರ ಅದನ್ನು ಮಾಡಿಲ್ಲ, ಮಾಡುವುದಿಲ್ಲ; ಬಾಯುಪಚಾರಕ್ಕೆ ಏನೋ ಪರಿಹಾರದ ಸಾಂತ್ವನ ನೀಡುತ್ತದೆ. ಕಾಂಗ್ರೆಸ್ಸಿಗೆ ಇಂಗ್ಲಿಷ್ - ಹಿಂದಿ ರೋಗ, ಭಾಜಪಕ್ಕೆ ಹಿಂದಿ ಸನ್ನಿ. ಹೀಗಾಗಿ ಕನ್ನಡಕ್ಕೆ ರಾಜ್ಯೋತ್ಸವದಲ್ಲಷ್ಟೇ ಮಹಾತ್ಮೆ.

ಪ್ರತಿವರ್ಷ ಜುಲೈ ತಿಂಗಳಲ್ಲಿ ಮಂಗೋಲಿಯ 'ನಾದಂ' ಎಂಬ ರಾಷ್ಟ್ರೀಯ ಹಬ್ಬವನ್ನು ಆಚರಿಸುತ್ತದೆ. ಸಹಸ್ರಾರು ಮಂದಿ ಸಾಮೂಹಿಕವಾಗಿ ಭಾಗವಹಿಸುವ ಹಬ್ಬ ಅದು. ಕ್ರೀಡೆಗಳು, ನಾಟ್ಯ, ಹಾಡು, ಮನರಂಜನೆ ಎಲ್ಲಾ ಆ ಹಬ್ಬದ ಭಾಗ. ಶತಮಾನಗಳಿಂದ ಅದು ಆಚರಣೆಯಲ್ಲಿದೆ. ಕೆಚ್ಚೆದೆಯ ಪ್ರದರ್ಶನಕ್ಕಾಗಿ ಕುದುರೆಸವಾರಿ, ಬಾಣಬಿಡುವುದು, ಕುಸ್ತಿ ಇವುಗಳನ್ನು ಆಯೋಜಿಸುತ್ತಾರೆ. ಒಬ್ಬ ಮಹಿಳೆ ಇತ್ತೀಚೆಗೆ ಹೇಳಿದಳು, ''ನಾದಂ ನಮ್ಮ ಅತ್ಯಂತ ದೊಡ್ಡ ರಾಷ್ಟ್ರೀಯ ಹಬ್ಬ. ನಮ್ಮ ರಾಷ್ಟ್ರೀಯ ಅಸ್ಮಿತೆಯ ಕುರುಹು ಅದು. ನಾವೆಲ್ಲಿಂದ ಬಂದೆವೆಂಬುದನ್ನು ನೆನಪಿಸುವ ಹಬ್ಬ ಅದು'' ಎಂದು. ನಮಗೂ ರಾಷ್ಟ್ರೀಯ ಹಬ್ಬಗಳಿವೆ: ಸ್ವಾತಂತ್ರ್ಯ ದಿನ, ಗಣರಾಜ್ಯ ದಿನ, ಅಲ್ಲದೆ ಬುದ್ಧ - ಬಸವ - ಕನಕ - ವಾಲ್ಮೀಕಿ - ಮಹಾವೀರ - ರಾಮ - ಅಂಬೇಡ್ಕರ್ ಜಯಂತಿಗಳು. ಪ್ರತಿವರ್ಷವೂ ಒಂದು ಹೊಸ ಜಯಂತಿ ಸೇರಿಕೊಳ್ಳುತ್ತದೆ. ಅದು ರಜೆಯ ಸೌಲಭ್ಯವಾಗುವುದನ್ನುಳಿದು ಜನಸಮುದಾಯದ ಪ್ರಜ್ಞೆಯನ್ನು ಹೊಗುವುದಿಲ್ಲ. ದೇಶದ ಹಲವು ಪ್ರದೇಶಗಳಲ್ಲಿ ಅವು ಭಾರತವೆಂಬ ರಾಷ್ಟ್ರಕ್ಕೆ ಸೇರಿವೆಯೆಂಬ ಭಾವನೆಯೂ ಉಂಟಾಗದಂತಹ ಸನ್ನಿವೇಶವಿದೆ. ವಿಶ್ವದ ಕಣ್ಣಿಗೆ ಬೀಳದೆ ಎಲ್ಲೋ ನಿಸೂರಾಗಿರುವ ಮಂಗೋಲಿಯ ರೂಢಿಸಿಕೊಂಡ ಅಸ್ಮಿತೆ ದಿನನಿತ್ಯ ವಿಶ್ವದ ಕೇಂದ್ರದತ್ತ ನುಗ್ಗಲು ಹಾತೊರೆಯುವ ಭಾರತಕ್ಕೆ ಇನ್ನೂ ಸಿದ್ಧಿಸಿಲ್ಲ, ಸಿದ್ಧಿಸಬಹುದಾದ ಹಾದಿಯಲ್ಲಿ ನಾವು ಸಾಗುತ್ತಲೂ ಇಲ್ಲ. ಅದಕ್ಕೆ ಕಾರಣಗಳನ್ನು 'ವಿದ್ವಾಂಸರು' ಗುರುತಿಸಿದ್ದಾರೆ: ಮಂಗೋಲಿಯಾದಂತೆ ನಾವು ಒಂದು ಘಟಕವಲ್ಲ, ನಮ್ಮ ಜನಾಂಗಗಳು ಹತ್ತಾರು, ಎಲ್ಲ ಪ್ರದೇಶಗಳಿಗೂ ಅನ್ವಯವಾಗುವ ಚರಿತ್ರೆ ನಮಗಿಲ್ಲ, ಇತ್ಯಾದಿ. ಅದೇ ವಿದ್ವಾಂಸರು ನಮ್ಮ ದೇಶದ ಸಂಸ್ಕೃತಿಯನ್ನು ಒಟ್ಟುಗೂಡಿಸಲು ಶ್ರೀರಾಮ ಮತ್ತು ಭಗವದ್ಗೀತೆ ಸಾಕೆಂದು ಅತಿಮೂರ್ಖತನದ ಮಾತನ್ನಾಡುತ್ತಾರೆ. ಆ ಶ್ರೀರಾಮನೂ ಒಂದೇ ತೆರದವನಾಗಿರಬೇಕು, ಎ. ಕೆ. ರಾಮಾನುಜನ್ ಎತ್ತಿಹೇಳಿದ ಮುನ್ನೂರು ರಾಮಾಯಣಗಳಾಗಿರಕೂಡದು! ಇಂತಹ ಧೋರಣೆಯು ಸಮಗ್ರತೆಗೆ, ಐಕ್ಯತೆಗೆ, ಸಾಧನವಲ್ಲ. ಮಂಗೋಲಿಯಾದಲ್ಲೂ ಛಿದ್ರತೆಯ ಅಂಶಗಳಿರಬಹುದು, ಆದರೆ ಅದನ್ನು ಸರಿಪಡಿಸಿಕೊಳ್ಳಲು ಹೊರಗೆಲ್ಲೋ ಅಲ್ಲಿಯ ಜನ ದೃಷ್ಟಿ ಹರಿಸುವುದಿಲ್ಲ. ನಮಗಾದರೋ ಇಂಗ್ಲಿಷ್-ವಾಷಿಂಗ್‌ಟನ್-ರೋಮ್-ಮೆಕ್ಕಾ-ಕಾಶಿ-ಸಂಸ್ಕೃತ ಹೀಗೆ ಯಾವಾವುದೋ ಅಪ್ರಯೋಜಕ ಪರಿಕರಗಳು. ಒಂದು ದೊಡ್ಡ ರೋಡ್‌ರೋಲರ್ ತಂದು ಎಲ್ಲವನ್ನೂ ಸಮ ಮಾಡಿಬಿಡಬೇಕೆಂದು ಆಗ್ರಹಿಸುವವರೂ ಇದ್ದಾರೆ; ಏಕಭಾಷೆ - ಏಕದೇವತೆ - ಏಕನಾಯಕ ಎಂಬ ತತ್ತ್ವ ಅವರದು. ಆದರೆ ಫ್ಯಾಸಿಸ್ಟ್ ತತ್ತ್ವಗಳಿಗೆ ಚಿರಕಾಲ ಬಾಳುವ ಯೋಗ್ಯತೆ ಇಲ್ಲವಲ್ಲ ಎಂಬುದೇ ಸಮಾಧಾನದ ಸಂಗತಿ.

ಕ್ರಿ. ಶ. ೨೧ನೆಯ ಶತಮಾನದ ಸನ್ನಿವೇಶವು ಕ್ರಿ. ಪೂ. ೨೧ನೆಯ ಶತಮಾನದಲ್ಲೂ ನಮ್ಮಲ್ಲಿದ್ದುದು ಒಂದು ವಿಶೇಷ. ಅಂದು ವೈದಿಕ ಆರ್ಯರು ಇಲ್ಲಿಯ ಬುಡಕಟ್ಟು ಜನರನ್ನು (ಪಂಚಜನಾಃ, ಪಣಿಗಳು, ಇತ್ಯಾದಿ) ಮೂದಲಿಸಿ ''ಅವರು ಕತ್ತಲಲ್ಲೇ ಮುಳುಗಿ ಬಿದ್ದಿರಲಿ'' ಎಂದು ಹಾರೈಸಿದರು (ಅಚಿತ್ರೇ ಅಂತಃ ಪಣಯಃ ಸಸಂತು ಅಬುಧ್ಯಮಾನಾ ತಮಸೋ ವಿ ಮಧ್ಯೇ), ಇಂದು ಅದನ್ನೇ ಕನ್ನಡದ ಶ್ರೇಯಸ್ಸನ್ನು ಬಯಸುವವರಿಗೆ ಇನ್ಫೋಸಿಸ್‌ನ ನಾರಾಯಣಮೂರ್ತಿಯಂಥವರು ಹೇಳುತ್ತಾರೆ. ಅದನ್ನೇ ಛತ್ತೀಸ್‌ಗಢ, ಒಡಿಶಾ ಮುಂತಾದೆಡೆಗಳ ಬುಡಕಟ್ಟು ಜನರಿಗೂ ಹೇಳುತ್ತಿದ್ದೇವೆ. ರಾಷ್ಟ್ರದ ಐಕ್ಯತೆಯ ಅಜೆಂಡಾದಲ್ಲಿ ಅವರನ್ನೆಲ್ಲಾ ಹೊರತುಪಡಿಸಿಬಿಟ್ಟಿದ್ದೇವೆ!

ರಾಷ್ಟ್ರೀಯತೆ ಎನ್ನುವುದು ''ಸಾಮೂಹಿಕ ಹುಚ್ಚುತನಕ್ಕೆ ಇನ್ನೊಂದು ಹೆಸರು'' ಎಂದು ಬರ್ಟ್ರಂಡ್ ರಸೆಲ್ ಹೇಳಿದ್ದುದುಂಟು. ಅಂದರೆ, ಅದು ಅತಾರ್ಕಿಕವಾದ್ದು, ಜನಗಳನ್ನು ಒಡೆಯುವಂಥದು, ಎಂಬುದು ಆತನ ಅನಿಸಿಕೆ. ಅಸ್ಮಿತೆ ಇರುವುದೊಂದೇ, ಅದು ಮಾನವ ಜನಾಂಗ ಎಂಬುದು; ಭೌಗೋಳಿಕವಾಗಿ ಈ ಮಾನವ ಜನಾಂಗ ಆಫ್ರಿಕ, ಏಷ್ಯ, ಯೂರೋಪ್ ಹೀಗೆ ಹಂಚಿಹೋಗಿದೆ, ಅಷ್ಟೆ. ಈ ಭೌಗೋಳಿಕ ಭಿನ್ನತೆಯು ಜನಾಂಗೀಯ ದ್ವೇಷಗಳಿಗೂ ಎಡೆಮಾಡಿಕೊಟ್ಟಿದೆ, ಅದು ಅಪರಿಹಾರ್ಯವಲ್ಲ ಎಂಬುದು ಆತನ ವಾದ. ೧೯೬೦ರ ದಶಕದಲ್ಲಿ ಭಾಷಾಶಾಸ್ತ್ರಜ್ಞ ಎಸ್. ಎಂ. ಕತ್ರೆ ಪದೇ ಪದೇ ಒಂದು ಸಲಹೆ ನೀಡುತ್ತಿದ್ದರು: ''ಭಾರತಮಾತೆ'' ಎಂಬ ಪ್ರತಿಮೆಯನ್ನು ಜನಮಾನಸದಲ್ಲಿ ಪ್ರತಿಷ್ಠಾಪಿಸಿದರೆ ಎಲ್ಲವೂ ಸುಗಮವಾಗಿರುತ್ತದೆ, ಸುಸಂಸ್ಕೃತವಾಗಿರುತ್ತದೆ, ಎಂದು. ಇದು ಮತ್ತೆ ಕೆಲವು ಶಿಷ್ಟರ ಸಂವೇದನೆಯಾಗಿರುತ್ತದೆಯೇ ವಿನಾ ಶಿಷ್ಟೇತರ ಶಿಷ್ಟರಲ್ಲಿ ಹುಮ್ಮಸ್ಸು ಮೂಡಿಸುವುದಿಲ್ಲ. ಬೇರೆಲ್ಲ

(೬ನೇ ಪುಟಕ್ಕೆ)

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆಗಳಿಗಾಗಿ
ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

*ಸಂಪಾದಕೀಯ (೫ನೇ ಪುಟದಿಂದ)*

ಪ್ರಕ್ರಿಯೆಗಳಿಂದಲೂ ಹೊರಗಿರಿಸಲ್ಪಟ್ಟಿರುವವರು ಕತ್ರೆ ಸೂತ್ರದ ಬಂಧನಕ್ಕೆ ಸಿಲುಕುವುದಿಲ್ಲ. ಶ್ರೀರಾಮಚಂದ್ರ, ರವಿಶಂಕರ ಗುರು, ಗೋಮಾತೆ, ಜಾಗತೀಕರಣದ ತಥಾಕಥಿತ ಸೊಗಸು ಹೀಗೆ ಯಾವುದನ್ನು ಮುಂದು ಮಾಡಲು ಯತ್ನಿಸಿದರೂ ಅದೆಲ್ಲಾ ವಿಭಾಗೀಯ ಆಶಯಗಳಿಗೆ ತ್ರಾಣ ನೀಡಬಲ್ಲವೇ ಹೊರತು ಇಡೀ ಸಮುದಾಯದ ಭಾವನೆಯಾಗಿ ಸ್ಥಾಪಿಸಿಕೊಳ್ಳುವುದಿಲ್ಲ.

ಹೀಗಿರುವಲ್ಲಿ ನಮ್ಮ ಆಯ್ಕೆಗಳು ಬಹಳ ಸೀಮಿತ : ಪ್ರಾದೇಶಿಕ ಅಸ್ಮಿತೆಗಳನ್ನು ಗೌರವಿಸುವುದು, ಪೋಷಿಸುವುದು; ಅದು ರಾಷ್ಟ್ರೀಯತೆಗೆ ಮೊದಲ ಮೆಟ್ಟಿಲು. ಅಶ್ವಮೇಧ ಯಾಗ ಮಾಡಿ ಹಿಂದೆ ಸಮುದ್ರಗುಪ್ತನಂತಹ ಸಾಮ್ರಾಟರು ದೇಶವನ್ನು ಒಗ್ಗೂಡಿಸಿದರು ಎಂದು ಚರಿತ್ರೆಯ ಪುಸ್ತಕದಲ್ಲಿ ಬರೆದು ಅದನ್ನು ಮಕ್ಕಳಿಗೆ ಬೋಧಿಸುವುದು ಬಾಲಿಶತನ, ಸುಳ್ಳು ಕಲ್ಪನೆ. ಅದನ್ನು ಪರೀಕ್ಷೆಯಲ್ಲಿ ಮಕ್ಕಳು ಬೇಕಾದರೆ ಹಾಗೆಯೇ ಬರೆಯುತ್ತವೆ, ಆದರೆ ಮನಸ್ಸಿನಾಳಕ್ಕೆ ಅದು ನಾಟುವುದಿಲ್ಲ. ''ಸಾವಿರ ಹೂವುಗಳು ಅರಳಲಿ'' ಎಂದು ಮಾವೋ ತ್ಸೆ ತುಂಗ್ ಹೇಳುತ್ತಿದ್ದ; ಸ್ವತಃ ಆತ ಅವನ್ನು ಅರಳಿಸಿದನೋ ಇಲ್ಲವೋ ಅದು ಬೇರೆ ವಿಷಯ. ನಮ್ಮಲ್ಲಂತೂ ಅದು ಅರಳಲೇಬೇಕು. ಸಂಸ್ಕೃತಿ, ರಾಷ್ಟ್ರೀಯತೆ, ಐಕ್ಯತೆ ಎಂಬುವಕ್ಕೆ ಶೋಭೆ ಕೂಡಿಬರುವುದು ಆಗಲೇ. ನಮ್ಮದು ಅನೇಕ ರಾಷ್ಟ್ರಗಳ ಒಂದು ಪ್ರಭುತ್ವ; ಅಂದರೆ, ಪ್ರಾದೇಶಿಕತೆಗಳೆಲ್ಲಾ ಕೂಡಿ ಬಾಳಲೆಳಸುವ ತಂತ್ರ. ಅದನ್ನು ಸುಮ್ಮನೆ ಅನೇಕ ರಾಜ್ಯಗಳಿರುವ ಒಂದು ರಾಷ್ಟ್ರ ಪ್ರಭುತ್ವ ಎಂದು ವ್ಯಾಖ್ಯಾನಿಸಿಕೊಂಡರೆ ಐಕ್ಯತೆಯ ಮರೀಚಿಕೆ ಹಾಗೆಯೇ ಉಳಿದಿರುತ್ತದೆ. ಸಹನೆ, ಪರಸ್ಪರ ಆದರ, ಭ್ರಾತೃತ್ವ, ಇವು ರಾಷ್ಟ್ರೀಯ ಐಕ್ಯತೆಗೆ ಸಾಧನಗಳು.

ಖ್ಯಾತ ರಷ್ಯನ್ ಸಾಹಿತಿ ಚೆಕೋವ್ ಒಮ್ಮೆ ನುಡಿದಿದ್ದ: ''ರಾಷ್ಟ್ರೀಯ ವಿಜ್ಞಾನ ಎಂಬುದೇನೂ ಇಲ್ಲ; ರಾಷ್ಟ್ರೀಯ ಮಗ್ಗಿ ಎಂಬುದಿಲ್ಲವಲ್ಲಾ, ಹಾಗೆ. ಎರಡು-ಎರಡು ನಾಲ್ಕೆಂಬುದು ರಾಷ್ಟ್ರೀಯವಲ್ಲ. ಹಾಗೇನಾದರೂ ರಾಷ್ಟ್ರೀಯವೆಂದು ಅದು ಪ್ರತ್ಯೇಕಗೊಂಡರೆ ಅದು ವಿಜ್ಞಾನವೆನಿಸಿಕೊಳ್ಳುವ ಅರ್ಹತೆ ಕಳೆದುಕೊಳ್ಳುತ್ತದೆ.'' ಇದು ರಾಷ್ಟ್ರೀಯತೆಯ ನಿರಾಕರಣೆಯಲ್ಲ. ಅದರ ಮಿತಿಗಳ ಸ್ಪಷ್ಟ ಪರಿಗಣನೆ. ಅನಿವಾರ್ಯ ಪರಿಗಣನೆ ಎಂದರೂ ಆದೀತು.

[signature]

---

*ಈ ತಿಂಗಳು (೩ನೇ ಪುಟದಿಂದ)*

ಬುದ್ಧಿಜೀವಿ ಎನ್. ರಾಂ ಆಗಿರುವುದರಿಂದ ಅದನ್ನು ಯಾರೂ ವೇದ ವಾಕ್ಯಕ್ಕಿಂತಲೂ ಕೆಳಮಟ್ಟದ ಶಾಸ್ತ್ರವೆಂದು ಹೇಳಬಾರದಲ್ಲ! ಅಂತೂ ಎನ್. ರಾಂ ಎಂಬ ಧೀಮಂತನು ಅರುಣ್ ಶೌರಿಯ ತಮ್ಮನೆಂಬುದು ಖಚಿತವಾಯಿತು. ಶೌರಿಯ ಶೂರತ್ವವು ಸಾರ್ವಜನಿಕ ವಲಯದ ಉದ್ಯಮಗಳನ್ನು ಬಿಡಿಗಾಸಿಗೆ ಹರಾಜು ಹಾಕುವುದಾಗಿತ್ತು. ನಿದರ್ಶನಗಳು 'ಹೊಸತು' ಓದುಗರಿಗೆ ಅನಗತ್ಯ, ಅವು ಅಷ್ಟು ಪ್ರಖ್ಯಾತ. ಇತ್ತೀಚೆಗೆ 'ದಿ ಹಿಂದು' ಪತ್ರಿಕೆಯು ಶೌರಿಯ ಶೌರ್ಯದಷ್ಟೇ ಹೀನವಾದ ಸಿದ್ಧಾಂತವನ್ನು ತನ್ನ ಒಂದು ಸಂಪಾದಕೀಯ ಲೇಖನದಲ್ಲಿ ಪ್ರತಿಪಾದಿಸಿದೆ. ಹಾಲಿ ಪ್ರಚಲಿತವಾಗಿರುವ ಕೇಂದ್ರದ ಬಜೆಟ್‌ನಲ್ಲಿ ಸಾರ್ವಜನಿಕ ಉದ್ಯಮಗಳಿಂದ ನಲವತ್ತು ಸಾವಿರ ಕೋಟಿಗಳಷ್ಟು ರೂಪಾಯಿಗಳನ್ನು ಹಿಂತೆಗೆದುಕೊಂಡು, ಅಂದರೆ ಅಷ್ಟು ಷೇರುಗಳನ್ನು ಖಾಸಗಿಯವರಿಗೆ ವರ್ಗಾಯಿಸಿ, ವರ್ಷದ ಅಂದಂದಿನ ವೆಚ್ಚಕ್ಕೆ ಅಷ್ಟು ಹಣವನ್ನು ಬಳಸಬೇಕೆಂದು ಹೇಳಲಾಗಿತ್ತು. ಜನರ ಸಂಪತ್ತನ್ನು ಕಡಲೆಕಾಯಿ ಸಿಪ್ಪೆಯೆಂದು ಬಗೆದಿರುವವರ ಉಜ್ವಲ ಆರ್ಥಿಕ ನೀತಿ ಇದು. 'ದಿ ಹಿಂದು' ಪತ್ರಿಕೆಯ ಸಂತಾಪಕ್ಕೆ ಕಾರಣ ಅದಲ್ಲ. ನಲವತ್ತು ಸಾವಿರ ಕೋಟಿ ಮುಳುಗಿಸಬೇಕಾಗಿದ್ದ ಕಡೆ ಈವರೆಗೆ ಈ ವರ್ಷ ಇನ್ನೂ ೧೮೦೦ ಕೋಟಿ ಮಾತ್ರ ಮುಳುಗಿಸಲಾಗಿದೆ ಎಂಬುದು ಅದರ ವ್ಯಥೆಗೆ ಕಾರಣ. ಸಾರ್ವಜನಿಕ ಸಂಪತ್ತು ಶೇಖರವಾಗಿರುವ ಹಡಗಿಗೆ ಇಷ್ಟು ಚಿಕ್ಕ ತೂತು ಕೊರೆಯುವುದು ಒಳ್ಳೆಯ ಆರ್ಥಿಕ ನೀತಿ ಯಲ್ಲವೆಂಬುದು ಈ ವರ್ಷದ ಬಜೆಟ್ಟಿನ ''ಪ್ರಗತಿಪರ-ಜನಪರ'' ಚಿಂತನೆಯಾಗಿದೆ! ರಾಂ ನೇತೃತ್ವದಲ್ಲಿ ಅವರ ಪತ್ರಿಕೆಯ ಪ್ರಗತಿಪಥ ಎಷ್ಟು ರಮ್ಯವಾಗಲಿದೆ ಎಂಬುದಕ್ಕೆ ಇದು ಸೂಚನೆ ಎನ್ನೋಣವೇ ? ಹತ್ತು ವರ್ಷಗಳ ಕಾಲ ಯಾವ ತೆರಿಗೆಯನ್ನೂ ನೀಡದೆ ಹಿಮಾಲಯದಷ್ಟು ಲಾಭ ಮಾಡಿಕೊಂಡಿರುವ ಮಾಹಿತಿ ತಂತ್ರಜ್ಞಾನ ಉದ್ಯಮಕ್ಕೆ ಶೇ. ೫ ರಷ್ಟು ತೆರಿಗೆ ವಿಧಿಸಿದ್ದರೆ ನಲವತ್ತು ಸಾವಿರ ಕೋಟಿ ಎಂದೋ ಬಂದಿರುತ್ತಿತ್ತು. ಆ ಕಂಪನಿಗಳಿಗೆ ಕೊಡಲಾಗಿರುವ ಸೌಲಭ್ಯಗಳಿಗೆ ಇಂತಿಷ್ಟು ಎಂದು ಕ್ರಯ ವಸೂಲು ಮಾಡಿದ್ದಿದ್ದರೆ ಅದರ ಮೂರರಷ್ಟು ಸಂಗ್ರಹವಾಗುತ್ತಿತ್ತು.

* * *

ನ್ಯಾಯಾಲಯವು ದೇಶದ ಜನರ ಬಗ್ಗೆ ಕನಿಕರ ತೋರುವುದು ಈಚೀಚೆಗೆ ಸ್ವಲ್ಪ ಅಪರೂಪವೇ. ಕೆಲವೊಮ್ಮೆ ಅದು ಹೇಗೋ ಜನರ ಇರುವಿಕೆಯು ಥಟಕ್ಕನೆ ಹೊಳೆಯುತ್ತದೆ. ೧೯ನೆಯ ಶತಮಾನದಲ್ಲಿ ಬ್ರಿಟಿಷರು ಜಾರಿಗೆ ತಂದಿದ್ದ ಒಂದು ಕಾನೂನು ನಮ್ಮಲ್ಲಿ ಈಗಲೂ ಆಳುವ ವರ್ಗದ ಬತ್ತಳಿಕೆಯಲ್ಲಿ ಸ್ಥಿರವಾಗಿ ಕೂತಿದೆ; ಜನರಿಗೆ ಸೇರಿದ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವ ಸ್ವಾತಂತ್ರ್ಯ ಸರ್ಕಾರಕ್ಕಿದೆ, ಎಂಬುದು ಆ ಕಾನೂನು. ''ಸಾರ್ವಜನಿಕ ಹಿತಕ್ಕಾಗಿ'' ಎಂದು ಆಜ್ಞೆಯಲ್ಲಿ ಬರೆದರೆ ಮುಗಿಯಿತು, ಯಾವ ಭೂಮಿಯನ್ನು ಎಷ್ಟು ಪ್ರಮಾಣದಲ್ಲಿಯಾದರೂ ಸ್ವಾಧೀನ ಪಡಿಸಿಕೊಂಡು ಸರ್ಕಾರವು ಮಾಲೀಕನನ್ನು ಚರಂಡಿಗೆ ತಳ್ಳಬಹುದು ಎಂಬುದು ಅದರರ್ಥ. ಹೀಗೆ ಸ್ವಾಧೀನ ಪಡಿಸಿಕೊಂಡ ಭೂಮಿಯನ್ನು ಖಾಸಗಿಯವರಿಗೆ ಕೊಟ್ಟು ''ದೇಶದ ಅಭಿವೃದ್ಧಿಗಾಗಿ ಅದನ್ನು ಬಳಸಿ'' ಎಂದು ಹೇಳುವುದು ವಾಡಿಕೆ. ಮುಂದೆ ಅವರೇನು ಮಾಡುತ್ತಾರೆ ಎಂಬುದು ಇಂದಿನ ಚರಿತ್ರೆ ವಿಪುಲವಾಗಿ ತಿಳಿಸಿದೆ. ಅದು ಸರಿಯಲ್ಲ, ೧೯ನೆಯ ಶತಮಾನದ ಕಾನೂನನ್ನು ಬಿಸಾಡಿ, ವರ್ತಮಾನದ ಅಗತ್ಯಕ್ಕೆ ತಕ್ಕಂತೆ ಅದನ್ನು ಬದಲಾಯಿಸಿ, ಎಂದು ನ್ಯಾಯಾಲಯ ಹೇಳಿದೆ. ಅದಕ್ಕೇ ಹೇಳಿದ್ದು, ಜನರು ಅಸ್ತಿತ್ವದಲ್ಲಿದ್ದಾರೆಂಬ ಅರಿವು ಸ್ವಾಗತಾರ್ಹ ಎಂದು. ಆದರೆ, ...., ಓ, ಅದು ದೊಡ್ಡ ಆದರೆ! ನಮ್ಮ ವಿಖ್ಯಾತ ಉದ್ಯಮಿಗಳಿದ್ದಾರಲ್ಲ, ಅವರು ದೇಶದ ''ಅಭಿವೃದ್ಧಿ''ಗಾಗಿ ಟೊಂಕಕಟ್ಟಿ ನಿಂತಿದ್ದಾರೆ; ಭೂಮಿ ಸ್ವಾಧೀನಪಡಿಸಿಕೊಳ್ಳದೆ ಹೇಗೆ ತಾನೆ ಅವರ ಕರ್ತವ್ಯ ಪಾಲನೆ ಸಾಧ್ಯ ! ಆದ್ದರಿಂದ ಅವರು ಹೇಳುತ್ತಾರೆ, ೧೯ನೆಯ ಶತಮಾನದ ಕಾನೂನನ್ನು ಬದಲಾಯಿಸುವ ಶಾಸನ ಸರ್ವಥಾ ಕೂಡದು, ಎಂದು. ಅಂಥದೊಂದು ಪ್ರಚಂಡ ಶಾಸನವನ್ನೇನೂ ಲೋಕಸಭೆಯಲ್ಲಿ ಯಾರೂ ಮಂಡಿಸಿಲ್ಲ, ಎಂಥದೋ ಅರೆಮನಸ್ಸಿನ ಒಂದು ಶಾಸನದ ಕರಡು ಹೊರಬಂದಿದೆ, ಅಷ್ಟೆ. ಅದು ಅಂಗೀಕೃತವಾದರೆ ''ಇನ್ನು ನೂರು ವರ್ಷ ನಮ್ಮ ದೇಶದಲ್ಲಿ ಎಂಥ ಅಭಿವೃದ್ಧಿಯೂ ಆಗುವುದಿಲ್ಲ'' ಎಂದು ಉದ್ಯಮಿ ದೇಶಭಕ್ತರು ಚಿಂತೆಗೊಳಗಾಗಿದ್ದಾರೆ! ಅವರ ಪ್ರಕಾರ ಭೂಮಿಯನ್ನು ಸ್ವಾಧೀನಪಡಿಸಿಕೊಂಡಾಗ ಮಾರುಕಟ್ಟೆ ಬೆಲೆಗಿಂತ ಸ್ವಲ್ಪವೂ ಜಾಸ್ತಿ ಪರಿಹಾರ ಕೊಡಕೂಡದು, ಭೂಮಿ ಕಳೆದುಕೊಳ್ಳುವವರಿಗೆ ಪುನರ್ವಸತಿ ಅಥವಾ ಜೀವನಕ್ಕೆ ಪರ್ಯಾಯ ಆಧಾರ ಕೊಡಲು ಸಾಧ್ಯವಿಲ್ಲ. ಫಿಕ್ಕಿ ಎಂಬ ಗುಂಪಿನ ಪ್ರಿಯಾ ಎಂಬಾಕೆ ಹೇಳುತ್ತಾಳೆ, ಸ್ವಯಂಪ್ರೇರಣೆಯಿಂದ ರೈತನೊಬ್ಬ ಭೂಮಿ ಮಾರುವಾಗ ಎಷ್ಟು ಹಣ ಪಡೆಯುತ್ತಾನೋ ಅದೇ ಸರಿಯಾದ ಮೊತ್ತ, ಎಂದು. ಇವರ ಹುನ್ನಾರವೇನು ? ಕತ್ತರಿಗೆ ಸಿಕ್ಕಿಸಿ ರೈತನು ಭೂಮಿ ಮಾರಲೇಬೇಕಾದ ಸನ್ನಿವೇಶ ಸೃಷ್ಟಿಸುವುದು, ಆಗ ಕಡಿಮೆ ಬೆಲೆಗೆ ಅವನಿಂದ ಭೂಮಿ ಕಿತ್ತುಕೊಂಡು ಅವನನ್ನು ಯಾವುದೋ ನಗರದ ಕೊಳಚೆ ಪ್ರದೇಶಕ್ಕೆ ಅಟ್ಟುವುದು. ಅದು ''ಅಭಿವೃದ್ಧಿ ಸೂತ್ರ'' ಮತ್ತು ಅದನ್ನು ಘೋಷಿಸುವ ಉದ್ಯಮಗಳ ಕ್ರಿಮಿಗಳು ''ಅಭಿವೃದ್ಧಿ''ಯ ಅಧ್ವರ್ಯುಗಳು ! ಸರ್ಕಾರ ರಚಿಸಿರುವ ಶಾಸನದ ಕರಡನ್ನು ಪ್ರತಿಯೊಂದು ರೈತ ಸಮುದಾಯಕ್ಕೂ ಪರಿಚಯಿಸುವುದು ಮತ್ತು ಉದ್ಯಮದ ಮೊಸಳೆಗಳ ಟೀಕೆಯನ್ನು ಅವುಗಳ ಗಮನಕ್ಕೆ ತರುವುದು ರೈತ ಹೋರಾಟಗಳ ಪ್ರಾಥಮಿಕ ಕರ್ತವ್ಯವಾಗಿದೆ, ಅವಿಭಾಜ್ಯ ಅಂಗವಾಗಿದೆ.

* * *

ಮಧ್ಯಯುಗದ ಯೂರೋಪಿನ ಒಂದು ಸಾಂಪ್ರದಾಯಿಕ ಮೊಂಡುತನದ ಬಗ್ಗೆ ಹಲವು ದಶಕಗಳಿಂದ ನಗೆಹನಿಗಳು ಸುರಿಯುತ್ತಾ ಬಂದಿವೆ. ಮಹಿಳೆಯನ್ನು ಪ್ರತಿಬಂಧಿಸುವ ಪ್ರಕ್ರಿಯೆಗೆ ಸಂಬಂಧಿಸಿದ ಸಮಾಚಾರ ಅದು. ಅವಳ ಪಾತಿವ್ರತ್ಯದ ಬಗ್ಗೆ ಎಲ್ಲಿಲ್ಲದ ಕಾಳಜಿ ಮತ್ತು ಅದಕ್ಕಾಗಿಯೇ ನಿರ್ಮಿಸಲಾದ ಸೊಂಟದ ಕೆಳಗಿನ ಸರಪಳಿ ಮತ್ತು ಬೀಗ ಆ ನಗೆಹನಿಯ ಕೇಂದ್ರಬಿಂದು. ಪರ ಊರಿಗೆ ಹೋಗುವಾಗ ಬೀಗ ಹಾಕಿ ಬೀಗದ ಕೈ ತೆಗೆದುಕೊಂಡು ಹೋಗುವುದು ಪತಿರಾಯನ ಪದ್ಧತಿ. ಯಾರೋ ಒಬ್ಬ ಅಂತಹ ಯಜಮಾನ ಇನ್ನೆಲ್ಲಿ ಬೀಗದ ಕೈ ಕಳೆದುಹೋಗುತ್ತದೋ ಎಂಬ ಭಯದಿಂದ ಪರ ಊರಿಗೆ ತೆರಳುವ ಮುನ್ನ ಬೀಗದಕೈಯನ್ನು ಜೋಪಾನವಾಗಿ ನೋಡಿಕೊಳ್ಳಬೇಕೆಂದು 'ಶುದ್ಧ' ಚಾರಿತ್ರ್ಯದ ಆ ಊರಿನ ಪಾದ್ರಿಗೆ ಕೊಟ್ಟು ಕುದುರೆ ಹತ್ತಿ ಹೊರಟನಂತೆ. ಬಹಳ ದೂರವೇನೂ ಹೋಗಿರಲಿಲ್ಲ, ಪಾದ್ರಿ ಹಿಂದಿನಿಂದ ಇನ್ನೊಂದು ಕುದುರೆಯ ಮೇಲೆ ನಾಗಾಲೋಟದಿಂದ ಬಂದು ಅವನನ್ನು ನಿಲ್ಲಿಸಿದ. ''ಏನಯ್ಯಾ, ಯಾವುದೋ ತಪ್ಪು ಬೀಗದ ಕೈ ಕೊಟ್ಟು ಬಂದಿರುವೆಯಲ್ಲಾ, ಇದೇನು ನಿನ್ನ ಆಚಾತುರ್ಯ'' ಎಂದನಂತೆ! ನಮ್ಮ ರಾಜ್ಯದ ವಿಶ್ವವಿದ್ಯಾಲಯಗಳಲ್ಲಿ ಆಡಳಿತಾಧಿಕಾರಿಗಳ ನೇಮಕ ನಡೆಯುತ್ತಿರುವ ವಿಧಾನ ನೋಡಿದರೆ ನಾವು ಆಯ್ಕೆ ಮಾಡುತ್ತಿರುವುದು ಆ ಮಧ್ಯಯುಗದ ಪಾದ್ರಿಗಳ ತದ್ರೂಪಿಗಳನ್ನು ಎನಿಸಿ ಸಂಕೋಚವೆನಿಸುತ್ತದೆ. ಯಜಮಾನ ಒಂದು

ಗಾವುದ ಹೋಗುವ ಮೊದಲೇ ಈ ಅಧಿಕಾರಿಗಳು ಕೀಲಿ ಬಳಸಿ ಏನೆಲ್ಲಾ ಭೋಗಿಸಿಬಿಡಬಹುದೆಂಬ ಲೆಕ್ಕಾಚಾರದಲ್ಲಿ ಮುಳುಗಿಹೋಗಿದ್ದಾರೆ. ಅದೇ ಸಂಕೋಚಕ್ಕೆ ಕಾರಣ.

* * *

ಪರಪ್ಪನ ಅಗ್ರಹಾರ ವಾಸ ಮುಗಿಸಿ ಬಂದಿರುವ ಯಡಿಯೂರಪ್ಪ ಯದ್ವಾತದ್ವ ಎಗರಾಡುತ್ತಿದ್ದಾರೆ. ತಮ್ಮನ್ನು ಈ ದುಸ್ಥಿತಿಗೆ ತಂದವರು ಭಾಜಪ ನಾಯಕರುಗಳು ಮಾಜಿ ಲೋಕಾಯುಕ್ತ ಸಂತೋಷ ಹೆಗ್ಡೆ ಎಂದು ಕಂಡಕಂಡವರ ಮೇಲೆ ಆರೋಪ ಹೊರಿಸುತ್ತಿದ್ದಾರೆ. ತಮ್ಮ ಬೆಂಬಲಿಗರ ಜೊತೆ ಕಾರಸ್ಥಾನ ನಡೆಸುತ್ತಿದ್ದಾರೆ. ಸಚಿವ ರೇಣುಕಾಚಾರ್ಯ ಈಗ ಯಡಿಯೂರಪ್ಪನ ಕಟ್ಟಾಅಭಿಮಾನಿ, ಮಂಚೂಣಿಯಲ್ಲಿ ಇದ್ದಾರೆ. ಇವರ ನಿಜವಾದ ಬಣ್ಣ ಇಲ್ಲಿ ಪ್ರಸ್ತಾಪಿಸುವುದು ಅನಗತ್ಯ. ಯಡಿಯೂರಪ್ಪ ಜೈಲಿನಿಂದ ಬಿಡುಗಡೆಯಾದಾಗ ಅವರ ಬೆಂಬಲಿಗರು ನಡೆಸಿದ ಆಟಾಟೋಪ, ಮೆರವಣಿಗೆ, ಹಲಸೂರಿನಲ್ಲಿರುವ ದೇವಸ್ಥಾನದಲ್ಲಿ ಪೂಜೆ, ಮನೆಗೆ ಪಾದಯಾತ್ರೆ ಎಲ್ಲ ಅಸಹ್ಯ ಹುಟ್ಟಿಸುವಂತಿತ್ತು. ಸಚಿವರುಗಳ, ಶಾಸಕರ ದಂಡಿನ ಕಾರುಗಳೋಟ ಬೆಂಗಳೂರಿನ ಟ್ರಾಫಿಕ್ ಜಾಮಿಗೆ ಎಡೆಕೊಟ್ಟು ಸಹಸ್ರಾರು ಸಾರ್ವಜನಿಕರು ಗಂಟೆಗಟ್ಟಲೆ ಕಾದು ಶಪಿಸುವಂತಾಯಿತು. ಇದು ಅವರ ಬಲ ಪ್ರದರ್ಶನದ ವೈಖರಿ. ಸುಮ್ಮನೆ ಕೂಡುವವನಲ್ಲ ಈತ, ಅಧಿಕಾರ ದಕ್ಕಿಸಿಕೊಳ್ಳಲು ಏನು ಬೇಕಾದರೂ ಮಾಡಲು ಸಿದ್ಧ. ಒಮ್ಮೆ ಅಧಿಕಾರದ ಸವಿ ಉಂಡು ಭಂಡಾರವನ್ನೇ ಲೂಟಿ ಹೊಡೆಯಲು ಹೋಗಿ ಸಿಕ್ಕಿಕೊಂಡರೂ ದುರಾಶೆ ಮಾತ್ರ ಈತನಿಗೆ ತಗ್ಗಿಲ್ಲ.

* * *

ನಮ್ಮ ಬಡದೇಶ ಭಾರತದಲ್ಲಿ ಶ್ರೀಮಂತರ ಅಟ್ಟಹಾಸಕ್ಕೆ ಕಡಿವಾಣವೇ ಇಲ್ಲ. ಇವರ ಮೋಜಿಗಾಗಿ, ಜೂಜಿಗಾಗಿ ಕುದುರೆಗಳು ಸಾಲದಾಗಿ ಈಗ ವೇಗವಾಗಿ ಓಡುವ ಫಾರ್ಮುಲಾ-೧ ಕಾರುಗಳು ಬಂದಿವೆ. ಅದಕ್ಕಾಗಿ ಸಾವಿರಾರು ಕೋಟಿ ರೂಪಾಯಿಗಳನ್ನು ಚೆಲ್ಲಿ ದೆಹಲಿಯ ಹೊರಗಿರುವ ಉತ್ತರಪ್ರದೇಶದಲ್ಲಿರುವ ನೋಯ್ಡಾದಲ್ಲಿ ನೂರಾರು ಎಕರೆ ಜಮೀನು ಕಬಳಿಕೆಯಾಗಿದೆ. ಕ್ರಿಕೆಟ್ ಹುಚ್ಚನ್ನು ಟ್ವೆಂಟಿ-೨೦, ಡೇ ಅಂಡ್ ನೈಟ್ ಪಂದ್ಯಗಳ ಹೆಸರಿನಲ್ಲಿ ಹರಡಿ ಕೋಟಿಗಟ್ಟಳೆ ಸಂಪಾದಿಸುತ್ತಿರುವವರೇ ಕಾರು ರೇಸ್‌ನ ಹಿಂದೆಯೂ ಇದ್ದಾರೆ. ಇವೆಲ್ಲ ನಡೆಯುತ್ತಿರುವುದು ಕ್ರೀಡೆಗೆ ಪ್ರೋತ್ಸಾಹ ನೀಡುವ ಹೆಸರಿನಲ್ಲಿ. ಒಂದೊಂದು ಫಾರ್ಮುಲಾ-೧ ಕಾರಿನ ಬೆಲೆ ಕೋಟ್ಯಂತರ ರೂಪಾಯಿಗಳು. ಇದರ ಹಿಂದಿರುವವರು ಅಂಬಾನಿಗಳು, ಮಲ್ಯ, ಶಾರೂಕ್ ಖಾನ್ ನಂಥವರು. ಕ್ರಿಕೆಟಿಗರನ್ನು ಕೊಂಡು ಸಾಕುತ್ತಿರುವಂತೆಯೇ ಇವರು ಈ ಕಾರು ರೇಸಿನ ಚಾಲಕರನ್ನು ಸೇರಿಸಿಕೊಂಡಿದ್ದಾರೆ. ಇದರಲ್ಲೂ ಇವರು ತಮ್ಮ ಜೇಬು ತುಂಬಿಸಿಕೊಳ್ಳುತ್ತಾರೆ. ಇಂಥ ದುಬಾರಿ ಹಣ ಹೂಡಿಕೆಯ ಕ್ರೀಡೆಗಳಿಗೆ ಇವರ ಹೂಡಿಕೆ. ಬಾಕಿ ಕ್ರೀಡೆಗಳಿಗೆ ನೆರವಾಗಲು ಇವರಿಗೆ ಮನಸ್ಸೇ ಬಾರದು. ಒಲಿಂಪಿಕ್ ಪಂದ್ಯಗಳಲ್ಲಿ ೧.೨ ಬಿಲಿಯ ಜನಸಂಖ್ಯೆಯ ಭಾರತಕ್ಕೆ ಚಿನ್ನದ ಪದಕ ಬಾರದಿದ್ದರೇನು ಚಿಂತೆ ಇಲ್ಲ ಇವರಿಗೆ. ತಮ್ಮ ಮೋಜು, ಜೇಬು ಮುಖ್ಯ ಇವರಿಗೆ. ಶೇಕಡ ೭೦ರಷ್ಟು ಜನ ಬಡತನದಲ್ಲಿರುವ ಈ ದೇಶದಲ್ಲಿ ದುಬಾರಿ ಕಾರೋಟ ಬೇಕಿತ್ತೆ? ಹಾಗೆಂದರೆ ಈ ಶ್ರೀಮಂತರಿಗೆ ಸಿಟ್ಟು. ಟೀಕಿಸಿದ ಕೇಂದ್ರ ಕ್ರೀಡಾ ಸಚಿವರಿಗೆ ಉದ್ಘಾಟನೆಗೆ ಆಮಂತ್ರಣವನ್ನೇ ನೀಡಲಿಲ್ಲ. ಹೀಗಿದೆ ಈ ಶ್ರೀಮಂತರ ಗಮ್ಮತ್ತು.

* * *

ಇಲೆಕ್ಟ್ರಾನಿಕ್ ಮಾಧ್ಯಮಗಳು ಬಂದಮೇಲೆ ಉತ್ಪ್ರೇಕ್ಷೆಗೇ ಹೆಚ್ಚು ಒತ್ತು. ಪ್ರಸಾರವಾಗುವ ಎಲ್ಲ ಕಾರ್ಯಕ್ರಮಗಳ ಮೇಲೆ ನಿಯಂತ್ರಣ ಜಾಹೀರಾತುದಾರರ ಕೈಯಲ್ಲಿ, ಎಲ್ಲ ಟಿ.ಆರ್.ಪಿ. ಕೃಪೆ. ಜನರಿಗೆ ಬೇಕಾಗಿರುವುದನ್ನು ನೀಡುವ ಚಾನೆಲ್‌ಗಳ ಒಡೆಯರು ತಮ್ಮ ಖಜಾನೆ ತುಂಬಿಸಿಕೊಂಡು ಶೇಕಡ ೯೦ರಷ್ಟು ಕೆಳದರ್ಜೆ ಕಾರ್ಯಕ್ರಮಗಳನ್ನು ಪ್ರಸಾರ ಮಾಡುತ್ತಿದ್ದಾರೆ. ಇದನ್ನು ಟೀಕಿಸಿದರೆ, ನಿಯಂತ್ರಣ ಹೇರಬೇಕೆಂದರೆ ಅದು ಸ್ವಾತಂತ್ರ್ಯಹರಣವಾಗುತ್ತದೆ ಇವರಿಗೆ. ಪ್ರೆಸ್ ಕೌನ್ಸಿಲ್ ಪತ್ರಿಕೆಗಳ ಮೇಲೆ ನಿಗಾ ಇರಿಸಲು ಸೃಷ್ಟಿಯಾದ ಸಂಸ್ಥೆ. ತಪ್ಪಿತಸ್ಥ ಪತ್ರಿಕೆಗಳನ್ನು ಈ ಕೌನ್ಸಿಲ್ ತರಾಟೆಗೆ ತೆಗೆದುಕೊಳ್ಳುತ್ತದೆ. ಇಂಥ ಯಾವ ಕಡಿವಾಣವೂ ಇಲೆಕ್ಟ್ರಾನಿಕ್ ಮಾಧ್ಯಮಕ್ಕಿಲ್ಲ. ಈಚೆಗೆ ಈ ಪ್ರೆಸ್ ಕೌನ್ಸಿಲ್‌ನ ಅಧ್ಯಕ್ಷರಾಗಿರುವ ಮಾರ್ಕಂಡೇಯ ಖಟ್ಜು ಅವರು ಇಲೆಕ್ಟ್ರಾನಿಕ್ ಮಾಧ್ಯಮವನ್ನು ಕಟುವಾಗಿ ಟೀಕಿಸಿ ಇದನ್ನು ಪ್ರೆಸ್ ಕೌನ್ಸಿಲ್‌ನ ಅರಿವಿಗೆ ತರಬೇಕೆಂದು ಆಗ್ರಹಿಸಿ ಮಾಧ್ಯಮಗಳ ಆಕ್ರೋಶಕ್ಕೀಡಾಗಿದ್ದಾರೆ. ದೊಡ್ಡ ವಿವಾದವೇ ಪ್ರಾರಂಭವಾಗಿದೆ. ಲಂಗುಲಗಾಮಿಲ್ಲದ ಮಾಧ್ಯಮಗಳಿಗೆ ಸೂಕ್ತ ಕಡಿವಾಣ ಏಕೆ ಬೇಡ ?

* * *

ಬಳ್ಳಾರಿ ಉಪಚುನಾವಣೆ ಭರಾಟೆ ರಂಗೇರುತ್ತಿದೆ. ಈ ಉಪಚುನಾವಣೆ ಯಾರಿಗೂ ಬೇಡವಾಗಿತ್ತು. ಇದಕ್ಕೆ ಹೊಣೆ ಸಂಪೂರ್ಣ ಭಾಜಪವೆ. ಇದು 'ಆಪರೇಷನ್ ಕಮಲ'ದ ಇನ್ನೊಂದು ಅವಾಂತರ. ಒಂದು ಬಗೆಯ ತ್ರಿಕೋಣ ಸ್ಪರ್ಧೆ. ಕಾಂಗ್ರೆಸ್ vs ಭಾಜಪ vs ಭಾಜಪ. ಏಕೆಂದರೆ, ಪ್ರಬಲ ಅಭ್ಯರ್ಥಿ ಮಾಜಿ ಸಚಿವ ಶ್ರೀ ರಾಮುಲು ಇನ್ನೂ ಭಾಜಪ ತೊರೆದಿಲ್ಲ. ಭಾಜಪ ಅಧಿಕೃತ ಪ್ರತಿನಿಧಿ ಬೇರೆಯೇ ಇದ್ದಾನೆ. ಶತಾಯಗತಾಯ ಈತನನ್ನು ಗೆಲ್ಲಿಸಲೇ ಬೇಕೆಂದು ಭಾಜಪ ಅಧ್ಯಕ್ಷ ಈಶ್ವರಪ್ಪ, ಮುಖ್ಯಮಂತ್ರಿ ಸದಾನಂದ ಗೌಡ ಒದ್ದಾಡುತ್ತಿದ್ದಾರೆ. ಈಶ್ವರಪ್ಪ ಅಂತೂ ಬಳ್ಳಾರಿಯಲ್ಲೇ ಕ್ಯಾಂಪು ಮಾಡಿದ್ದಾರೆ. ದಿನಕ್ಕೊಂದು ಹೇಳಿಕೆ ಕೊಡುತ್ತಿದ್ದಾರೆ. ಬಾಯಿಗೆ ಬಂದ ಹಾಗೆ ಮಾತಾಡುತ್ತಿದ್ದಾರೆ. ಇದು ಭಾಜಪಗೆ ಇಜ್ಜತ್ತಿನ ಸವಾಲು. ಆದರೆ ಪರಿಸ್ಥಿತಿ ಹೇಗಿದೆ ಎಂದರೆ ಗೆದ್ದರೂ ಭಾಜಪ ಸರಕಾರಕ್ಕೆ ಕುತ್ತು ಸೋತರೂ ಆಪತ್ತು. ಶ್ರೀರಾಮುಲು ರೆಡ್ಡಿ ಸಹೋದರರ ಅಖಾಡದಲ್ಲಿರುವ ಪ್ರಭಾವಿ ತಂತ್ರಗಾರ. ಆಪರೇಷನ್ ಕಮಲದ ರೂವಾರಿಗಳಲ್ಲಿ ಒಬ್ಬ. ಈತನ ಗುರು ಹೈದರಾಬಾದ್ ಜೈಲಿನಲ್ಲಿ ಕೊಳೆಯುತ್ತಿದ್ದಾನೆ. ಅಲ್ಲಿಗೇ ಹೋಗಿ ಆಶೀರ್ವಾದ ಪಡೆದಿರುವ ಶ್ರೀರಾಮುಲುಗೆ ಜಿಲ್ಲೆಯ ಎಲ್ಲ ಭಾಜಪ ಶಾಸಕರೂ ಪಾರ್ಲಿಮೆಂಟ್ ಸದಸ್ಯರು ಬೆಂಬಲ ನೀಡಿದ್ದಾರೆ. ಅವರಿಗಾಗಿ ಬಿರುಸಿನಿಂದ ಮತ ಯಾಚಿಸುತ್ತಿದ್ದಾರೆ.

ಮೊನ್ನೆ ಈಶ್ವರಪ್ಪ ಶ್ರೀರಾಮುಲು ಮತ್ತು ಅವರ ಭಾಜಪ ಬೆಂಬಲಿಗರ ಮೇಲೆ ಯದ್ವಾತದ್ವಾ ಕೂಗಾಡಿದರು. ಅವರೆಲ್ಲ ಪಾರ್ಟಿ ಬಿಟ್ಟು ತೊಲಗಲಿ ಅಧಿಕೃತ ಭಾಜಪ ಅಭ್ಯರ್ಥಿಗೆ ಬೆಂಬಲ ನೀಡದಿದ್ದರೆ, ಎಂದು ಅಬ್ಬರಿಸಿದರು. ಶಿಸ್ತಿನ ಪಕ್ಷ ಭಾಜಪ ಎಂದು ಕರೆದುಕೊಳ್ಳುವ ಭಾಜಪದ ರಾಜ್ಯ ಅಧ್ಯಕ್ಷರಾಗಿ ಶಿಸ್ತಿನ ಕ್ರಮ ಕೈಗೊಳ್ಳುವುದು ಈಶ್ವರಪ್ಪನ ಕೈಯಲ್ಲೇ ಇದೆ. ಪಾಪ ಅದು ಅವರಿಗೇ ಗೊತ್ತೇ ಇಲ್ಲವೇನೋ, ಅಥವಾ ಶಿಸ್ತಿನ ಕ್ರಮ ಕೈಗೊಳ್ಳಲು ತಾಕತ್ತಿಲ್ಲವೋ. ಅಧಿಕೃತ ಅಭ್ಯರ್ಥಿ ವಿರುದ್ಧ ನಿಂತಿರುವ ಶ್ರೀರಾಮುಲುವನ್ನೇ ಇದುವರೆಗೆ ಪಾರ್ಟಿಯಿಂದ ಹೊರಗೆ ಹಾಕಲಾಗಿಲ್ಲ, ಇನ್ನೂ ಬಾಕಿಯವರ ಮೇಲೆ ಏನು ಕ್ರಮ ಕೈಗೊಂಡಾರು. ಈಶ್ವರಪ್ಪನ ಸ್ಥಿತಿ ಇತ್ತ ದರಿ ಅತ್ತ ಪುಲಿ ಎಂಬಂತಾಗಿದೆ. ಯಾರೇ ಗೆದ್ದರೂ ಸರಕಾರದ ಅಭದ್ರತೆ ಖಚಿತ.

* * *

ಒಲ್ಲದ ಮನಸ್ಸಿನಿಂದ ಮಾಜಿ ಮುಖ್ಯಮಂತ್ರಿ, ಪರಪ್ಪನ ಅಗ್ರಹಾರ ರಿಟರ್ನ್ಡ್ ಯಡಿಯೂರಪ್ಪ (ಯಡ್ಡಿಯೂರಪ್ಪ ಅಂತಲು ಕೆಲವರು ಕರೆಯುತ್ತಾರೆ) ಬಳ್ಳಾರಿ ಉಪಚುನಾವಣೆಯಲ್ಲಿ ಪ್ರಚಾರಕ್ಕೆ ಹೊರಟಿದ್ದಾರೆ. ರೆಡ್ಡಿ ಸಹೋದರರು, ಶ್ರೀರಾಮುಲು ಯಡಿಯೂರಪ್ಪಗೆ ಆಪ್ತರಾಗಿದ್ದವರು. ಅಗತ್ಯಬಿದ್ದಾಗಲೆಲ್ಲ ಅವರ ಜೇಬಿಗೆ ಹಣ ತುಂಬುತ್ತಿದ್ದರು. ಅವರೇನು ಅದು ದುಡಿದು ಸಂಪಾದಿಸಿದ್ದಲ್ಲ, ಅಕ್ರಮ ಗಣಿಗಾರಿಕೆಯಿಂದ ಲೂಟಿ ಹೊಡೆದ ಹಣ. ಭಾಜಪದ ಆಪರೇಷನ್ ಕಮಲಕ್ಕೆ ಹಣ ಒದಗಿಸಿದವರೂ, ಬಲೆ ಬೀಸಿದವರೂ ಇವರುಗಳೇ ಎಂದು ಅಂಬೋಣ. ಈಗ ಪಾಪ ಅವರಿಗೂ ಫಜೀತಿ, ಯಡಿಯೂರಪ್ಪಗೂ ಇಕ್ಕಟ್ಟು. ಹಲಸೂರು ದೇವಸ್ಥಾನದಿಂದ ಪ್ರಾರಂಭವಾಗಿ ತಿರುಪತಿ ತಿಮ್ಮಪ್ಪನವರೆಗೆ ಕಂಡ ಕಂಡ ದೈವಗಳಿಗೆಲ್ಲ ಕೈ ಮುಗಿದು ಕೊನೆಗೆ ಹಿಮಾಲಯದ ವೈಷ್ಣೋದೇವಿಗೆ ಶರಣಾಗಿ ನೇರ ಬಳ್ಳಾರಿ ಉಪಚುನಾವಣೆಯಲ್ಲಿ ಧುಮುಕಿದ್ದಾರೆ ಮಾಜಿ ಮುಖ್ಯಮಂತ್ರಿ. ಕಾರಾಗೃಹವಾಸ ಮುಗಿದ ಮೇಲೆ ಮೊದಲೇ ಕೋಪಿಷ್ಠ ಎನಿಸಿಕೊಂಡಿದ್ದ ಯಡಿಯೂರಪ್ಪ ಈಗ ತಲೆಯನ್ನೇ ಕೆಡಿಸಿಕೊಂಡಿದ್ದಾರೆ. ಅಧಿಕಾರ ಕಳೆದುಕೊಂಡಿದ್ದು ತಟ್ಟೆಯಲ್ಲಿ ತಿನ್ನುವ ಬದಲು ಪಾತ್ರೆಯನ್ನೇ ನುಂಗಲು ಹೋಗಿದ್ದರಿಂದ. ಅದಕ್ಕೆ ಈಗ ಅವರು ಲೋಕಾಯುಕ್ತ ನ್ಯಾಯಮೂರ್ತಿ ಸಂತೋಷ ಹೆಗ್ಡೆ ಮೇಲೆ ಗೂಬೆಕೂರಿಸಲು ಹೋಗಿ ಮುಖಕ್ಕೆ ಇನ್ನಷ್ಟು ಮಸಿ ಬಳಿದುಕೊಂಡಿದ್ದಾರೆ. ಇನ್ನೂ ಏನೇನು ಆಟ ಕಟ್ಟುತ್ತಾರೋ ಕಾದು ನೋಡೋಣ.

* * *

ಪೋಸ್ಟ್ ಆಫೀಸು ಉಳಿತಾಯ ಖಾತೆಗೆ ಬಡ್ಡಿ ಹೆಚ್ಚಿಸಿದೆ. ಆದರೆ ಇದು ಯಾತಕ್ಕೂ ಸಾಲದು. ಇಂದಿನ ವಾಸ್ತವವೇನು ? ಬಡ್ಡಿಯ ದರಕ್ಕಿಂತ, ಬೆಲೆಯ ಮಟ್ಟ, ಹಣದುಬ್ಬರಗಳ ಮಟ್ಟ ಬಹಳ ಹೆಚ್ಚು. ಅಂದರೆ ನಮ್ಮ ಉಳಿಸಿದ ಹಣ ಪ್ರತಿಕ್ಷಣವೂ ಬೆಲೆ ಕಳೆದುಕೊಂಡಿದೆ. ಉಳಿತಾಯ ಮಾಡಿ ಪ್ರಯೋಜನ ಏನು ? ಉಳಿತಾಯವಿಲ್ಲದೆ ಹೂಡಿಕೆ ಹೇಗೆ ? ಹೂಡಿಕೆ ಇಲ್ಲದೆ ಉದ್ಯೋಗ ನಿರ್ಮಾಣ ಎಲ್ಲಿ? ಇದೊಂದು ವಿಷ ವರ್ತುಲ. ಬಂಡವಾಳ ವ್ಯವಸ್ಥೆಯ ಸಾರ್ವಕಾಲಿಕ ಸಮಸ್ಯೆ ಇದು.

## ಓದುಗರ ಗಮನಕ್ಕೆ

ಹೆಚ್ಚು ಸಂಖ್ಯೆಯ ಪುಟಗಳೊಂದಿಗೆ 'ಹೊಸತು ವಿಶೇಷಾಂಕ ೨೦೧೨' ಸಿದ್ಧತೆಯ ಹಂತದಲ್ಲಿರುವ ಕಾರಣ ಪ್ರತಿಗಳು ಓದುಗರಿಗೆ ಜನವರಿ ಎರಡನೇ ವಾರದಲ್ಲಿ ತಲುಪಬಹುದು. ಓದುಗರ ಸಹಕರಿಸಬೇಕಾಗಿ ವಿನಂತಿಸುತ್ತೇವೆ.

— ಸಂ.




**ನವೆಂಬರ್ ಸಂಚಿಕೆ**

ಮುಂಡರಗಿಯ ಮುತ್ತು ಹಾಳಕೇರಿ ಅವರ ಮುಖಪುಟ ಚಿತ್ರ ಹೊತ್ತು ಬಂದ ನವೆಂಬರ್ ೨೦೧೧ರ ಸಂಚಿಕೆ ತನ್ನ ಮುಖಪುಟ ಚಿತ್ರದಿಂದಾಗಿ ಆಕರ್ಷಕವಾಗಿದೆ. ಸತ್ಯಮೇವ ಜಯತೇ! – ಪಿ. ಜೆ. ರಾಘವೇಂದ್ರ ಅವರಿಂದ ಮೂಡಿಬಂದ ಅರ್ಥಗರ್ಭಿತ ಕಿರುಕವನ!

ಅಂಚೆ ದಿನಾಚರಣೆಯ ಪ್ರಯುಕ್ತ ಮೂಡಿಬಂದ (?) ಲೇಖನ 'ಅಂಚೆಯಲ್ಲಿನ ನೆನಪಿಗೊಂದು ದಿನ' ಸಕಾಲಿಕವಾಗಿದೆ. ಅಂಚೆಯ ಇತಿಹಾಸದಲ್ಲಿ ಪ್ರಧಾನ ಪಾತ್ರ ವಹಿಸಿದ 'ರನ್ನರ್ಸ್' ಎಂಬ ಅಂಚೆ ಪೇದೆಯ ಉಲ್ಲೇಖವೇ ಇಲ್ಲದೆ ಇರುವುದೊಂದು ಕೊರತೆ ಲೇಖನದಲ್ಲಿ ಉಂಟಾಯಿತು. ಅಂಚೆ ಪತ್ರಗಳಿರುವ ಚೀಲವನ್ನು ಗೆಜ್ಜೆ ಕಟ್ಟಿದ ಭರ್ಜಿಗೆ ಸಿಕ್ಕಿಸಿಕೊಂಡು ಒಂದು ಊರಿನಿಂದ ಮತ್ತೊಂದು ಊರಿಗೆ ಅಂಚೆಯನ್ನು ತೆಗೆದುಕೊಂಡು ಓಡಿ ಬರುತ್ತಿದ್ದ ಪೇದೆಯೇ 'ರನ್ನರ್'! ಬ್ರಿಟಿಷ್ ಅಂಚೆಯಲ್ಲಿನ ಪ್ರಧಾನ ಪಾತ್ರಧಾರಿ ಈತ!

ಅಂಚೆ ನೌಕರರ ಪ್ರಾಮಾಣಿಕತೆಯನ್ನು ಪರೀಕ್ಷಿಸಲು ಬ್ರಿಟಿಷ್ ಅಂಚೆ ಅಧಿಕಾರಿಗಳು ಅಂಚೆ ಡಬ್ಬದಲ್ಲಿ ಬೆಲೆ ಬಾಳುವ ಚಿನ್ನದ ವಸ್ತು, ನೋಟುಗಳನ್ನು ಹಾಕಿ ಗಮನಿಸುತ್ತಿದ್ದರು ಎಂಬುದನ್ನು ನಾನು ಬ್ರಿಟಿಷ್ ಅಂಚೆ ಸೇವೆಯಲ್ಲಿ ಕೆಲಸ ಮಾಡಿದ ನಮ್ಮ ತಾತನವರಿಂದ ಕೇಳಿ ತಿಳಿದಿದ್ದೆ! ಇಂದಿಗೂ ಪ್ರಾಮಾಣಿಕತೆಯ ವಿಚಾರದಲ್ಲಿ ಅಂಚೆ ಇಲಾಖೆ ಪರವಾಗಿಲ್ಲ!

ಕಡೆಯದಾಗಿ, ಕೊನೆಯ ಪುಟದಲ್ಲಿ ಮೂಡಿಬಂದ ಕ್ಲೆಮೆಂಟ್ ಎಂ. ಫ್ರಾನ್ಸಿಸ್ ಅವರ ಪರಿಚಯ ಮತ್ತು ಚಿತ್ರ ಸಂಪುಟ ಚೆನ್ನಾಗಿದೆ ಎಂಬುದು ಉತ್ಪ್ರೇಕ್ಷೆಯಲ್ಲ.

ಮೈಸೂರು **ಕೊ. ಸು. ನರಸಿಂಹಮೂರ್ತಿ**

ಈ ತಿಂಗಳು ಎಂಬ ಸಂಪಾದಕೀಯದ ಪ್ರಮುಖ ಅಂಕಣದಲ್ಲಿ ಮೆಟ್ಟಿಲು ಮೆಟ್ಟಿಲಾಗಿ ರಾಜ್ಯ ರಾಷ್ಟ್ರ ನಾಯಕರೆಲ್ಲರ ವಿಶ್ಲೇಷಣಾ ಬರಹ ಬಹಳಷ್ಟು ನಿಷ್ಪಕ್ಷಪಾತವಾಗಿ ಮೂಡಿಬಂದಿದೆ ಎಂದು ತೋರಿಬಂದುದು ಸತ್ಯ. ಹುನ್ನಾರಗಳ ತೀವ್ರತೆ ಕಠೋರವಾದ ನುಡಿಗಳು ಹೊನ್ನಿನಲಗಿನ ಮಾಯದ ಗಾಯವೆಂಬಷ್ಟೂ ತೀವ್ರವಾಗಿದ್ದುದೂ ಹೌದು. ಆದರೆ ಒಂದು ಮುಖ್ಯ ವಿಷಯವನ್ನು ಇವರು ಮರೆತಿರುವುದು ನಿಜ. ತೋರಿದ ಸತ್ಯ ವ್ಯಾಖ್ಯಾನಕ್ಕೆ ನಾವಂಜುವ ಯಾವ ದಾಕ್ಷಿಣ್ಯಕ್ಕೆ ಬಲಿಯಾಗುವುದು ಸಲ್ಲವಾದರೂ ಮೇಲಂತಸ್ತಿಗೇರಿದವರನ್ನು ಹೆಸರೆತ್ತಿ ಹೇಳುವಾಗ ಗೌರವ ನೀಡದಿರುವುದು ಸರಿ ಅಲ್ಲವೆಂದು ನನ್ನ ಪ್ರಾಮಾಣಿಕ ಅನಿಸಿಕೆ. ಭಾರತೀಯರ ಈ ಪ್ರಾಚೀನ ಮನೋಭಾವನೆಗೆ ಎಂದೆಂದೂ ಗೌರವ ನೀಡಲೇಬೇಕು ತಾನೆ. ಇತರರ ಸಂಪಾದಕೀಯದಲ್ಲಿ ಹಂತದ ಧ್ವನಿಯಿದ್ದರೂ ಅಸಂಬದ್ಧ ಭಾಷೆ ನುಸುಳಿದಂತೆಲ್ಲ ದಯವಿಟ್ಟು ಗಮನಿಸಿ. ಅಭಿನಂದನೆಗಳು.

ಕಾಸರಗೋಡು **ಕೀರಿಕ್ಕಾಡು ವನಮಾಲ ಕೇಶವ ಭಟ್ಟ**




**ಚಪಲವ ನೋಡಿರೇ...!**

ಚಪಲವ ನೋಡಿರೇ...
ಮುದುಕನ ಚಪಲವ ನೋಡಿರೇ ॥ಪ॥
ಕಪ್ಪು ಹಣ! ಕಪ್ಪು ಹಣ!
ಅಂತಾನೆ ನಮ ಮುದುಕ
ರಾತ್ರಿಯೆಲ್ಲಾ ಹಾಗೆ ಕವನರಿಸುತಾನೆ.
ಪಕ್ಕದಲ್ಲೇ ಕಪ್ಪು ಹಣದ ಗುಡ್ಡೆ ಬಿದ್ದರೂ
ಕಾಣದಾಗಿದಾನೇ ಮುದುಕ ಕಾಣದಾಗಿದಾನೆ ॥ಪ॥
ಭ್ರಷ್ಟಾಚಾರ! ಭ್ರಷ್ಟಾಚಾರ!
ಅಂತಾನೆ ನಮ ಮುದುಕ
ಹಗಲೆಲ್ಲಾ ಹಾಗೆ ಬಡಬಡಿಸುತಾನೆ.
ಸುತ್ತಲೂ ಭ್ರಷ್ಟರೇ ಸುತ್ತುವರಿದರೂ
ಮರೆಗುಳಿಯಾಗ್ಯಾನೆ ಮುದುಕ
ಮರೆಗುಳಿಯಾಗ್ಯಾನೆ ॥ಪ॥
ದಿಲ್ಲೀ... ದಿಲ್ಲೀ... ಅಂತಾನೆ
ಗದ್ದುಗೆ... ಗದ್ದುಗೆ... ಅಂತಾನೆ
ದಿಲ್ಲೀ ಗದ್ದುಗೆ ಚಪಲದ ಒಳಗೋ?
ಚಪಲವು ನಮ್ಮೀ ಮುದುಕನ ಒಳಗೋ?
ಒಗಟಾಗಿ ಚೀರುತಾನೇ ಮುದುಕ
ಚೀರುತ ರಥದೊಳು ಹೊಂಟವನೆ!
ಚಪಲವ ನೋಡಿರೇ...
ಮುದುಕನ ಚಪಲವ ನೋಡಿರೇ ॥ಪ॥

**ಹುರುಕಡ್ಲಿ ಶಿವಕುಮಾರ**
ಬಾಚಿಗೊಂಡನಹಳ್ಳಿ, ಹಗರಿಬೊಮ್ಮನಹಳ್ಳಿ ತಾಲೂಕು

**ಕರಗಿದ ಗುಡ್ಡಗಳು**

ಸಾವಿರಾರು ಗುಡ್ಡಗಳು
ಒಂದೊಂದಾಗಿ ಕರಗಿದವು
ಹಳ್ಳಿಗಳಾದವು
ಗುಡ್ಡಗಳಲ್ಲಿ ಸಿಕ್ಕಿದ್ದು
ಹಳ್ಳಿಗಳಲ್ಲಿ ಸಿಕ್ಕಿದ್ದು
ಕರೀ ಚಿನ್ನ - ನಂತರ
ಆದದ್ದು ಅಪ್ಪಟ ಚಿನ್ನ
ಈ ಚಿನ್ನ
ಬಂಗಾರದ ಬಟ್ಟಲಾಯಿತು
ಆ್ಯಷ್ ಟ್ರೇ ಆಯಿತು
ಕುರ್ಚಿ, ಮೇಜುಗಳ
ಮಂಚಗಳ ಕಾಲಾಯಿತು
ಗಣಿ-ಧನಿಗಳ ಮನೆಗಳಲ್ಲಿ
ಮೇಜುಗಳಡಿಯಲ್ಲಿನ
ಕೈಗಳ ಸೇರಿತು.
ಹಳ್ಳಿಗಳಲ್ಲಿ ಕೊಳಚೆ ತುಂಬಿದೆ
ದುರ್ನಾತ ನಮಗಾಗಿದೆ.

ಬೆಂಗಳೂರು **ಯು. ಎಸ್. ವೆಂಕಟರಾಮನ್**

**ಅಧಿಕಾರವಿದ್ದಿದ್ದರೆ?**

ನನಗೆ ಅಧಿಕಾರವಿದ್ದಿದ್ದರೆ
ಲಂಚ, ಲಂಚ ಎಂಬ ಪಿಡುಗನ್ನು
ಕಿತ್ತೊಗೆದು ಪ್ರಾಮಾಣಿಕತೆ ಎಂಬ
ಸೌಧವನ್ನೇ ನಿರ್ಮಿಸುತ್ತಿದ್ದೆ

ನನಗೆ ಅಧಿಕಾರವಿದ್ದಿದ್ದರೆ
ಮಾನವರನ್ನೇ ಕತ್ತರಿಸಿ ತಿನ್ನುವ
ರಕ್ಕಸರನ್ನು ಕಡಿದು ಕತ್ತರಿಸುತ್ತಾ
ಶಾಂತಿ ಸಮಾಜವನ್ನು ನಿರ್ಮಿಸುತ್ತಿದ್ದೆ

ನನಗೆ ಅಧಿಕಾರವಿದ್ದಿದ್ದರೆ
ಶಾಂತಿ, ಶಾಂತಿ, ಎಂದು ಜಪಿಸುತ್ತಾ
ಅಶಾಂತಿಯ ಬೀಜವನ್ನು ಬಿತ್ತುವವರನ್ನು
ಅಧಿಕಾರದಿಂದ ಕೆಳಗಿಳಿಸುತ್ತಿದ್ದೆ

ನನಗೆ ಅಧಿಕಾರವಿದ್ದಿದ್ದರೆ
ಜಾತಿ, ಜಾತಿ ಎಂಬ ಪಿಡುಗನ್ನು
ಕಿತ್ತೊಗೆದು ಮಾನವ ಜಾತಿಯನ್ನು
ಮಾತ್ರ ನಿರ್ಮಿಸುತ್ತಿದ್ದೆ

ನನಗೆ ಅಧಿಕಾರವಿಲ್ಲದಿದ್ದರೂ
ಸುಸಂಸ್ಕೃತವಾದ ರಾಜಕಾರಣಿಗಳನ್ನು
ಆರಿಸುವ ಅಧಿಕಾರವಿರುವುದರಿಂದ
ಎಚ್ಚರಿಕೆ, ಎಚ್ಚರಿಕೆ ಎಂದು ಎಚ್ಚರಿಸುತ್ತಿದ್ದೇನೆ.

ಸಾಗರ **ವಿ. ಗಣೇಶ್**

**ವ್ಯವಸ್ಥೆಯ ಗರ್ಭದೊಳಗೆ ಲೀನವಾಗುವ ಧ್ವನಿಗಳು**

''ನೀನಾರು?'' ದೇವ್ರು ಅವನನ್ನು ಕೇಳಿತು.

''ಹುಟ್ಟಿನಿಂದ ನಾನೊಬ್ಬ ದಲಿತ, ಎಲ್ಲ ಬಡವರೂ ನನ್ನ ಒಡಹುಟ್ಟಿದವರು ಓ... ಈ ಭೂಮಿ ಎಷ್ಟು ಕುರೂಪವಾಗಿದೆ! ಜನರೆಷ್ಟು ದುಃಖಿಗಳಾಗಿದ್ದಾರೆ!''

ಬಿಸಿರಕ್ತದ ತರುಣ ನಾಯಕ ಜನರ ದುಃಖಕ್ಕೆ

ಕಾರಣವಾಗಿರುವ ರಾಜನನ್ನು ಅವನಿರುವ ಮಹಲು, ಆ ವ್ಯವಸ್ಥೆಯನ್ನು ನಾಶ ಮಾಡಬೇಕೆಂಬ ಛಲದೊಡನೆ ಹೊರಡುತ್ತಾನೆ. ಆದರೆ ರಾಜನಿರುವ ಜಾಗಕ್ಕೆ ಹೋಗಬೇಕಾದರೆ ಮೂರು ಉಪ್ಪರಿಗೆ ಹತ್ತಿ ಹೋಗಬೇಕು. ಪ್ರತಿ ಉಪ್ಪರಿಗೆಯ ಬಾಗಿಲಲ್ಲಿ ಕಾವಲಿಗೆ ಒಂದು ದೆವ್ವವಿದೆ. ಅದು ಪ್ರತಿ ಬಾಗಿಲಿಗೂ ಲಂಚ ಕೇಳುತ್ತದೆ. ಲಂಚ ಕೊಟ್ಟರೂ ಅಡ್ಡಿಯಿಲ್ಲ, ಉಪ್ಪರಿಗೆ ಹತ್ತಿ ರಾಜನ ಬಳಿ ಹೋಗಬೇಕೆಂದು ತರುಣನ ಹಠ. ಸರಿ, ಮೊದಲ ಉಪ್ಪರಿಗೆ ಮೆಟ್ಟಿಲಿನ ದೆವ್ವ ಅವನ ಕಿವಿಯನ್ನು ಕೇಳುತ್ತದೆ. ಅವ ಕಿವಿಯನ್ನು ಕೊಡುತ್ತಾನೆ. ಕಿವಿ ಕೊಟ್ಟೊಡನೆ ಅವನಿಗೆ ಕೆಳಗೆ ಹಾಹಾಕಾರ ಪಡುತ್ತಿರುವ ಜನರ ಧ್ವನಿ ಕೇಳದಂತಾಗುತ್ತದೆ. ಎರಡನೇ ಉಪ್ಪರಿಗೆ ಮೆಟ್ಟಿಲಿನ ದೆವ್ವ ಅವನ ಕಣ್ಣನ್ನು ಕೇಳುತ್ತದೆ. ಆತ ನೀಡುತ್ತಾನೆ. ಜನರ ರಕ್ತ ಬಸಿಯುವ ಬೆತ್ತಲೆ ದೇಹಗಳು ಕಾಣದಾಗುತ್ತವೆ. ಮೂರನೇ ಉಪ್ಪರಿಗೆ ಮೆಟ್ಟಿಲ ದೆವ್ವ, ''ಈ ಒಂದೇ ಉಪ್ಪರಿಗೆ ಹತ್ತಿದರೆ ಸೇಡು ತೀರಿಸಿಕೊಳ್ಳುತ್ತೀಯ. ಇದಕ್ಕಾಗಿ ಎರಡರಷ್ಟು ಲಂಚ ಕೊಡಬೇಕಾಗುತ್ತದೆ. ನಿನ್ನ ಹೃದಯ ಮತ್ತು ನೆನಪುಗಳನ್ನು ಕೊಡು'' ಎನ್ನುತ್ತದೆ. ರಾಜನ ಮೇಲೆ ಸೇಡು ತೀರಿಸಿಕೊಳ್ಳಲು ಏನು ಕೇಳಿದರೂ ಕೊಡಲು ಸಿದ್ಧವಾಗಿದ್ದ ಆತ ಹೃದಯ ಮತ್ತು ನೆನಪುಗಳನ್ನು ನೀಡುತ್ತಾನೆ. ಜನರಿಗೆ ತೀವ್ರವಾಗಿ ಮಿಡಿಯುತ್ತಿದ್ದ ಹೃದಯವನ್ನು, ಜನರ ಸಮುದಾಯದ ಜೊತೆಗಿನ ಎಲ್ಲ ಅನುಭವಗಳ ನೆನಪನ್ನು ಕಳೆದು ಕೊಂಡುಬಿಡುತ್ತಾನೆ. ಹಾಗೆ ಕೊನೆ ಮೆಟ್ಟಿಲನ್ನು ಜಿಗಿದು ರಾಜನೊಂದಿಗೆ ನಿಂತು ರಾಜನ ಒಡ್ಡೋಲಗವನ್ನು ನೋಡುತ್ತಾನೆ. ರಾಜನ ವಿರುದ್ಧ ಕೂಗುತ್ತಿದ್ದ ಕಪ್ಪುಜನರ ಅಸಭ್ಯ ಗುಂಪನ್ನೂ ನೋಡುತ್ತಾನೆ. ಅವನಿಗೆ ಪ್ರತಿಭಟಿಸಬೇಕು ಅನ್ನಿಸುವುದಿಲ್ಲ. ರಾಜನ ಸ್ನೇಹ ಮಾಡಬೇಕೆನಿಸುತ್ತದೆ. ಆಗ...

''ನೀನಾರು ?'' ದೆವ್ವ ಅವನನ್ನು ಕೇಳಿತು.

''ಹುಟ್ಟಿನಿಂದ ನಾನೊಬ್ಬ ರಾಜಕುಮಾರ! ದೇವತೆಗಳು ನನ್ನ ಒಡಹುಟ್ಟಿದವರು. ಓ... ಈ ಭೂಮಿ ಎಷ್ಟು ಸುಂದರವಾಗಿದೆ. ಜನರು ಎಷ್ಟು ಸುಖಿಗಳಾಗಿದ್ದಾರೆ!''

– ಇದು ಪ್ರೊ|| ಬಿ. ವಿ. ವೀರಭದ್ರಪ್ಪನವರು ಅನುವಾದಿಸಿರುವ ಬಲ್ಗೇರಿಯಾದ ಹ್ರಿಸ್ಟೋ ಸ್ಮಿರ್ನೆನ್‌ಸ್ಕಿಯಾ ಬರೆದ 'ಮೂರು ಮೆಟ್ಟಿಲ ಕಥೆ'ಯ ಸಂಕ್ಷಿಪ್ತ ರೂಪ. ಚರಿತ್ರೆಯಲ್ಲಿ ಶಕ್ತಿ ರಾಜಕಾರಣವು ಜನಪರ ಚಳವಳಿಗಳನ್ನು ಚಳವಳಿಗಾರರನ್ನು ಪಳಗಿಸಿ, ತನ್ನ ಪರವಾಗಿ ನಿಲ್ಲುವಂತೆ ಮಾಡಿರುವುದನ್ನು ಈ ಕಥೆ ಮಾರ್ಮಿಕವಾಗಿ ವಿವರಿಸುತ್ತದೆ. ಡಾ|| ರಹಮತ್ ತರೀಕೆರೆಯವರು, ಪ್ರಭುತ್ವಗಳನ್ನು ಕಟುವಾಗಿ ವಿಡಂಬಿಸುತ್ತಿದ್ದ, ಜನರ ಅಸಂತೋಷಗಳಿಗೆ ಪ್ರತಿಭಟನೆಯ ರೂಪ ಕೊಡುತ್ತಿದ್ದ ಎಷ್ಟೋ ಸೂಫಿ ಸಂತರಿಗೆ ಮಧ್ಯಕಾಲೀನ ದೊರೆಗಳು ಅರಮನೆಯಿಂದ ಸಕಲ ಸೌಲಭ್ಯಗಳನ್ನು ಒದಗಿಸಿ ಅವರ ಗಂಟಲನ್ನು ಪ್ರಭುತ್ವ ಪರವಾಗಿರುವಂತೆ ಮಾಡಿ, ಪಳಗಿಸಿದ ಬಗ್ಗೆ ದಾಖಲಿಸುತ್ತಾರೆ.

ಈ ಮೇಲಿನ ಕಥೆಯ ನಾಯಕನಂತೆ ಯಾವುದನ್ನು ರೋಧಿಸಲಾಗುತ್ತಿತ್ತೋ ಅದೇ ತಾನಾಗಿಬಿಡುವ, ವ್ಯವಸ್ಥೆಯೊಂದಿಗೆ ರಾಜಿಯಾದ ಚಳವಳಿ, ಚಳವಳಿಗಾರರೆಷ್ಟೋ. ನಮ್ಮ ಮುಂದಿರುವ ದಲಿತ ಚಳವಳಿ ಮತ್ತದರ ನಾಯಕರು ಇದಕ್ಕೊಂದು ನಿದರ್ಶನ. ದಲಿತ ಚಳವಳಿ ಹುಟ್ಟಿದಾಗಿನ ಹೋರಾಟದ ವಿಧಾನ, ಅದರ ಘೋಷಣೆ, ಅದು ಕೊಟ್ಟ ಸಾಹಿತ್ಯ ಗಮನಿಸಿದರೆ, ಈ ಕಥೆಯ ನಾಯಕನಾಡಿದ ಮೊದಲ ಮಾತಿನಂತೆ ಕೇಳುತ್ತದೆ. ಅಂದಿನ ದಲಿತ ಚಳವಳಿ 'ಯಾರಿಗೆ ಬಂತು ಎಲ್ಲಿಗೆ ಬಂತು, ನಲವತ್ತೇಳರ ಸ್ವಾತಂತ್ರ್ಯ ?' – ಎಂದು ಈ ಸ್ವಾತಂತ್ರ್ಯವೇ ಒಂದು ಕಪಟ ಎನ್ನುತ್ತಿತ್ತು. 'ಭೂಮಿ ದಕ್ಕದೆ ಬಾಧೆ ತೀರದು' ಎಂದು ಭೂ ಹೋರಾಟಕ್ಕೆ ಕರೆ ನೀಡುತ್ತಿತ್ತು. 'ಮತದ ಮದದಲ್ಲಿ ಮಣ್ಣಾಗಬೇಡ' ಎಂದು ಮತಾಂತರವು ವಿಮೋಚನೆಯ ದಾರಿಯಲ್ಲ ಎನ್ನುತ್ತಿತ್ತು. 'ಯಾವ ದೇಶವಾದರೂ, ಯಾವ ಭಾಷೆಯಾದರೂ ಬಡವರೆಲ್ಲರೂ ಒಂದೇ, ಬಾಧೆ ಎಲ್ಲವೂ ಒಂದೇ' ಎಂದು ದುಡಿಯುವ ಜನರೆಲ್ಲಾ ಒಟ್ಟಾಗಬೇಕಾದ ಅನಿವಾರ್ಯ ಹಾಗೂ 'ವೋಟು ಹಾಕುವುದ ಬಿಟ್ಟು ಹೋರಾಟ ಮಾಡಿರಣ್ಣ' ಎಂದು ಪ್ರತಿಭಟನೆಗೆ ಜನರನ್ನು ಅಣಿಗೊಳಿಸುತ್ತಿತ್ತು. ಈ ನಾಡ ಮಣ್ಣಿನಲ್ಲಿ ಮಣ್ಣಾದ ಜನಗಳ ಕಥೆಯ ಕರಾಳ ನೆನಪನ್ನು ಹೊತ್ತು 'ಸಮ ಸಮಾಜದೆಡೆಗೆ ನಮ್ಮ ನಡಿಗೆ' ಎಂದು ಅಸಮಾನತೆಯನ್ನು ಹೂತುಬಿಡಲು ಭುಗಿಲೆದ್ದ ಬೆಂಕಿಯ ಜ್ವಾಲೆಗಳಾಗಿ ಚಳವಳಿ ಸಾಗುತ್ತಿತ್ತು. ಆಗ ಚಳವಳಿಗೆ ಜನಸಮುದಾಯದೊಂದಿಗೆ ಒಡನಾಟ ಇತ್ತು, ನಾಯಕರು ಜನರೊಳಗೆ ಹುಟ್ಟಿಬರುತ್ತಿದ್ದರು.

ಆದರೆ ವ್ಯವಸ್ಥೆ ಈ ಕಥೆಯ ದೆವ್ವದಂತೆ ತನಗೆದುರಾಗುವ ಧ್ವನಿಯನ್ನು ಬಹಳ ಜಾಣತನದಲ್ಲಿ ಪಳಗಿಸಿ ತನ್ನ ಪರವಾಗಿರುವಂತೆಯೂ ಜನರನ್ನು ದ್ವೇಷಿಸುವಂತೆಯೂ ಪರಿವರ್ತಿಸಿಬಿಡುತ್ತದೆ. ಈ ಮೂರು ದಶಕಗಳಲ್ಲಿ ದಲಿತ ಚಳವಳಿ ಸಾಗಿಬಂದ ಹಾದಿಯನ್ನು ಗಮನಿಸಬೇಕು. ಚಳವಳಿಯ ದುರ್ಬಲ ಜಾಗಗಳನ್ನು ಪತ್ತೆ ಮಾಡಿದ ವ್ಯವಸ್ಥೆ ಚಳವಳಿಯನ್ನು ಭ್ರಷ್ಟಗೊಳಿಸಿದ್ದಷ್ಟೇ ಅಲ್ಲ, ನಾಯಕರ ನಾಲಿಗೆಗೆ ಸುಖಭೋಗದ ಸಿಹಿಯನ್ನು ತಾಗಿಸಿತು. ಪರಿಣಾಮವಾಗಿ ನಾಯಕರೆಲ್ಲ ರಾಜಕೀಯ ಪಕ್ಷದಲ್ಲಿ ಟಿಕೆಟ್ ಗಿಟ್ಟಿಸಿಕೊಂಡು ಶಾಸಕರಾದರು, ಮಂತ್ರಿಗಳಾದರು. ದಲಿತ ಬುದ್ಧಿಜೀವಿಗಳೆನಿಸಿಕೊಂಡವರು ಅಕಾಡೆಮಿ, ನಿಗಮ ಮಂಡಳಿ, ಪ್ರಾಧಿಕಾರಗಳ ಅಧ್ಯಕ್ಷರಾಗಿ, ವಿಧಾನ ಪರಿಷತ್‌ನ ಸದಸ್ಯರಾಗಿ ಗೂಟದ ಕಾರು ಪಡೆದುಕೊಂಡರು. ದಲಿತ ಕವಿ ಸಾಹಿತಿಗಳೆಲ್ಲ ಪ್ರಭುತ್ವದ ಆಸ್ಥಾನ ಪಂಡಿತರಾಗಿ ಜನರ ನೋವಿಗೆ ಕಿವಿ, ಕಣ್ಣು, ಹೃದಯ ಮತ್ತು ನೆನಪುಗಳನ್ನು ಕಳೆದುಕೊಳ್ಳುತ್ತಾ ಸಾಗಿದರು. ಹಂತಹಂತವಾಗಿ ತನ್ನತನ ಕಳೆದುಕೊಂಡು ವ್ಯವಸ್ಥೆಯೊಂದಿಗೆ ಪ್ರತಿರೋಧ ಕಟ್ಟಿಕೊಳ್ಳದೆ ರಾಜಿಯಾದರು. ನಂತರ ಅವರೊಳಗಿನಿಂದ ಬಂದ ಧ್ವನಿ 'ದಲಿತರೆಲ್ಲ ಬೌದ್ಧ ಧರ್ಮಕ್ಕೆ ಮತಾಂತರವಾಗಬೇಕು', 'ದಲಿತರ ಮಕ್ಕಳಿಗೆ ಒಂದನೇ ತರಗತಿಯಿಂದ ಇಂಗ್ಲಿಷ್ ಕಲಿಸಬೇಕು', 'ದಲಿತರು ಬಂಡವಾಳಶಾಹಿಗಳಾಗಬೇಕು', 'ಜಾಗತೀಕರಣ ದಲಿತರಿಗೆ ವರ, ಜಾಗತೀಕರಣ ವಿರೋಧಿಗಳನ್ನು ಗಲ್ಲಿಗೇರಿಸಬೇಕು', 'ಗ್ರಾಮಕ್ಕೊಂದು ಬೌದ್ಧವಿಹಾರ ಕಟ್ಟಿಸಿ, ದಲಿತರು ಧ್ಯಾನ ಮಾಡಲು ಅನುವು ಮಾಡಿಕೊಡಬೇಕು', 'ದಲಿತರು ರಾಜಕೀಯ ಪಕ್ಷ ಕಟ್ಟಿ ದಲಿತ ರಾಜಕಾರಣಿಗಳಿಗೆ ವೋಟು ಹಾಕುವುದರ ಮೂಲಕ ರಾಜ್ಯಾಧಿಕಾರ ಹಿಡಿಯಬೇಕು', 'ಖಾಸಗೀಕರಣವಿರಲಿ, ಖಾಸಗಿಯಲ್ಲಿ ಮೀಸಲಾತಿ ನೀಡಿ', 'ದಲಿತರು ಉನ್ನತ ಶಿಕ್ಷಣ ಪಡೆದು ಉನ್ನತ ಸರ್ಕಾರಿ ಹುದ್ದೆಗಳಿಗೇರಬೇಕು', 'ಈಗಿನ ವ್ಯವಸ್ಥೆಯನ್ನು ವಿರೋಧಿಸಬಾರದು, ವಿರೋಧಿಸಿದರೆ ಸಂವಿಧಾನ ವಿರೋಧಿಸಿದಂತೆ, ಸಂವಿಧಾನ ವಿರೋಧಿಸಿದರೆ ಅಂಬೇಡ್ಕರರನ್ನೇ ವಿರೋಧಿಸಿದಂತೆ' ಇತ್ಯಾದಿ ಈ ಧ್ವನಿಗಳೆಲ್ಲ ಕಥೆಯ ನಾಯಕ ಕೊನೆಯಲ್ಲಿ ರಾಜನೊಂದಿಗೆ ರಾಜಿಯಾಗಿ ನುಡಿದ ನುಡಿಗಳಂತೆಯೇ ಕೇಳಿಸುತ್ತವೆ.

ತಾನು ಮಾಡಬಹುದಾದ ತಪ್ಪುಗಳನ್ನು ತನಗೆ ಹೇಳಬಲ್ಲ ಪಳಗಿದ ಹೋರಾಟಗಾರರು ವ್ಯವಸ್ಥೆಗೆ ಬೇಕು. ಅವರು ತೋರಿಸುವ ತನ್ನ ದೋಷಗಳನ್ನು ಸರಿಪಡಿಸಿಕೊಂಡು ಅದು ಮತ್ತಷ್ಟು ಸ್ಥಿರವಾಗುತ್ತದೆ. ವ್ಯವಸ್ಥೆಗೆ ತಾನು ಶೋಷಿತರ ಪರವಾಗಿದ್ದೇನೆ, ತಾನು ತಂದಿರುವ ಯೋಜನೆಗಳು ಕಾಯ್ದೆಗಳು ಎಲ್ಲ ಶೋಷಿತರ ಪರವಾಗಿದೆ ಎಂಬ ಭ್ರಮೆಯನ್ನು ಜನರಲ್ಲಿ ಹುಟ್ಟಿಸಬೇಕಾದ ಅನಿವಾರ್ಯತೆಯಿದೆ. ಅದಕ್ಕೆ ಅದು ಜನರ ಒಳಗಿನಿಂದಲೇ ನಾಯಕರನ್ನು ಬೇರ್ಪಡಿಸಿ,

ಶ್ರೀಮತಿ. ಬಿ. ಜಿ. ಕುಸುಮಾ ಅವರ ''ವಿಶ್ವ ವಿಖ್ಯಾತ ಸಸ್ಯಶಾಸ್ತ್ರಜ್ಞ ಬೀರಬಲ್ ಸಾಹ್ನಿ'' ಲೇಖನದಲ್ಲಿ (ಹೊಸತು, ನವಂಬರ್ ೨೦೧೧, ಪು. ೩೭) ಅವರ ಮಾರ್ಗದರ್ಶಕರ ಹೆಸರು ಎ. ಸಿ. ಸೆವಾರ್ಡ್ ಎಂದಿರಬೇಕು, ಎ. ಸಿ. ಆರ್ನಾಲ್ಡ್ ಅಲ್ಲ. ಓದುಗರು ಇದನ್ನು ತಿದ್ದಿಕೊಳ್ಳಬೇಕಾಗಿ ವಿನಂತಿ.

– ಸಂ.

**ಹೊಸತು** ಜನವರಿ ಸಂಚಿಕೆ

ಜನವರಿ ೨೦೧೨ರ ಸಂಚಿಕೆಯಲ್ಲಿ 'ಭ್ರಷ್ಟಾಚಾರದ ನಿರ್ಮೂಲನಕ್ಕೆ ನಿರ್ದಿಷ್ಟ ಸೂಚನೆಗಳು' ಎಂಬ ವಿಷಯವನ್ನು ಕುರಿತು ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಓದುಗರಲ್ಲಿ ಮನವಿ ಮಾಡಿಕೊಳ್ಳುತ್ತಿದ್ದೇವೆ. ಡಿಸೆಂಬರ್ ೧೦ರೊಳಗಾಗಿ ನಿಮ್ಮ ಬರಹವನ್ನು ಕಳಿಸಿ. ಅದು ೨೦೦ ಪದಗಳ ಮಿತಿಯಲ್ಲಿದ್ದರೆ ಒಳ್ಳೆಯದು.

*– ಸಂಪಾದಕ ಮಂಡಲಿ*

ಪಳಗಿಸಿ, ತಾನು ಹೇಳಬೇಕಾದುದನ್ನು ಅವರಿಂದ ಹೇಳಿಸುತ್ತದೆ. ದಲಿತ ಚಿಂತಕ ಆನಂದ್ ತೇಲ್‌ತುಂಬ್ಡೆ ಯವರು ವ್ಯವಸ್ಥೆಯೊಂದಿಗೆ ಸೇರಿಹೋಗುವ ಅಪಾಯವನ್ನು ಕುರಿತು ಈ ರೀತಿ ಹೇಳುತ್ತಾರೆ: ''ಆಡಳಿತ ಯಂತ್ರಾಂಗದಲ್ಲಿ ಇರುವ ದಲಿತ ವ್ಯಕ್ತಿಯು ಇಡೀ ವ್ಯವಸ್ಥೆಯು ದಲಿತ ಪರವಾಗಿರುವಂತೆ ಪ್ರಭಾವ ಬೀರಬಲ್ಲನೆಂದು ನಂಬುವುದು ಅಮಾಯಕತನ. ಬದಲಾಗಿ ವ್ಯವಸ್ಥೆಯೊಂದರಲ್ಲಿ ವ್ಯಕ್ತಿಯೊಬ್ಬ ಏಳಿಗೆಯ ಏಣಿ ಏರುತ್ತಾ ಹೋಗುತ್ತಾನೆಂದರೆ ಅದು ವ್ಯವಸ್ಥೆಯ ಮೌಲ್ಯಗಳನ್ನು ಎತ್ತಿಹಿಡಿದದ್ದಕ್ಕಾಗಿ ವ್ಯವಸ್ಥೆ ಆತನಿಗೆ ಮಾಡುವ ಸನ್ಮಾನವಷ್ಟೆ ಆಗಿರುತ್ತದೆ. ಹೀಗಾಗಿ ಹಲವಾರು ಬಾರಿ ದಲಿತರೇ ಇತರರಿಗಿಂತ ಹೆಚ್ಚಿನ ಉತ್ಸಾಹದಿಂದ ವ್ಯವಸ್ಥೆಯನ್ನು ಎತ್ತಿಹಿಡಿಯುತ್ತಾರೆ. ವ್ಯವಸ್ಥೆಯು ವ್ಯಕ್ತಿಯನ್ನು ತನ್ನ ನಿಷ್ಠಾವಂತ ಸೇವಕನನ್ನಾಗಿ ರೂಪಾಂತರಿಸಿ ಕೊಳ್ಳುತ್ತದೆ. ವರ್ಗದೃಷ್ಟಿಯಿಂದ ಹೇಳುವುದಾದರೆ, ದಲಿತ ರಾಜಕಾರಣಿಗಳು, ದಲಿತ ಅಧಿಕಾರಿಗಳು, ದಲಿತಪರ ಮಿತ್ರ ವರ್ಗವಾಗಿಯೇನೂ ಉಳಿಯು ವುದಿಲ್ಲ. ಅವರ ಈ ರೀತಿಯ ವರ್ಗ ಪರಿವರ್ತನೆಯು ಅವರನ್ನು ರಾಜಕೀಯವಾಗಿ ನಿಷ್ಕ್ರಿಯಗೊಳಿಸುತ್ತದೆ.''

ಈ ನಿಟ್ಟಿನಲ್ಲಿ ದಲಿತ ಚಳವಳಿಯೊಂದು ಉದಾಹರಣೆ ಯಷ್ಟೆ. ಇದು ಜಾಗತಿಕ ಚೌಕಟ್ಟುಳ್ಳಂಥದ್ದು. ಜಗತ್ತಿನೆಲ್ಲೆಡೆ ರೈತ, ಕಾರ್ಮಿಕ, ಮಹಿಳೆ, ರಾಷ್ಟ್ರೀಯತಾ ಹೋರಾಟ, ಬಂಡಾಯ ಸಾಹಿತ್ಯ ಮುಂತಾದ ಜನಪರ ಚಳವಳಿಗಳೆಲ್ಲಾ ರಾಜಿಯಾಗಿ ಶೋಷಕರ ಪರ ವಕಾಲತ್ತು ವಹಿಸುತ್ತಿರುವುದು ಗೋಚರಿಸುತ್ತದೆ. ಈ ಇಡೀ ಕತೆ, ಜನರಿಂದ ಬೇರ್ಪಟ್ಟು ವ್ಯವಸ್ಥೆಯೊಳಗೆ ಸೇರಿ ಅದನ್ನು ಬದಲಾಯಿಸಬಹುದೆಂದು ಹೊರಡುವ ಅಪಾಯದ ಎಚ್ಚರಿಕೆಯನ್ನು ಕೊಡುತ್ತದೆ. ಇದು ಚಳವಳಿಯಲ್ಲಿರುವ ಯುವ ಪೀಳಿಗೆಗೊಂದು ಪಾಠವಾಗಬೇಕಾಗಿದೆ.

**ರಾಜೇಶ್ ಸಾಲುಮರ**
**ಗೋಣಬೀಡು ಅಂಚೆ, ಮೂಡಿಗೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ**

---

## ಅಣ್ಣಿಗೆರೆ

ತಲೆದಱಿದುಟ್ಟು ದಿಕ್ಕೆ
ಸುರಲೋಕಸುಬಂಗಳನುಣ್ಬೆವೆಂಬ ಬ
ತ್ತಲೆಗರ ಮಾತುಗೊಳ್ಳದಿರು
ಬಾಜ್ಜಿನಮಿಂದ್ರಿಯ ವರ್ಗದಿಚ್ಛೆಯಂ ಸಲಿಸಿ
ಬಸಂತದೊಳ್
ಕಳಿಕೆ ಗರ್ಚಿದ ಕೋಗಿಲೆಯಂತೆ - ಬಿಚ್ಚತಂ
ನಲಿವುದು
ಕಂಡರಾರು ಮಱುಭವಂಗಳನಿಲ್ಲಿ
ವಿಯಚ್ಚರೇಶ್ವರ ?

ಅಣ್ಣಿಗೆರೆಯ ಇತ್ತೀಚಿನ ಶೋಧಗಳು ಗಾಬರಿಯನ್ನು ಉಂಟುಮಾಡುತ್ತಿರುವಾಗ ಮೂಲವನ್ನೇ, ಅಂದರೆ ಪಂಪನು ಕಂಡಿರಬಹುದಾದ ಊರ ಬಗ್ಗೆ ಮರೆಯುವು ದಾಗಲಿ ಮರೆಮಾಚುವುದಾಗಲಿ ಸರಿಯಾದ ಅರಿವಾಗಲಾರದು ?

ಈ ಊರಿನಲ್ಲಿ ದೊರಕಿರುವ ೬೦೦ ಬುರುಡೆಗಳು ಬೆಳಕಿಗೊಡ್ಡುವ ಇತಿಹಾಸಕ್ಕೂ ಪಂಪನಿಗೂ ಇರಬಹು ದಾದ ಅಂಶಗಳನ್ನು ಅವನ ಆದಿಪುರಾಣಂ -ಇಂದಲೇ ಗುರುತಿಸಬಹುದು. ಅಂಥ ಸ್ಥಿತಿಗತಿಯ ಅಡಿಪಾಯದಿಂದ ಪಂಪನು ತನ್ನ ಆದಿಪುರಾಣ ಕಾವ್ಯವನ್ನು ಒಂದು ಮಹತ್ವದ ಐತಿಹಾಸಿಕ ದಾಖಲೆಯಾಗಿಸಿದ್ದಾನೆ ಎಂದರೆ ಮೂಗು ಮುರಿಯುವಂತಿಲ್ಲ. ಈ ಪದ್ಯವು ಇಂದಿಗೂ ಜೀವಂತವಾಗಿರುವುದೇ ಪಂಪನ ಹಿರಿಮೆಗೆ ಸಾಕ್ಷಿಯಾಗಿದೆ, ಎನ್ನಬಹುದಾಗಿದೆ.

ಇದು ರಾಷ್ಟ್ರಕೂಟರ ಹತ್ತನೇ ಶತಮಾನದ ಅವಸ್ಥೆ ಯಾದಂತಿದೆ. ಪಂಪನ ಬಾಲ್ಯವು ಒಂದು ಆತಂಕಭರಿತ ಸಮಯದಲ್ಲಿ ಕಳೆದುಹೋಗಿರಬೇಕು. 'ಅವಮಾ ಸುರ ಲೋಕನು ಬಂಗಳನುಸ್ಬಾವರ' ಚಿಂತನೆಯಲ್ಲಿ ತನ್ನ ಆದಿಪುರಾಣವನ್ನು ರಚಿಸುವಲ್ಲಿ ಸಫಲನಾಗಿರಬೇಕು.

ಅಂದು ಅಣ್ಣಿಗೆರೆಯಲ್ಲಿ ಬರಿಯ ಬತ್ತಲಿಗರಿದ್ದಿರ ಬಹುದು. ಅವರ ಸಂಘವೊಂದು ಧರ್ಮಪ್ರಸಾರದಲ್ಲಿ ತೊಡಗಿರಲೂ ಸಾಕು. ಅಂಥವರ ನಿಜವಾದ ಕಲ್ಪನೆಯಲ್ಲಿ ಆದಿಪುರಾಣವು ರೂಪ ತಾಳಿದ್ದರೆ ಆಶ್ಚರ್ಯಪಡ ಬೇಕಾದುದಿಲ್ಲ. ಅಂಥ ಪಾತ್ರವನ್ನು ಆದಿ ತೀರ್ಥಂಕರನಲ್ಲಿ ಕಂಡರಿಸಿದ್ದಾನೆ. ಅಂಥ ಮಾನಸಿಕ ಸ್ಥೈರ್ಯವುಳ್ಳ ಬಾಹುಬಲಿ ಮತ್ತು ಅವನ ಮೊದಲ ಪ್ರಭಾವವಾಗಿ ಭರತನಲ್ಲಿ ಜೈನಧರ್ಮದ ಗತಿಯನ್ನು ಕಂಡಿರಬಹುದು. ಅಂದರೆ ಬಾಹುಬಲಿಯು ಆರಾಧನಾ ಯೋಗ್ಯ ವ್ಯಕ್ತಿತ್ವ ವಾದರೆ ಭರತನು ಪಂಪನಂತೆ ಮುಕ್ತಿಮಾರ್ಗವನ್ನು ಕಂಡುಕೊಂಡವನಾಗುತ್ತಾನೆ.

ಹೀಗೆ ಪಂಪನ ಬಾಲ್ಯವು ದ್ಯೋತಕವಾಗಿರಬಹು ದಾದಲ್ಲಿ ಅಣ್ಣಿಗೆರೆಯ ಇತಿಹಾಸವನ್ನು ಪಂಪನಿಂದಲೇ ಗುರುತಿಸಬಹುದಾದಂತೆ ಇತ್ತೀಚಿಗೆ ಬೆಳಕಿಗೆ ಬಂದ ಆರುನೂರು ತಲೆಬುರುಡೆಗಳು ಗಮನಕ್ಕೆ ಬರಬಹು ದಾಗಿದೆ. ಬದಲು, ಕೇವಲ ನಂತರದ ವೀರಶೈವ ಬೆಳವಣಿಗೆಗಳನ್ನು ಮಾತ್ರ ಗುರುತಿಸಲು ನಮ್ಮ ವಿದ್ವಾಂಸರು ಯತ್ನಿಸುತ್ತಿರುವುದು ಸರಿ ಎನಿಸುತ್ತಿಲ್ಲ. ಪ್ರೊ|| ಕಲ್ಬುರ್ಗಿಯವರು ಅಣ್ಣಿಗೆರೆಯನ್ನು ವೀರಭದ್ರ ಪಂಥಕ್ಕೆ ಹೊಂದಿಸಿ ಹೇಳುವಂತಿದೆ. ಅದು ನಿಜಕ್ಕೂ ೧೨ನೇ ಶತಮಾನದ ಕೊನೆಯ ಹಂತವಾಗುತ್ತದೆ. ಅಣ್ಣಿಗೆರೆಯು ಪಂಪನ ಬಾಲ್ಯದಿಂದ ಧರ್ಮಶೋಧದಲ್ಲಿ ತೊಡಗಿದ್ದ ಒಂದು ಸಂಘದ ನೆನಪನ್ನು ತರುವಂಥ ದಾಗಿದೆ. ವೀರಶೈವದಲ್ಲಿ ವೀರ ಎಂಬ ಪದವು ಸ್ಪಷ್ಟ ವಾಗಿರುವಂತೆ ಅಸ್ಪಷ್ಟವೂ ಆಗಿದೆ. ಆದುದರಿಂದ ಬರಿಯ ತಲೆಬೋಳಿಸಿಕೊಳ್ಳುವ ಮತ್ತು ತಲೆಯನ್ನು ಒಪ್ಪಿಸುವ ಬಗೆಯಿಂದ ವೀರಭದ್ರ ಪಂಥವನ್ನು ತೋರಿಸುವಂಥದಾಗಲಾರದು. ಮುಕ್ತಿಮಾರ್ಗದ ಶೋಧದಲ್ಲಿ ತೊಡಗಿಸಿಕೊಂಡ ಒಂದು ಸಂಘದ ಅನುಮೋದನೆಯಿರಬೇಕೆಂದು ಊಹಿಸಬೇಕಾಗಿದೆ.

ಇಂತಹ ಸ್ಥಿತಿಯು ಅಭಿವೃದ್ಧಿಯಲ್ಲಿದ್ದಿರಬೇಕೆಂದು ಪಂಪನ ಆದಿಪುರಾಣದ ರಚನೆಗೆ ಕಾರಣವಾಗುತ್ತದೆ. ಅಂದರೆ ತಲೆ ವಱಿಯುವ ಧರ್ಮವು ಅಂದು ಪ್ರಸಿದ್ಧವಾಗಿದ್ದಿರಬಹುದು.

ಇಂತಹ ಹಿನ್ನೆಲೆಯು ವೈಜ್ಞಾನಿಕ ಶೋಧನೆಯಿಂದ ಗುರುತಾಗುವುದಾದರೆ ಅಷ್ಟು ಸಾಲದಾಗುತ್ತದೆ. ನಮ್ಮ ಧಾರ್ಮಿಕ ವೃತ್ತಿ ಪ್ರವೃತ್ತಿಗಳ ಇತಿಹಾಸವನ್ನು ನಾವಿನ್ನೂ ಆಳವಾಗಿ ಅಧ್ಯಯನ ಮಾಡಬೇಕಾಗುತ್ತಿದೆ. ನಮ್ಮ ವಿದ್ವಾಂಸರು ಆತುರಪಡುತ್ತಿರುವುದರಲ್ಲಿ ಸತ್ಯದ ಹೊಳಹು ಕೂಡ ದೂರಾಗಬಹುದಾಗಿದೆ. ಅದರಲ್ಲೂ ನಮ್ಮ ತರುಣ ಉತ್ಸಾಹಿಗಳಿಗೆ ದಾರಿ ತಪ್ಪಿಸಿದಂತಾ ಗುತ್ತದೆ. ಹಾಗಾಗಬಾರದು ಎಂಬುದು ಇಂದಿನ ವೈಜ್ಞಾನಿಕ ಎಚ್ಚರಿಕೆಯಾಗುತ್ತದೆ ಎಂದು ನೋವಿ ನಿಂದಲೇ ಹೇಳಬೇಕಾಗಿದೆ.

ನಮ್ಮ ವೈಜ್ಞಾನಿಕತೆಯೂ ಖಚಿತವಾಗುತ್ತಿಲ್ಲ. ಆದುದರಿಂದ ಸಂಶೋಧಕರು ಎಚ್ಚತ್ತುಕೊಳ್ಳುವುದು ಒಂದು ತುರ್ತಿನ ಅವಶ್ಯಕತೆಯಾಗಿದೆ. ಇನ್ನು ಮುಂದಾದರೂ ತರುಣರು ಮುಂದಿನ ಕಾಲವನ್ನು ತಿದ್ದಿಕೊಳ್ಳುತ್ತಾ ಬೆಳೆಯುವ ಅವಶ್ಯಕತೆಯನ್ನು ಒತ್ತಿ ಹೇಳಲು ಪ್ರಯತ್ನಿಸಿದ್ದೇನೆ.

ಇಂದು ನಮಗೆ ಧರ್ಮಜಿಜ್ಞಾಸೆಯು ಮುಖ್ಯ ವಾಗುತ್ತಿಲ್ಲ. ಏಕೆಂದರೆ ಇಹಪರಗಳಲ್ಲಿ ಒಂದನ್ನು ಮಾತ್ರ ಅಂಗೈಯ ನೆಲ್ಲಿಯಂತೆ ಕಾಣುತ್ತಿದ್ದೇವೆ. ಪಂಪನು ಹೇಳುವಂತೆ 'ಪರ'ದ ಅರಿವಿಗೆ ಈಗಲೂ ಯತ್ನಿಸಬಹುದು ಎಂದರೆ ಅದಕ್ಕೆ ಹಿಂದಿನ ಯಾವುದೂ ಜೈನಧರ್ಮ ಕೂಡ ಸಾಧುವೆಂದು ಕಂಡುಬರುತ್ತಿಲ್ಲ. ಈಗ 'ಮಾನವ ಧರ್ಮ' ಎಂಬ ಹೊಸ ನೀತಿಯನ್ನೇ ಅನುಸರಿಸಬೇಕಾಗಿದೆ. ಅಲ್ಲದೆ ಬದುಕು ಒಂದು ಭರವಸೆಯಾಗಿ ಕಾಣುತ್ತಿಲ್ಲ. ಮುಂದಿನದು ಮುಂದಿನ ಚಿತ್ತಕ್ಕೆ ಬಿಡಬೇಕಾಗಿದೆ. ಪಂಪನಿಗೆ ಒಂದು ಉತ್ತರ ದೊರಕಿದ್ದಿರಬೇಕು. ಅದರಲ್ಲಿ ಕಱಿಕೆ ಗರ್ಚಿದ ಕೋಗಿಲೆಯ ವಸಂತವು ಮಾತ್ರವೇ ಕಾಣುತ್ತಿರ ಬಹುದು. ವಿಜ್ಞಾನಕ್ಕೆ ಇದೇ ಅಳತೆಗೋಲಾದರೆ ಬದುಕಿಗೆ ಅಷ್ಟೂ ಸಾಲದಾಗುತ್ತದೆ. ಆದುದರಿಂದ ಶೀಘ್ರವೇ ಕಳೆದುಹೋಗುವ ಬದುಕಿನ ವಸಂತ ವೊಂದೇ ಮುಂದಿನ ಸಾಧ್ಯತೆಯಾಗಬಹುದಾಗಿದೆ. ಅಂತಹ ಹೊಂದಾಣಿಕೆಯು ಅವಶ್ಯವಾಗುತ್ತದೆ. ಬದುಕಿನ ಆಚೆಯನ್ನು ಕುರಿತ ತಾತ್ವಿಕತೆಗೆ ಕೊಂಚ ವಿರಾಮಬೇಕಾದೀತು. ಪಂಪನು ತನ್ನ ಮುಕ್ತಿಮಾರ್ಗ ವನ್ನು ಕಂಡುಕೊಂಡಂತೆ ನಮಗೆ ಆಗಲಾರದು. ವೀರಶೈವಧರ್ಮವೂ ನಮಗೆ ಸಾಲದು. ಏಕೆಂದರೆ ಅಂತಹ ಉತ್ತರವು ಕನಸಿನದು, ಖಚಿತವಾದುದಲ್ಲ ಎಂದು ವಿಜ್ಞಾನವು ಸಾರುತ್ತದೆ. ಜಾತೀಯತೆ ಸಾಲದು, ಅದನ್ನು ದಾಟಿದ ಸ್ಥಿತಿಯಾಗಬೇಕಷ್ಟೆ!

ಬೆಂಗಳೂರು **ಕ. ವೆಂ. ರಾಜಗೋಪಾಲ**

---

**ಶ್ರದ್ಧಾಂಜಲಿ**



**ಜಿ. ನಾರಾಯಣ**
(೧೯೨೩ - ೨೦೧೧)

ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರು, ನಗರ ಕಾರ್ಪೊರೇಷನ್ನಿನ ಮಾಜಿ ಮೇಯರು ಮತ್ತು ಕನ್ನಡಪರ ನಿಷ್ಠಾವಂತ ಕಾರ್ಯಕರ್ತರು ಆದ ಜಿ. ನಾರಾಯಣ ಗತಿಸಿದ್ದಾರೆ. ಅವರಿಗೆ ನವಕರ್ನಾಟಕ ಮತ್ತು 'ಹೊಸತು' ಗೌರವಪೂರ್ವಕ ಸಂತಾಪ ಸೂಚಿಸುತ್ತವೆ.

ಬಸಿದಷ್ಟು ಬಸರು ತುಂಬಿಕೊಳ್ಳುತ್ತಿದ್ದ ಕಿಡಿಗಳಲ್ಲಿ ಬೆಂದವರು ಕರಕಲಾಗಿದ್ದರು. ಹುರಿಗೊಂಡ ಮೈ-ಕೈಗಳಿಂದ ಕಮಟು, ಜಿಗಟು ವಾಸನೆ ಬಂದು ಮನೆಯಂತ ಮನೆಯಲ್ಲವಾದರೂ... ಹಿಡಿಯಿತು. ಕಿರಗುಡುವ ಕಿವಿಗಡಚಿಕ್ಕುವ ಗೋಡೆಯಿಂದ ಹತ್ಯಾರಗಳು ಇಣುಕಿದವು, ಒಂದಲ್ಲ ಎರಡಲ್ಲ ಇತಿಹಾಸದ ಎಲ್ಲ ನಮೂನೆಯ ಕಲ್ಲು, ಕಟ್ಟಿಗೆ, ಕಬ್ಬಿಣ, ಉಕ್ಕು, ತಾಮ್ರ, ಸೀಸದ ಆಯುಧಗಳ ಮೊನೆಯಿಂದ ರಕ್ತ ಒಸರುತ್ತಿತ್ತು. ತೊಯ್ದು ತೊಪ್ಪಡಿಯಾಗಿದ್ದ ದೇಹಗಳು ಮಾಯವಾದವು... ಗಾಬರಿಯಲ್ಲಿ ಹಲಗೆ ಬೀಳಿಸಿದ ಕರೇ ಚೇಳು ತನ್ನ ನಾಕಾರು ಮರಿಗಳೊಂದಿಗೆ ಅವಿತುಕೊಳ್ಳಲು ದಿಕ್ಕಾಪಾಲಾಗಿ ಓಡಿತು. ಇವನು ಭ್ರಮೆಗೆ ಬೆವೆತುಹೋಗಿದ್ದ. ಬಚ್ಚಲಿಗೆ ಹೋಗಿ ಮುಖಕ್ಕೆ ನೀರು ಚಿಮುಕಿಸಿದಾಗ ಮುಖವೆಲ್ಲ ರಂಗೇರಿತು, ತಿಕ್ಕಿದಷ್ಟು ಕೆಂಪೇರಿತು, ಕಣ್ಣು ಕೆಂಪಾದವು ಈಗ ಕಾಣುವದೆಲ್ಲ ರಣರಣಾ ರಾವು ಹೊಡೆಯುತ್ತಿತ್ತು. ಬಾಗಿಲಲ್ಲಿ ಬಲವಾದ ಬಡಿಗೆ ಹಿಡಿದ ಹರೆಯದ ಹುಡುಗನೊಬ್ಬ - ತಾಯಿಯ ತಾಳಿಗೆ, ಕುಂಕುಮಕ್ಕೆ - ಪ್ರತೀಕಾರ ಬಯಸಿದ್ದ.

# ನಿಯತಿ

**ಮಹದೇವ ಹಡಪದ**

ಜೈಲಿನಿಂದ ಹೊರಬಂದಾಗ ಸಾವಿನ ಆಚೆಯ ಭಯಂಕರ ಲೋಕದಲ್ಲಿ ಕಾಲಿಟ್ಟಂತಾಯಿತು. ವಾಸದ ಕೋಣೆ, ಬಟ್ಟೆ ಒಗೆಯುವ ಕೆಲಸ, ಬೆಳಗಿನ ಪ್ರಾರ್ಥನೆ, ಒರಟಾದ ಮಾತಿನೊಳಗಿನ ಮೃದುತನ, ಊಟದ ಸಾಲು, ಹೊದೆಯುವ ಬಟ್ಟೆ, ಕಲ್ಲು ಬೆಂಚಿನ ನುಣುಪು, ಹೂವಿನ ತೋಟ, ಎಲ್ಲ ಒಂದೊಂದಾಗಿ ನೆನಪಾದವು. ಅಲ್ಲಿ ಮೂಡುವ ಸೂರ್ಯ, ಇಲ್ಲಿ ಉರಿಯುತ್ತಿರುವ ಸೂರ್ಯ ಬೇರೆ ಬೇರೆ ಎಂದು ಭಾವಿಸಿದ. ಹೆಂಡತಿ ಕೊಂದಾಗ ಭಾರಿ ಸೆಳವಿನ ಸುಳಿಯಲ್ಲಿ ಸಿಕ್ಕು ಒದ್ದಾಡಿದ್ದ. ಮತ್ತದೆ ಖಾಲಿತನದ, ಆತ್ಮಹತ್ಯೆಯ ಎಳೆ ಮನಸ್ಸಿನಲ್ಲಿ ಮೂಡಿದಾಗ ಮಹಾತ್ಮಾಜಿ ಅವರ ಫೋಟೊ ನೆನೆದ – ಆ ಚಿತ್ರದ ಚಿತ್ತ ಇವನ ಬಂಜೆತನವ ಕಂಡು ಮರುಗುತ್ತಿತ್ತು. ಹೋಗುವುದೆಲ್ಲಿಗೆ ? ಹಾಳು ಸುರಿದು ದೆವ್ವಿನ ಮನೆಯೆಂದು ಹೆಸರಾದ ಆ ಊರಿನ, ಆ ಕೇರಿಯ, ಆ ಮನೆಗೆ... ಮತ್ತೆ ಹೊಸ ಬದುಕ ಕಟ್ಟಿಕೊಳ್ಳುವ ಹಂಬಲವಿರಲಿಲ್ಲ. ಹಿಂಬಾಲಿಸುವ ನೆರಳಿಗೂ ಹೆದರಬೇಕಾದ ಅನಿವಾರ್ಯ ಬಂದೊದಗಿತ್ತು. ವರಾಂಡ ದಾಟುವ ತನಕ ಗೋಡೆಯ ಕವನೆಳ್ಳಿಗೆ ಬರುವ ತನಕ ಅವರೆಲ್ಲ ಕೈ ಎತ್ತಿ ವಿದಾಯ ಹೇಳುತ್ತಿದ್ದರು, ಆಸೆ ಗಣ್ಣಿಂದ ಬೀಳ್ಕೊಡುತ್ತಿದ್ದ ಅವರ ಮನದಲ್ಲಿ ''ಒಂದಲ್ಲ ಒಂದು ದಿನ ನಾವೂ ಹೀಗೆಯೆ ಹೊರಬರುತ್ತೇವೆ'' ಎಂಬ ಅಚಲ ನಂಬಿಕೆ ಮೂಡಿರಬಹುದು... ಹಿರಿಯ ದೋಬಿ ಬಿಗಿ ಅವುಚಿ ಹಿಡಿದು, ''ನೆನಪಿರಲಿ'' ಎಂದು ಬಿಕ್ಕಳಿಸಿದ. ಆಲದ ಮರದ ಗಂಟೆ ಬಾರಿಸಲು ಅವರು ಅತಿ ವಿನಯದಿಂದ ಮಾತಾಡಿಸಿ ತಮ್ಮ ಕೆಲಸಗಳಿಗೆ ನಡೆದರು. ನಡಾವಳಿ ಪತ್ರ, ಉಳಿತಾಯದ ರೊಕ್ಕ ಕೈಗಿಟ್ಟು ಬೆನ್ನು ಚಪ್ಪರಿಸಿದ ಜೈಲರ್, ''ಹದ ಹಿಡಿದು ಬಾಳೇವ್ ಕಟ್ಟಕೋ'',... ಮುಂತಾಗಿ ಈ ಜೀವ ಜಗತ್ತಿನ ಬಗ್ಗೆ ತನಗಿದ್ದ ಅಸಮಾಧಾನ ತೋಡಿಕೊಂಡ. ತಲೆ ಧಿಮ್ಮಂತ ಭಾರ ಹೊತ್ತು ಪೊರೆ ಕಳಚಲಿರುವ ಹಾವಿನ ಮಬ್ಬುತನ, ಜಿಡ್ಡುತನದ ಸಂಕಟದಲ್ಲಿ ಒದ್ದಾಡಿದ.

ಗೋಡೆಯ ಹೊರಭಾಗದಲ್ಲಿ ರಣ ಹೊಡೆಯುವ ಬಿಸಿಲಿತ್ತು. ಹದಿನಾಲ್ಕು ವರ್ಷದ ಹಗಲು ರಾತ್ರಿಗಳು ಮುಹೂರ್ತ ಕಾಲ ಮೂಡಿ ಮಾಯವಾದವು. ಗಿಡದ ನೆರಳಿನಲ್ಲಿ ಬಿಲ್ಡಿಂಗಿಗೆ ಒತ್ತಿಕೊಂಡು ದಣಿವಾರಿಸುತ್ತ ಕುಳಿತವರ ಕೈಯಲ್ಲಿ ಬುತ್ತಿಚೀಲ, ನೀರಿನ ಬಾಟಲಿ, ಕೊಡೆಗಳಿದ್ದವು. ಟಾರಿನ ಮೇಲೆ ಗದ್ದಲವೋ ಗದ್ದಲ – ತಾರಕದಲ್ಲಿ ಕಿರುಚುವ ಧ್ವನಿಗಳು – ಬಾಗಿಲಿಗೆ ಜೋತುಬಿದ್ದರೂ ಜನ ಮಂದೆಯ ಒಳಗೆ ದಬ್ಬುತ್ತ ಜಾಗ ಮಾಡಿಕೊಡುತ್ತಿದ್ದ ಕಂಡಕ್ಟರ್ ದೂರದಿಂದಲೇ 'ಪರಿಚಯದವ' ಎಂಬಷ್ಟು ಆಪ್ತವಾಗಿ ಕೂಗಿ ಕರೆದ... ಈಗ ಮತ್ತೊಮ್ಮೆ ನೆನೆಗುದಿಗೆ



ಬಿದ್ದ ಪ್ರಶ್ನೆ, ''ಹೋಗುವುದೆಲ್ಲಿಗೆ ?''

ಸುಳಿದಾಡುವ ಮನದೊಳಗ ಏನು ಮೂಡಿತೊ 'ಭರ್ರ' ತುಂಬಿದ್ದ ಬಸ್ಸಿನೊಳಗ ಒಂದ ಕಾಲಿಡುವಷ್ಟು ಜಾಗ ಮಾಡಿಕೊಂಡು ಬಾಗಿಲಲ್ಲೇ ಜೋತಾಡಿದ. ದೇಹದ ಅರ್ಧಭಾಗ ನೆಲೆ ಕಂಡಿತ್ತು. ಉಳಿದರ್ಧ ಗಾಳಿಯಲ್ಲಿ ತೇಲಾಡಿಕೊಂಡು ಸೀಟಿನ ಹಿಂಭಾಗದ ಹಿಡಿಕೆಯಲ್ಲಿ ಆಸರೆ ಕಂಡಿತ್ತು.

ಒಳ ಹೊರಗೇನಿಲ್ಲ ಶ್ರುತಿಗೂಡದ ಮನಕ
ಅನುದಿನವೂ ನಿನ್ನೊಲವಿನ ಧ್ಯಾನ। ಬಸವಾ
ನಿನ್ನ ನಿಲವು ಇರಗೊಡಲಿಲ್ಲ ನಿನ್ನೊಳಗೆ...

– ಎದುರು ಬೀಸುವ ಗಾಳಿಗೆ ಭಜನಿ ಹಾಡಿದ. ಜಗತ್ತಿನ ದನಿಯೊಳಗೆ ದನಿಗೂಡಿಸದೆ ಕಿರುಚಿ ಹಾಡಬೇಕೆಂದಿದ್ದ, ಆದರೆ ಅದಾಗಲೆ ಬಸ್ಸು ಸ್ಟ್ಯಾಂಡಿನೊಳಗೆ ನಿಂತಿತ್ತು. ಇವನು ಇಳಿಯಬೇಕಿರಲಿಲ್ಲ, ಹಿಂದಿನಿಂದ ಯಾರೊ ತಳ್ಳಿದರು ನೆಲಕ್ಕೆ.

ಥರಗುಟ್ಟುವ ಛಳಿಯಲ್ಲಿ ಉಳಿದರ್ಧ ರಾತ್ರಿಯ ತೀರಿಸಿ ಹುಟ್ಟಿ ಬೆಳೆದಾಡಿದ ಮನೆ ಕಾಣುವ ಹಂಬಲ ಹೊತ್ತು ಬಂದಿದ್ದ. ಬಿಕೋ ಎನ್ನುತ್ತಿದ್ದ ನಿಲ್ದಾಣದಲ್ಲಿ- ಕಲ್ಲು ಬೆಂಚಿನ ಕೆಳಗೆ ಸಂದುಗೊಂದುಗಳಲ್ಲಿ ಒಂದೆರಡು ಆಕೃತಿಗಳು ಚೋಟುದ್ದದ ಕಂಬಳಿ ಕಾಲಿನವರೆಗೂ ಎಳೆದು ಗೂಡುಗಾಲು ಹಾಕಿ ಮುದುರಿಕೊಂಡು ಮಲಗಿದ್ದು ಕಾಣಿಸಿತು. ಹಿಂಬದಿಯ ತಾರಸಿಯ ಕೆಳಗೆ ಯಾರೋ ಹೂಂಗುಟ್ಟಿ ಕೆಮ್ಮಿದರು... ಅಲ್ಲಿ ಮೂರ್ನಾಲ್ಕು ಮಂದಿ ಬೆಂಕಿ ಕಾಯಿಸುತ್ತಿದ್ದರು. ಥಂಡಾ ಹವೆಯಲ್ಲಿ ಬಿಸಿಗೆ ಮೈವೊಡ್ಡುವ ಆಸೆಯಿಂದ ಅತ್ತ ನಡೆದ- ಅವರು ಏಕಾಏಕಿ ಎದ್ದು ನಿಂತು ''ನೋಡುತ್ತಿಲ್ಲ'' ಎಂಬಂತೆ ನಾಜೂಕಾಗಿ ನಟಿಸುತ್ತ ಗಮನಿಸತೊಡಗಿದರು. ಮಾತಿಗೆ ಮೊದಲಾಗಿ ನಯವಿನಯದಿಂದ ''ವ್ಯಾಳ್ಯಾ ಎಷ್ಟ ಆಗೆದ ?'' ಕೇಳಿದ. ''ಸಾಡೇ ದೋ'' ವಾಚ್ ಕಟ್ಟಿದವನೊಬ್ಬ ಉತ್ತರಿಸಿದ. ಹತ್ತಿರಕ್ಕೆ ಹೋದಾಗ ಅವರೆಲ್ಲ ದೂರ ಸರಿದು ಮಿಕಿ ಮಿಕಿ ಮುಖ ನೋಡಿಕೊಂಡರು. ''ಯಾವೂರು ?'' ಅವರಲ್ಲೊಬ್ಬ ಕೇಳಿದ. ಜೀವಿತಾವಧಿಯ ಅರ್ಧ ಆಯಸ್ಸನ್ನು ಜೈಲಿನಲ್ಲಿ ಕಳೆದ ಇವನಿಗೆ ಯಾವ ಊರ ಹೆಸರು ಹೇಳಲಿ ಎಂಬ ಆತಂಕ. ಅವರ ಗಮನ ತನ್ನ ಬಗಲ ಚೀಲದೊಳಗಿನ ಕೊಡಲಿ ಕುಡಗೋಲುಗಳತ್ತ ಹೋಗಿತ್ತು, ಆದರೆ ಇವನ ಸಂಭಾವಿತ ಮುಖ ಅವರ ಉದ್ರೇಕಿತ ಮನಸ್ಸನ್ನು ಹಗುರಗೊಳಿಸಿತು. ತನಗೆ ಸ್ಪಷ್ಟವಾಗದ ಕೆಲವು ಪ್ರಶ್ನೆಗಳಿಗೆ ಅವನು ಎಂದೂ ಉತ್ತರ ಹೇಳಲು ಬಯಸಿದವನಲ್ಲ ಮತ್ತು ಆ ಹೊತ್ತಿನಲ್ಲೆಲ್ಲ ಉಸಿರು ಹಿಡಿದುಕೊಂಡು ತಣ್ಣಗಿರುತ್ತಿದ್ದ. ದೂರದಲ್ಲಿ ಬುಲೆಟ್ ಗಾಡಿ ಬರುವ ಸದ್ದಿಗೆ ಅವರೆಲ್ಲ ತಾಬಡತೋಬಡ ಕತ್ತಲಿಗೆ ಸರಿದರು. ಸದ್ದು ಹತ್ತಿರಕ್ಕೆ ಬಂದು ಪೊಲೀಸ್ ವಸತಿಗೃಹಗಳತ್ತ ಹೋಯಿತು.

''ಅದು ನನ್ನ ತಾಯಿಯ ತವರುಮನಿ. ಅಲ್ಲಿ ಯಲಿಗಾರ ಸಿದ್ದಜ್ಜ ಅಂತ ಇದ್ದನಲ್ಲ ಅವರ ಮೊಮ್ಮಗ ನಾನು.'' ಅವರು ತದೇಕ ಚಿತ್ತದಿಂದ ನೋಡುತ್ತಿದ್ದರು. ಒಬ್ಬ, ''ನೀ ಹೆಣ್ತಿ ಸಾಯ್ಸಿ ಜೈಲಿಗೆ ಹೋದಾಂವ ಅಲ್ಲ?'' ಎಂದು ಕೇಳಿದ. ಎದೆ ಧಸಲ್ ಎಂದಿತು. ''ನೀನಾದ್ರೂ ಏನ್ ಮಾಡೀಯ ? ಅಂಥಾಕಿ ಇದ್ದಳು ಬಿಡು, ಪಡಕೊಂಡು ಬಂದದ್ದು ಬಯಸಿ ಬೇಡಿದಳು.'' ಕೋಳಿ ಕೂಗುವ ಸರಿ ಹೊತ್ತಿಗೆ ಊರ್ ಮುಟ್ಬೋಣ ಎನ್ನುತ್ತ ಅವರೆಲ್ಲ ಹೊರಡುವ ತಯ್ಯಾರಿ ನಡೆಸಿದರು. ನಾಳೆಗೂ ಕರ್ಫ್ಯೂ ಮುಂದುವರಿದರೆ ಪೊಲೀಸರ ಕಣ್ಗಾವಲು ತಪ್ಪಿಸಿ ಅವರ ಇಕ್ಕೆಲವು ಮುರಿದು ಪರಾರಿ ಆಗುವುದೆಂದು ಗುಂಪಾಗಿ ತೀರ್ಮಾನಿಸಿದರು. ಹಿರೀಕನೊಬ್ಬ ಹೆಗಲ ಮೇಲೆ ಕೈಯಿಟ್ಟು, ''ನೋಡ್ ತಮ್ಮ, ಈಗ್ ನೀನ್ ಹೊಂಟ ಊರಂಬೋದು ಊರಾಗಿ ಉಳಿದಿಲ್ಲ, ನಾಕ್ ದಿನ ಆತು ಸುಡುಗಾಡ್ ಆಗ್ಯದಾ... ಅಂಗಡಿ ಮನಿಗಳು ಬೆಂಕಿಗಿ ಬಿದ್ದಾವು. ನಮಗೆಲ್ಲಾ ಯಾಕ ಬೇಕಿತ್ತು ಇದೆಲ್ಲ! ಈ ಹಾಳು ಜಾತಿ ಧರ್ಮದ ಕಾಲಾಗ ನಾವೆಲ್ಲ ಸತ್ಯಾನಾಸ ಆಗೇವಿ.'' ಉಳಿದವರು ಲೊಚಗುಟ್ಟುತ್ತ ತರಾತುರಿ ಮಾಡಿದರು. ''ಒಂದು ಸಣ್ಣ ಅವಘಡ ಆ ಊರಿನ ನೆಮ್ಮದಿ ಕೆಡಿಸೆದೋ ತಮ್ಮ, ಈ ಯಾಳೆಕ್ಕ ನೀ ಆ ಊರು ಕಾಣೂದು ಬ್ಯಾಡ... ಹೆಂಗ ಬಂದಿದಿ ಹಂಗ ತಿರುಗಿ ನಿನ್ನೂರಿಗೆ ಹೊಂಡು.'' ನಾಲ್ಕು ಬುದ್ಧಿಮಾತು ಹೇಳಿದ ಗತ್ತಿನಲ್ಲಿ ಕಣ್ಸನ್ನೆ ಮಾಡಿ ಅವರೊಡಗೂಡಿ ನಡೆದ. ಸಿದ್ದಜ್ಜ ಇರುವಾಗ ಆ ಊರಿನ ದೈವ ಎಲ್ಲದನ್ನೂ ಏಕಮಾಡಿ 'ಅಲ್ಲಾ'ಗೆ ನೈವೇದ್ಯ ನೀಡತಿದ್ದ ಆ ಊರೊಳಗ, ಇಂದು ನಾ ಹಿಂದೂ, ನೀ ಮುಸಲ್ಮಾನ್ ಅನ್ನುವ ಸಣ್ಣತನ ಮೂಡಿದ್ದಾದರೂ ಹೇಗೆ ? ಬಾಲ್ಯದ ನೆನಪುಗಳ ಹೊತ್ತು ಬಂದಿದ್ದ ಜೀವಕ್ಕೆ ಆ ಊರಿನ ಅಂಗಳದಲ್ಲಿ ನಿಗಿನಿಗಿ ಕೆಂಡ ಉರಿಯುತ್ತಿದ್ದದ್ದು ಕೇಳಿ ಮೈ ನರನಾಡಿಗಳು ತಣ್ಣಗಾದವು. ಅಜ್ಜನ ತಿಥಿಗೆ ಬಂದಾಗ ಕಣ್ತುಂಬ ನೀರು ತುಂಬಿಕೊಂಡಿದ್ದರಿಂದ ಆ ಊರು ನೆನಪಾಗಿ ಉಳಿದಿರಲಿಲ್ಲ, ಈಗ ಅಲ್ಲಿಗೆ ಹೋದರೂ ತನ್ನವರೆನ್ನುವ ಕರುಳು ಇದ್ದಿರಲಿಲ್ಲ, ಆದ್ದರಿಂದ ಬೆಳಗಿನ ಹಾಲಿನ ಗಾಡಿ ಹಿಡಿದು ಹಣೂರ ತಲುಪುವದೆಂದು ನಿರ್ಧರಿಸಿ, ನಾಲ್ಕು ರಸ್ತೆಯ ಮೂಲೆಗೆ ಬಂದು ಹೊರಟಿದ್ದ ಲಾರಿಯೊಂದಕ್ಕೆ ಕೈವೊಡ್ಡಿ ಹಣೂರ ತಲುಪಿದ.

ಚುಮುಕು ಬೆಳಕಿನಲ್ಲಿ ಗುಡ್ಡದ ವಾರೆಯಗಲಕ್ಕೂ ಹಬ್ಬಿ ನಿಂತ ಊರು ಗುರುತಿಸಲಾರದಷ್ಟು ವಿಪರೀತ ಬೆಳೆದುನಿಂತಿತ್ತು. ಈ ಬಿಲ್ಡಿಂಗ್ ಮನೆಗಳ ಮುಂದೆ ದೇಸಾಯರ ಆರೆಳಂಕಣದ ವಾಡೆ ದನ ಕಟ್ಟುವ ದಂಢಕ್ಕಿ ಹಾಗೆ ಕಾಣಿಸಿತು. ಅಂದು ಊರಿಗೆ ಊರೇ ತನ್ನ ತಾ ಕೆಲಸದಲ್ಲಿ ತೊಡಗಿಸಿಕೊಂಡಿರುತ್ತಿತ್ತು, ಇಂದು ಅದೆ ಹಣೂರು ಸೂರ್ಯ ಮೂಡಿದರೂ ಮಲಗಿ ನಿದ್ರಿಸುತ್ತಿತ್ತು. ಧರ್ಮಣ್ಣನ ಹೆಂಡತಿ ಅಂಗಳ ಉಡುಗಿ ಸಗಣ ಸಾರಿಸುತ್ತಿದ್ದಳು. ಚಣ ಹೊತ್ತು ಸೇಡು ತೀರಿಸಿಕೊಳ್ಳಲು ಮೈ-ಮನ ತುಡಿಯುತ್ತಿತ್ತು... ಗಾಂಧಿಯವರ ನೆನಪಾಗುತ್ತಲೇ ಮನುಷ್ಯತ್ವ ಕಾಡಿತು... ನೆಲದಲ್ಲಿ ನೆದರಿಟ್ಟು ಮನೆಯಂಗಳದಲ್ಲಿ ನಿಂತಿದ್ದ ವಾರಸುದಾರರಿಲ್ಲದ ಹಾಳು ಮನೆ-ಮಾಳಿಗೆ ಮೇಲೆ ಮೊಣಕಾಲುದ್ದ ಬೆಳೆದ ಹುಲ್ಲು, ಹುಳು ಹಿಡಿದ ಛಾವಣಿಯ ಕಂಬ, ಕಾರಹುಣ್ಣಿವೇಲಿ ಬರೆದಿದ್ದ ಸ್ವಸ್ತಿಕ ಚಿತ್ರ ಮಸ್ಕಮಸುಕು ಹಾಗೆ ಉಳಿದಿತ್ತು. ಬಾಗಿಲಿಗೆ ಅಂಗೈ ಅಗಲದ ಕೀಲಿ ಹಾಕಲಾಗಿತ್ತು. ನಸುಕಿನಲ್ಲಿ ಹೀಗೊಬ್ಬ ದೆವ್ವಿನ ಮನೆ ಮುಂದೆ ನಿಂತಿದ್ದು ಖಾಸೀಮನ ಕಿವಿಗೆ ಬಿದ್ದಿತೊ ಏನೋ, ರಸ್ತೆಯಿಂದಲೆ ಕೂಗಿದ, ''ಓ ಮುತ್ತು ಭಯ್ಯಾ, ಯಾವಾಗ್ ಬಂದಿದಿ ? ಮನೀಗ್ ಬಾ.''

ಆಗಿನ್ನೂ ಮೀಸೆ ಮೂಡಿದ್ದ ಖಾಸೀಮನ ಮುಖದಲ್ಲಿ ಇಂದು ಗಡ್ಡ ಹುಲುಸಾಗಿ ಬೆಳೆದಿತ್ತು.

ಖಾಸೀಮನ ಮನೆ ತುಂಬ ಮಂದಿ ತುಂಬಿದ್ದರು. ಅವರೆಲ್ಲ ತೋರಣವಾಡಿಯಿಂದ ಬಂದಿದ್ದರು. ಖಾಸೀಮನ ಹೆಂಡತಿ ಕೈ ಕಾಲು ಮುಖ ತೊಳೆದಾದ ಮೇಲೆ ಬಟ್ಟಲು ತುಂಬ ಕರೇ ಚಹ ಕೊಟ್ಟಳು. ಕುಲು ಕುಲು ನಗುತ್ತಲಿದ್ದ ಖಾಸೀಮ ಬಂದವರಿಗೆ ಮತ್ತು ಮಕ್ಕಳಿಗೆ ಮುತ್ತು ಭಯ್ಯಾನ ಗುರ್ತು ಹೇಳಿದ. ಹದಿನಾರು ವರ್ಷದ ಊರಿನ ಬಾರಹ್ ಬಾನಗಡಿ ಮಾತಾಡುವುದಿತ್ತು. ''ಮತ್ತೇನು ಭಯ್ಯಾ ಯಾವಗ ಬಿಡುಗಡಿ ಆತು,'' ಮಾತಿಗೆ ಪೀಠಿಕೆ ಹಾಕಿದ. ಮಾತಿಗೆ ಕುಳಿತರೆ ತೀರದು ಎನ್ನಿಸಿ, ''ಮನೀಗಿ ಹೋಗಿ ಬರಾಣ ಬಾ'' ಎಂದು ಹೊರಟ. ಖಾಸೀಮನ ಹೆಂಡತಿ ''ಹುಳ ಹುಪ್ಪಟಿ ಇರ್ತಾವ್. ಗ್ವಾಡಿ ಸರದದ ಹುಷಾರು'' ಎಂದಳು. ಬೆನ್ನು ಬಿದ್ದು ಬರುತ್ತಿದ್ದ ಸಣ್ಣ ಕೂಸನ್ನು ಬೆದರಿಸಿ ಹೆಂಡತಿ ಹತ್ತಿರ ಕಳಿಸಿದ. ಅಳುವ ಕಂದನಿಗೆ ''ಅಲ್ಲಿಗೆ ಸಣ್ಣ ಪೋರರೆಲ್ಲ ಹೋಗಬಾರದು, ಅವ್ರು ಆ ಜೋಡಿ ದೆವ್ವಿನ ಮನೀಗೆ ಹೊಂಟಾರೂ, ನೀ ಶಾಣ್ಯಾ ಹೌಂದಲ್ಲೊ... ? ಹಂಗೆಲ್ಲ ಹಟ ಮಾಡಬಾರ್ದು'' ಎಂದು ಅವಳು ರಮಿಸುತ್ತಿದ್ದಳು.




ರಾವು ತುಂಬಿದ್ದ ಮನಿಯೊಳಗ ಕಾಲಿಟ್ಟಾಗ ಮಡುಗಟ್ಟಿದ್ದ ದುಃಖ ಕಟ್ಟೆಯೊಡೆಯಿತು. ವಾರಪಡಸಾಲಿ, ದೇವರ ಖೋಲಿ, ಅಡಿಗಿ ಮನಿ ಗಟ್ಟಿಮುಟ್ಟಾಗಿದ್ದವು. ಎಡಕಿನ ಗೋಡೆ ಕುಸಿದಿತ್ತು, ಜಂತಿಯ ತುಂಬೆಲ್ಲ ಜೇಡ, ಬಾಗಿಲು ನೆರ್ತಿಗೆ ಹೆಗ್ಗಣ ಮಣ್ಣು ಗುಡ್ಡೆ ಹಾಕಿತ್ತು. ಊರಿನ ಆಗುಹೋಗುಗಳ ವಟಗುಟ್ಟುತ್ತಿದ್ದ ಖಾಸೀಮರು, ''ಭಯ್ಯಾ, ಇಡೀ ಮನಿ ಒಂದಿನಕ್ಕ ಹಸನ ಮಾಡ್ಲಿಕ್ಕ ಆಗೂದಿಲ್ಲ, ಇಂದು ನೀವು ನಮ್ಮಲ್ಲೆ ಉಳಿದು ನಾಳೆ ಬರೀರಂತ'', ಎಂಬುದಾಗಿ ಸೂಚಿಸಿದರು. ಆ ದಿನ ಕಸ,ಮಣ್ಣು, ಧೂಳು, ಜೇಡ ತೆಗೆದು ಖಾಸೀಂ ಖಾದ್ರಿ ಮನೆಯಿಂದ ಚಿಮಣಿ ಬುಡ್ಡಿ ತಂದು ಹಚ್ಚಿಟ್ಟು ಸಂಜೆ ಊರೊಳಗೆ ಹೊರಟ. ಧರ್ಮಣ್ಣನ ಹೆಂಡತಿ ಕೆಕ್ಕರಗಣ್ಣಲ್ಲಿ ದಿಟ್ಟಿಸುತ್ತ, ಮೊಬೈಲಿನಲ್ಲಿ ಅಳುತ್ತಳುತ್ತ ಮಾತಾಡುತ್ತಿದ್ದಳು. ಬಸವಣ್ಣ ದೇವರ ಗುಡಿಯ ಮುಂದೆ ಯಾರಂದ್ರ ಯಾರೂ ಇರಲಿಲ್ಲ. ಆಟ, ದೊಡ್ಡಾಟ, ಬಯಲಾಟ, ಕೋಲಾಟ, ಭಜನೀ ಅಂತ ಹಲಾನ್ನುಲೇ ನಡೆಸತಿದ್ದ ಸಂಘದ ಕೋಣೆಯು ಇಂದು ಟೆಲಿಫೋನ್ ಆಫೀಸಾಗಿತ್ತು, ಗುಡಿಯ ಹಿಂದೆ ಕಳಸಕ್ಕಿಂತಲೂ ಎತ್ತರದ ಉದ್ದಾನುದ್ದದ ಟವರ್ ನಿಂತಿತ್ತು. ಎಲ್ಲ ಮನೆಗಳ ಪಡಸಾಲೆಯಲ್ಲಿ ಮಾಯಾ ಪೆಟ್ಟಿಗೆಯ ಮೋಜು ಬಂದುದರಿಂದ ಊರಿನ ಸಾಂಸ್ಕೃತಿಕ ಸಂಭ್ರಮ ಕಳೆಗುಂದಿ ಅವರವರ ಭಾವ ಪ್ರಪಂಚದಲ್ಲಿದ್ದರು. ಚಂದಮುತ್ತನ, ಮುತ್ತಾಲಾಲನ, ಸೂರ್ಯ ಮುತ್ತನ, ಏಳು ಹೆಡಿ ಸರ್ಪದ ಕತೆಗಳನ್ನ ಹೇಳುವವರಿಲ್ಲ, ಇಲ್ಲಿ ಕೇಳುವವರೂ ಇಲ್ಲ. ಉಂಡಾದ ಮೇಲೆ ಖಾಸೀಮನ ಹೆಂಡತಿ ಅಮಾಸಿ ದಿನ ಹೋಗುವುದಬೇಡವೆಂದು ಒತ್ತಾಯ ಮಾಡಿ ಕಟ್ಟೆಯ ಮೇಲೆ ಹಾಸಿಗೆ ನಿಗಚಿಕೊಟ್ಟಳು.

ಸರೂ ರಾತ್ರಿಗೆ ತೋರಣವಾಡಿಂದ ಹೆಣಮಗಳೊಬ್ಬಳು ಜೊತೆಗೆ ಕೂಸಿನ್ನ ಕರಕೊಂಡು ಬಂದಿದ್ದಳು. ''ತೋರಣವಾಡಿ ಪೊಲೀಸರಿಗೆ ನೀವು ಇಲ್ಲಿರೋದು ಗೊತ್ತಾಗೆದ, ನೀವು ಜಲ್ದಿ ಇಲ್ಲಿಂದ ಜಾಗ ಬದಲಿ ಮಾಡ್ರಿ'' ಅವಳು ಸುದ್ದಿ ತಂದಿದ್ದಳು. ಅವರಲ್ಲೊಬ್ಬ ಗಳಗಳನೆ ಅಳುತ್ತ ''ಏಟೇಟೂ ತಪ್ಪು ಮಾಡದ ತಾನು ತನ್ನ ಕುಲಬಾಂಧವರಿಗೆ ಏನು ದುರ್ಗತಿ ಬಂತು ದೇವರೇ...'' ಸಂಕಟ ಕಾರಿಕೊಂಡ. ಒಬ್ಬ ನರನಾಡೀ ಬಿಗಿಗೊಳಿಸಿ ''ಸುವ್ವರ್ ಸೂಳೇ ಮಕ್ಕಳಿಗೆ ಬುದ್ಧಿ ಕಲಿಸಾಕಬೇಕು,'' ಸಂಕಲ್ಪ ಮಾಡಿದ. ಉಳಿದವರಿಬ್ಬರು ಬೈದು ಬುದ್ಧಿ ಹೇಳಿ ಒಬ್ಬೊಬ್ಬರು ಒಂದೊಂದು ದಿಕ್ಕಾಗಿ ಹೋದರು. ತೋರಣವಾಡಿಗೆ ಹೋಗಿ ಗಾಂಧಿ ಗುಣ, ತತ್ವ, ಸಿದ್ಧಾಂತ ಬೋಧಿಸಬೇಕಿತ್ತು ಎಂದು ಭಾವಿಸಿದ. ಅದೇ ಊರಿನಲ್ಲಿದ್ದ ತನ್ನಜ್ಜ ಯಲಿಗಾರ ಸಿದ್ದಜ್ಜನ ಬಗ್ಗೆ ಹೇಳಿದಾಗ, ಅವಳು, ''ಅಯ್ಯ ದೇವರಂತ ಮನಶ್ಯಾ ಆಗಿದ್ದ ಬಿಡ್ರೀ, ಅವರಿಗೆ ಒಂದ ಜಾತಿ ಕುಲ ರೊಕ್ಕ ರೂಪಾಯಿನ ಸೊಕ್ಕಿದ್ದಿಲ್ಲ, ಎಲ್ಲಾರೂ ತನ್ನ ಬಳಗ ಅನ್ನುವ ಕರುಳಿತ್ತು, ಸಿದ್ದಜ್ಜ ಅಂದ್ರ ನಮಗೆಲ್ಲ ಉಜರಾಉಜ್ರ ಸಂಗಮದ ಬಸವಣ್ಣ ಇದ್ದಂಗ ಇದ್ರು'' ಧನ್ಯತೆಯಲ್ಲಿ ಹಾಡಿ ಹೊಗಳಿದಳು. ಅಂಥ ಘನವಂತ ಮರ್ಯಾದಸ್ಥನ ಮೊಮ್ಮಗನಾದ ತನಗೆ ಒಂದು ಹಾದರ ಸಹಿಸಲು ಆಗಲಿಲ್ಲವಲ್ಲ ಎಂದು ಮಮ್ಮಲ ಮರುಗಿದ. ಮಲಗಬೇಕು ಎನ್ನುವಾಗ ಬೆಳ್ಳಿ ಮೂಡಿ ಕೋಳಿ ಕೂಗಿತು.

ಸಂತೆಗೆ ಹೋಗಿ ದಿನಸಿ, ಚಾಪೆ, ಕೊಡಪಾನ, ಕಸಬರಿಗೆ, ಊದಬತ್ತಿ, ಸೀಮೆಎಣ್ಣೆ ಇತ್ಯಾದಿ ಮನೆ ಬಳಕೆ ಸಾಮಾನು ಖರೀದಿಸಿ ಬರುತ್ತಿರುವಾಗ್ಗೆ ಕೆಲವರು ಗುರುತು ಹಿಡಿದು ಮಾತಾಡಿಸಿದರು, ಒಂದಿಬ್ಬರು ರೋಚಕ ಕತೆಯ ನಾಯಕ ಎಂಬ ಕುತೂಹಲದಿಂದ ಕಣ್ಣರಳಿಸಿ ನೋಡುತ್ತಿದ್ದರು. ಖಾಸೀಮನ ಹೆಂಡತಿ ಇಂದು ಕೂಡ ಆ ಮನೆಗೆ ವಸ್ತಿ ಹೋಗೂದು ಬೇಡವೆಂದರೂ ತನಗೆ ಏನೂ ಆಗೊದಿಲ್ಲ, ತಾನು ನಂಬಿದ ದೈವ ತನ್ನನ್ನು ಕೈಬಿಡುದಿಲ್ಲ ಎಂಬುದಾಗಿ ನಂಬಿ ಮೂರುಸಂಜೀಲಿ ಊಟ ಮಾಡಿ ಮನೆ ಸೇರಿದ. ಜೈಲಿನಲ್ಲಿ ಬದುಕಿನ ಆಶಯ, ಮಾತುಗಾರಿಕೆ, ಕನಸು ಕನವರಿಕೆಗಳ ದಿಕ್ಕುದೆಸೆ ವಿಚಿತ್ರವಾಗಿ ಬದಲಾಗಿತ್ತು. ಮನೆಯನ್ನು ಹೊಸದಾಗಿ ಕಾಣಲು ಬಯಸಿದ, ಆದರೆ ಮನಸ್ಸು ಮಾತ್ರ ಆ ದಿನದ ಆ ನೋಟದ ಆ ಸಿಟ್ಟಿನ ಹೊತ್ತನ್ನು ಭ್ರಮಿಸುತ್ತಿತ್ತು. ಈಗ 'ನನ್ನ ಸತ್ಯಾನ್ವೇಷಣೆ' ಪುಸ್ತಕ ಓದ ಬೇಕೆಂದುಕೊಂಡ – ತಟಕ್ಕನೆ ನಾಗೊಂದಿ ಮೇಲೆ 'ಪ್ರಭುಲಿಂಗ ಲೀಲೆ' ಇಟ್ಟದ್ದು ನೆನಪು ! ಎರಡು ರಾತ್ರಿಯ ನಿದ್ದೆ ಕಣ್ಣೆವೆ ಎಳೆಯುತ್ತಿದ್ದರೂ – ಟ್ರಂಕು, ಚೀಲ ಲಾಯಿಗಂಟು ಕೆದಕಿ ಹುಡುಕತೊಡಗಿದ. ಕರಾಳ ದಿನ ಮನದಲ್ಲಿ ಹಾಗೆ ಉಳಿದಿತ್ತು. ಆಗ ಮಾಯಕಾತಿ ಮನೆದೇವತೆ ಲಕ್ಕವ್ವೆ ನೆನಪಾಯಿತು. ಅವಳು ಮಿಂಡನ ಕೂಡಿ ರಬ್ಬಿಕೊಂಡು ಮಲಗಿದ್ದ ಮಂಚ ಕಿರಗುಟ್ಟಿತು... ''ಧರ್ಮಣ್ಣ ಅಂಥವನಲ್ಲ ಅಂದುಕೊಂಡಿದ್ದರೂ ತಾನು ಗಂಡಸೂಂತ ಸಾಬೀತುಪಡಿಸಲು ಕತ್ತಿಯ ಬಾಯಗೆ ರಕ್ತ ಹಚ್ಚಬೇಕಾಗಿತ್ತು, ಅಂದು ಅವನನ್ನು ಸಿಗಿದು ಅವಳ ಬದುಕಬಿಟ್ಟಿದ್ದರೆ ಇಂದಿಗೆ ತನ್ನವರೊಬ್ಬರು ಇರುತ್ತಿದ್ದರಲ್ಲ! ಆಕೆಯ ಸೋಗಲಾಡಿತನಕ ತಕ್ಕ ಶಾಸ್ತಿ ಆಯ್ತು... ಅವಳ ಹಣೆಬರಹ...'' ಧೊಪ್ಪನೆ ಇಲಿಯೊಂದು ರಕ್ತ ಉಂಡಿದ್ದ ಮಂಚದ ಮೇಲೆ ಬಿತ್ತು. ಕದಲಲಿಲ್ಲ, ಸಾವಕಾಶ ದೇವರ ಕೋಣೆಯ ಬಾಗಿಲು ಸರಿಸಿ ಸಣ್ಣ ಹಲಗೆ ಮೇಲಿದ್ದ ಕೆಂಪು ಹುಡಿ ನೊಸಲ ನೇರಕ್ಕೆ ತೀಡಿಕೊಂಡ. ಗೋಡೆಯ ಬಣ್ಣ ಬದಲಾಗಿ ಕಾಣುವ ಕಣ್ಣಲ್ಲಿ ಕೆಂಡದುಂಡೆ ಕುಣಿಯತೊಡಗಿತು. ಜನರ ಮಂದೆ ಕೈಯಲ್ಲಿ ಆಯುಧ ಹದಗೊಳಿಸಿ ಕೇಕೆ ಹಾಕುತ್ತಿದ್ದರು, ಅಲ್ಲಿ ಯಾರೂ ಅಸಹಾಯಕರಿರಲಿಲ್ಲ. ಬಸಿದಷ್ಟು ಬಸರು ತುಂಬಿಕೊಳ್ಳುತ್ತಿದ್ದ ಕಿಡಿಗಳಲ್ಲಿ ಬೆಂದವರು ಕರಕಲಾಗಿದ್ದರು. ಹುರಿಗೊಂಡ ಮೈ-ಕೈಗಳಿಂದ ಕಮಟು, ಜಿಗಟು ವಾಸನೆ ಬಂದು ಮನೆಯಂತ ಮನೆಯಲ್ಲವಾದರೂ... ಹಿಡಿಯಿತು. ಕಿರಗುಡುವ ಕಿವಿಗಡ ಚಿಕ್ಕುವ ಗೋಡೆಯಿಂದ ಹತ್ಯಾರಗಳು ಇಣುಕಿದವು, ಒಂದಲ್ಲ ಎರಡಲ್ಲ ಇತಿಹಾಸದ ಎಲ್ಲ ನಮೂನೆಯ ಕಲ್ಲು, ಕಟ್ಟಿಗೆ, ಕಬ್ಬಿಣ, ಉಕ್ಕು, ತಾಮ್ರ, ಸೀಸದ ಆಯುಧಗಳ ಮೊನೆಯಿಂದ ರಕ್ತ ಒಸರುತ್ತಿತ್ತು. ತೊಯ್ದು ತೊಪ್ಪಡಿಯಾಗಿದ್ದ ದೇಹಗಳು ಮಾಯವಾದವು... ಗಾಬರಿಯಲ್ಲಿ ಹಲಗೆ ಬೀಳಿಸಿದ ಕರೇ ಚೇಳು ತನ್ನ ನಾಕಾರು ಮರಿಗಳೊಂದಿಗೆ ಅವಿತುಕೊಳ್ಳಲು ದಿಕ್ಕಾಪಾಲಾಗಿ ಓಡಿತು. ಇವನು ಭ್ರಮೆಗೆ ಬೆವೆತುಹೋಗಿದ್ದ. ಬಚ್ಚಲಿಗೆ ಹೋಗಿ ಮುಖಕ್ಕೆ ನೀರು ಚಿಮುಕಿಸಿದಾಗ ಮುಖವೆಲ್ಲ ರಂಗೇರಿತು, ತಿಕ್ಕಿದಷ್ಟು ಕೆಂಪೇರಿತು, ಕಣ್ಣು ಕೆಂಪಾದವು ಈಗ ಕಾಣುವದೆಲ್ಲ ರಣರಣಾ ರಾವು ಹೊಡೆಯುತ್ತಿತ್ತು. ಬಾಗಿಲಲ್ಲಿ ಬಲವಾದ ಬಡಿಗೆ ಹಿಡಿದ ಹರೆಯದ ಹುಡುಗನೊಬ್ಬ - ತಾಯಿಯ ತಾಳಿಗೆ, ಕುಂಕುಮಕ್ಕೆ - ಪ್ರತೀಕಾರ ಬಯಸಿದ್ದ.

ಯಾರು ಯಾರ ನೀವು ?

ನಾನು ನಿನ್ನ ಶತ್ರು;

ನನಗ ನೀವು ಶತ್ರು ಅಲ್ವಲ್ಲ!

ನೀನು ತಪ್ಪು ಮಾಡದ ನನ್ನ ತಂದೀನ ಕೊಂದಿ, ಅವನ ಆತ್ಮಕ್ಕ ನಿನ್ನ ರಕ್ತ ಬೇಕು.

ಥೇಟ ಧರ್ಮಣ್ಣನ ಹೋಲುತ್ತಿತ್ತು ಆ ಮುಖ. ಅವನ ಹೆಂಡತಿ ಕನಸಿಗೆ ಬಂದು ಮಗನಿಗೆ ಅಪ್ಪಣೆ ಕೊಟ್ಟಿರಬೇಕು... ತಣ್ಣಗೆ ನಗುತ್ತಿದ್ದ. ಅವನ ಒಂದು ಹೊಡೆತಕ್ಕ ಇವನ ದೇಹ ಮಂಚದ ಕೆಳಗ ಬಿದ್ದಿತ್ತು. ''ನೀನು ಸಂಶಯದ ಹುಳ, ಸಾಯ ಮಗನೆ, ನಿನ್ನ ಹೆಣ್ತಿನ್ನ ನಮ್ಮಪ್ಪ ತಂಗಿ ಹಂಗ ನೋಡಕೊಂಡಿದ್ದ'' ಮತ್ತೊಂದು ಹೊಡೆತಕ್ಕ ಉಸರು ನಿಲ್ಲಿಸಿ ಮುಗುಚಿಕೊಂಡು ರಕ್ತದ ಮಡುವಿನಲ್ಲಿ ಬಿದ್ದಿದ್ದ.

''ನನ್ನಪ್ಪನ ಆತ್ಮ ತಣ್ಣಗಾತು'' ಹೆಂಗ ಬಂದಿದ್ದನೊ ಹಂಗ ಮಾಯವಾದ.

ಮಾರನೇ ದಿನ ಊರವರು ಜೋಡಿ ದೆವ್ವಗಳು ಸೇಡು ತೀರಿಸಿಕೊಂಡಿದ್ದರ ಬಗ್ಗೆ ಮಾತಾಡಿಕೊಳ್ಳುತ್ತಿದ್ದರು.

ಮಹದೇವ ಹಡಪದ
ಸಾಲಾಪುರ ಅಂಚೆ, ರಾಮದುರ್ಗ ತಾಲೂಕು, ಬೆಳಗಾವಿ ಜಿಲ್ಲೆ - ೫೯೧ ೧೨೩

# ಜಾಹೀರಾತು ವೈಭವ




"ಸರ್, ಈಗೀಗ ಜಾಹೀರಾತುಗಳ ಹಾವಳಿ ಜಾಸ್ತಿಯಾಗಿದೆಯೆಂದು ನಿಮಗನಿಸೋಲ್ವಾ ?"

"ಯಾವ ಜಾಹೀರಾತು ? ಎಲ್ಲಿಯ ಜಾಹೀರಾತು ? ನನಗೆ ಅರ್ಥವಾಗೋ ಹಾಗೆ ಹೇಳು ಕೂಸಪ್ಪ"

"ಅದೇ ಸರ್, ಟಿ.ವಿ. ಧಾರಾವಾಹಿಗಳ ನಡುವೆ ತಲೆ ಚಿಟ್ಟು ಹಿಡಿಯುವಂತೆ ಮಾಡುವಂತಹ ಈ ಜಾಹೀರಾತುಗಳು. ಕೆಲವು ಯಾವ ವಸ್ತುವಿನ ಜಾಹೀರಾತೂಂತ್ಲೆ ಗೊತ್ತಾಗೋಲ್ಲ. ಅಲ್ಲಾ ಸರ್, ಟ್ರೈನ್‌ನಿಂದ ಬಂದಿಳಿದ ಟಿಕೇಟಿಲ್ಲದವನೊಬ್ಬನನ್ನು ಯಾವುದೋ ಟೂತ್‌ಪೇಸ್ಟ್ ನಿಂದಾಗಿ ಒಂದು ಹೆಣ್ಣು ಟಿ. ಸಿ. ಅವನನ್ನು ಟಿಕೇಟ್ ವಿಚಾರಿಸುವ ಮೊದಲು ಅವನ ಬಾಯಿಯ ಪರಿಮಳದಿಂದಾಗಿ ಆತನ ಜತೆಯೇ ಬರುತ್ತಾಳೆ. ಮಾತ್ರೆ, ಬಾಮ್‌ಗಳಂತೂ ತೆಗೆದುಕೊಂಡು ಹಚ್ಚಿದ ಅರೆಕ್ಷಣದಲ್ಲಿ ಆ ಶಾಪದಿಂದ ಬಿಡುಗಡೆಯಾಗ್ತಾರೆ. ಕೆಸರಲ್ಲಿ ಓಡಾಡಿದ ಮಕ್ಕಳು ಯಾವುದೋ ಡಿಟರ್ಜೆಂಟ್‌ನಿಂದ ಶುಭ್ರವಸ್ತ್ರಧಾರಿಗಳಾಗುತ್ತಾರೆ. ಫೇಸ್ ಪೌಡರ್, ಕ್ರೀಂ ಹಚ್ಚಿದ ಕ್ಷಣಾರ್ಧದಲ್ಲಿ ಕಪ್ಪಗಿದ್ದ ಹುಡುಗಿ ಬಿಳಿಬಿಳಿಯಾಗಿಬಿಡ್ತಾಳೆ. ಇನ್ನೂ ಪಾತ್ರೆ ತೊಳೆವ ಸೋಪು ಎಣ್ಣೆ, ಜಿಡ್ಡಿನ ಬಾಣಲೆಯನ್ನು ಹೊಸ ಹೊಳಪಿನ ಬಾಣಲೆ ಮಾಡಿಬಿಡ್ತಾರೆ."

"ಅದೇ ಅವರ ಚಮತ್ಕಾರ ಕೂಸಪ್ಪ, ಆರಂಭಕ್ಕೆ ತೋರಿಸಿದ ಬಾಣಲೆಯೇ ಬೇರೆ. ನಂತರ ತೋರಿಸುವ ಬಾಣಲೆ ಒಪ್ಪಕೊಟ್ಟಿರುವ ಹೊಚ್ಚ ಹೊಸ ಬಾಣಲೆ."

"ಹೌದು ಸರ್, ಆ ಜಾಹೀರಾತುದಾರರನ್ನು ನನ್ನ ಮನೆಗೆ ಕರೆಸಿ, ಹಳೇ ಬಾಣಲೆಯನ್ನೂ ಹಾಗೆ ಹೊಚ್ಚ ಹೊಸ ಬಾಣಲೆಯನ್ನಾಗಿ ಮಾಡಿದರೆ ನಿಮಗೆ/ಅವರಿಗೆ ನನ್ನ ಏಮರ್ಜನ್ಸಿಯ ಸಾಲದಿಂದ ಸಾವಿರ ರೂಪಾಯಿ ಕೊಡ್ತೇನೆ. ಆಗದಿದ್ರೆ ನೀವು ಹತ್ತು ಸಾವಿರ ಕೊಡ್ತೀರಾಂತ ಕೇಳ್ತೇನೆ, ಎಂದು ಕೇಳಿಬಿಡ್ಲಾ ಸರ್ ?"

"ಅದು ಖಂಡಿತಾ ಸಾಧ್ಯವಿಲ್ಲ ಕೂಸಪ್ಪ, ಈ ಸ್ಪರ್ಧೆಗೆ ಖಂಡಿತಾ ಅವರು ಬರೋಲ್ಲ. ಏಕೆ ಗೊತ್ತಾ? ಅವರ ಜಾಹೀರಾತುಗಳು ಎಲ್ಲಾ ಜನರನ್ನು ಮೋಸಮಾಡಿ ವ್ಯಾಪಾರ ಕುದುರಿಸಿಕೊಳ್ಳೋದಕ್ಕೆ ಎಂದು ಗೊತ್ತಿಲ್ವಾ ?"

"ಹೌದು ಸರ್, ಸೋಪು ಮೂರು ಕೊಂಡರೆ ಒಂದು ಉಚಿತ. ಸೀರೆ ಒಂದು ಕೊಂಡರೆ ಇನ್ನೊಂದು ಉಚಿತ" ಅಂತಾರೆ. ಆದರೆ ಆ ಐನೂರು ಮುಖಬೆಲೆಯ ಸೀರೆಯ ಮೂಲ ಬೆಲೆ ಇನ್ನೂರು ಮಾತ್ರ. ಹಾಗೆ ಐನೂರು ಕೊಟ್ಟರೆ ಎರಡು ಸೀರೆಗಳ ಬೆಲೆ ನಾನೂರು ಆಗ್ತದೆ. ಗ್ರಾಹಕನಿಗೆ ಒಂದಕ್ಕೆ ಎರಡು ಸೀರೆ ಸಿಕ್ಕಿತೆಂದು ಸಂತೃಪ್ತಿ. ಆದರೆ ಆ ಐನೂರು ರೂಪಾಯಿ ಪಡೆದ ಅಂಗಡಿಯ ಮಾಲೀಕನಿಗೆ ನೂರು ರೂಪಾಯಿ ಲಾಭ. ಕೆಲವು ಜಾಹೀರಾತುಗಳಂತೂ ಬಹಳ ವಿಚಿತ್ರ. ಡಿಟರ್ಜೆಂಟ್ ಸೋಪಿನ ಪುಡಿ ಖರೀದಿಸಿದರೆ ಒಂದು ಮಕ್ಕಳ ಬ್ಯಾಟು ಉಚಿತ. ಚಹಾ ಪುಡಿ ತಗೊಂಡರೆ ಒಂದು ಬಾಚಣಿಗೆ ಉಚಿತ. ಯಾವುದೋ ಒಂದು ಶ್ಯಾಂಪೂ ತಗೊಂಡರೆ ಕೂದಲು ಇಷ್ಟು ಉದ್ದ ಬೆಳೆಯುತ್ತೆ ಎಂದು ತೋರಿಸುವಂತೆ ಒಂದು ಮುದಿ ದನ ಖರೀದಿಸಿದರೆ ಹಗ್ಗ ಉಚಿತ, ಒಂದು ಹೆಣ್ಣನ್ನು ಮದುವೆಯಾದರೆ ಇನ್ನೊಂದು ಹೆಣ್ಣು ಉಚಿತ" ಎಂದು ಹೇಳುವ ಸಮಯವೂ ಬರಬಹುದಲ್ಲಾ ಸರ್...?"

"ನೀನನ್ನೋದೇನೊ ಸರಿ ಕೂಸಪ್ಪ, ಆದರೆ ಈ ರೀತಿ ಖರೀದಿಸುವ ಜನರನ್ನು ಆ ಹುಚ್ಚಿನಿಂದ ಬಿಡಿಸೋದು ಹೇಗೆ ?"

"ಸರ್, ಮೊನ್ನೆ ನಮ್ಮ ಬೈಲೂರಿನ ಮಣ್ಣಿನ ರಸ್ತೆಯಲ್ಲಿ ಒಂದು ಬೈಕ್ ಕೆಸರಲ್ಲಿ ಸಿಕ್ಕಿ ಹೂತುಹೋಯ್ತು, ನಾನಲ್ಲಿಗೆ ಹೋದಾಗ ಐದಾರು ಜನರು ಸೇರಿ ಬಹಳ ಪ್ರಯಾಸದಿಂದ ಅದನ್ನು ಎಳೆದು ರಸ್ತೆಗೆ ತಂದರು. ಆದರೆ ನಾನೊಂದು ಜಾಹೀರಾತು ನೋಡಿದೆ. ಹತ್ತು ಹನ್ನೆರಡು ಮಂದಿ ಸೇರಿ ಒಂದು ಲಾರಿಯನ್ನು ದೂಡಿದರೂ ಚಕ್ರಗಳು ತಿರುಗಿದವೇ ಹೊರತು ಡ್ರೈವರ್ ಎಷ್ಟೇ ಪ್ರಯತ್ನಿಸಿದರೂ ಜಗ್ಗದ ಆ ಲಾರಿ ಯಾವುದೋ ಶ್ಯಾಂಪು ಹಚ್ಚಿದ ಕೂದಲನ್ನು ಲಾರಿಯ ಮುಂಭಾಗಕ್ಕೆ ಕಟ್ಟಿ ಕೂದಲಿಂದಲೇ ಆ ಲಾರಿಯನ್ನು ಮೇಲಕ್ಕೆಳೆದಳಲ್ಲಾ ಒಬ್ಬ ಹುಡುಗಿ ! ಇದೂ ಒಂದು ಜಾಹೀರಾತೇ ?"

"ಆದರೆ ಟಿ.ವಿ. ನೋಡೊ ಜನರು ಚಪ್ಪಾಳೆ ತಟ್ಟಿ 'ಎಷ್ಟು ಶಕ್ತಿಯಿರುವ ತಲೆಗೂದಲು !' ಎಂದು ತಲೆಯಾಡಿಸ್ತಾರಲ್ಲಾ ?"

"ಹೋಗ್ಲಿ ಬಿಡಿ ಸರ್, ನಮಗೆ ಬುದ್ಧಿಯಿಲ್ಲದ ಕಾರಣ ಈ ಕಂಪನಿಗಳು ನಮ್ಮನ್ನು ಮಂಗ ಮಾಡಿ ಕೊಳ್ಳೆ ಹೊಡೀತಾವೆ. ನನಗಿಷ್ಟವಾದ ಒಂದೇ ಒಂದು ಜಾಹೀರಾತು ಅಂದ್ರೆ, ಒಂದು ನಲ್ಲಿಯಿಂದ ನೀರು ಪೋಲಾಗುತ್ತಿರುವಾಗ ಒಂದು ಮಂಗ ಬಂದು ತಾನು ಕುಡಿದು ನೀರಿನ ಪೈಪನ್ನು ತಿರುಗಿಸಿದ ಟಿ.ವಿ.ನೈನ್‌ನ ಜಾಹೀರಾತು. ಕಂಪನಿಯವರು ಮಂಗನಿಗಿರುವ ಬುದ್ಧಿ ಮನುಷ್ಯನಿಗಿಲ್ಲವೆಂದು ತೋರಿಸಿಕೊಟ್ಟಿದ್ದಾರೆ. ಆದನ್ನು ಬಿಟ್ಟರೆ ಎಲ್ಲಾ ಜಾಹೀರಾತುಗಳಿಗೂ ತಲೆ ಬುಡ ಇರೋದಿಲ್ಲ. ಇನ್ನು ರಾಜಕೀಯ ಜಾಹೀರಾತುಗಳು; 'ನಿಮ್ಮ ಕಿರುನಗೆ ನಮ್ಮ ಬಯಕೆ' ಹಾಗೂ ಎಮ್.ಎಲ್.ಎ., ಎಂ.ಪಿ. ಮಂತ್ರಿಗಳ ಜನ್ಮದಿನವನ್ನು ತಮ್ಮ ಭಾವಚಿತ್ರ ಸಹಿತ ಟಿ.ವಿ.ಯಲ್ಲಿ ತೋರಿಸೋದು. ಇವೆಲ್ಲಾ ಅವರ ಕೃಪಾಕಟಾಕ್ಷಕ್ಕಾಗಿ ಕೊಡುವ ಜಾಹೀರಾತುಗಳು. ಒಂದು ಗಾದೆ ಇದೆ. ತಹಶೀಲ್ದಾರರ ಮನೆ ನಾಯಿ ಸತ್ತಾಗ ಕಂಬನಿ ಉದುರಿಸಲು ನೂರಾರು ಮಂದಿ ಯಾಕೇಂದ್ರೆ, ಆಗ ಸಿಮೆಂಟ್ ಖರೀದಿಗೂ ತಹಶೀಲ್ದಾರನ ಒಪ್ಪಿಗೆ ಬೇಕಾಗಿತ್ತು. ಅದಕ್ಕಾಗಿ. ಆದರೆ ತಹಶೀಲ್ದಾರರು ಸತ್ತಾಗ ಹೆಣ ಹೊರೋದಕ್ಕೂ ನಾಲ್ಕು ಜನ ಇಲ್ಲ. ಹಾಗೆಯೇ ಈಗಿನ ಈ ಅರ್ಥವಿಲ್ಲದ ಜಾಹೀರಾತುಗಳು. ಅಲ್ವಾ ಸರ್. ಬರ್ತೇನೆ. ಸ್ವಲ್ಪ ಕೆಲಸ ಬಾಕಿ ಇದೆ. ಅದನ್ನು ಮುಗಿಸ್ಬೇಕು."

ಕೂಸಪ್ಪ ಹೊರಟೇ ಹೋದ !

ರಾಘವೇಂದ್ರ ಉಡುಪಿ
(ಕೆ. ರಾಘವೇಂದ್ರ ಭಟ್)
೮-೩-೫೧, 'ಶ್ಯಾಮಲಾ ಸದನ', ಕೆ. ಎ. ಮಾರ್ಗ, ಕುಂಜಿಬೆಟ್ಟು, ಉಡುಪಿ - ೫೭೬ ೧೦೨

# ಚಮ್ಮಾವುಗೆ




ವಿಶಾಲವಾದ ಹಳೆಮನೆ. ಬೆಳಗಿನ ಹೊತ್ತು ಚಲುವಜ್ಜ ಪಡಸಾಲಿ ಕಟ್ಟಿಯು ಮ್ಯಾಲ ಕುಂತು ಬಂದೂಕಿನ ಲಳಿಯನ್ನು ತಿಕ್ಕಿ ತಿಕ್ಕಿ ಹಸನುಗೊಳಿಸುತ್ತಿದ್ದ. ಬಂದೂಕು ಕೆಂಪು ಮೋತಿಯವರ ಕಾಲದ್ದು. ಆಸ್ತಿವಂತನಾಗಿದ್ದ ಚಲುವಜ್ಜ ಅದನ್ನು ಕಾಯ್ದುಕೊಳ್ಳಲು, ಜೀವ ಉಳಿಸಿ ಕೊಳ್ಳಲು ಜಿಲ್ಲಾ ಕಲೆಕ್ಟರರಿಂದ ಪಡೆದಿದ್ದ. ಅದರಿಂದಾಗಿ ಊರಲ್ಲಿ, ಬಂಧು ಬಳಗದಲ್ಲಿ ಚಲುವಜ್ಜನ ಗೌರವ ಹೆಚ್ಚಿತ್ತು. ಮನೆಯಲ್ಲಿ ವಿಶೇಷ ಪೂಜೆ, ಹಬ್ಬ ಹರಿದಿನ ಅದರಲ್ಲೂ ದೀಪಾವಳಿ, ಮಹಾನವಮಿ ಹಬ್ಬಗಳಂದು ಚಲುವಜ್ಜನ ಕೈಯಿಂದ ತಿಕ್ಕಿಸಿಕೊಂಡು ಬಂದೂಕು ಫಳ ಫಳ ಹೊಳೆಯುತ್ತಿತ್ತು, ಪೂಜೆಗೂ ಪಾತ್ರವಾಗುತ್ತಿತ್ತು. ಈ ದಿನ ಅದು ಈ ಮೊದಲೆಂದೂ ಹೊಳೆಯದಷ್ಟು ಹೊಳೀತಿತ್ತು. ಚಲುವಜ್ಜನ ಮುಖದಲ್ಲಿ ಆ ಹೊಳೆವ ಮಿಂಚನ್ನೇ ನಾಚಿಸುವಂಥ ಉತ್ಸಾಹವಿತ್ತು. ಹುರುಪಿಗೇನು ಕಮ್ಮಿ ಇರಲಿಲ್ಲ. ಅದೇ ವ್ಯಾಳ್ಯಾಕ ಅಡುಗೆ ಮನೆಯಿಂದ ಹೊರಬಂದ ಅಂಬಜ್ಜಿ, ''ಹೊತ್ತ ಮುಣಗುದ್ರ ಭಜನಿ ಹಚ್ಚಬೇಕು, ಹಿರ‍್ಯಾರ ಹಬ್ಬಂದ್ರ ಸುಮ್ನೆ ಆಗ್ತದೇನ ? ನೀ ಹೀಂಗ ಬಂದೂಕ ಲಳಿ ತಿಕ್ಕೋತ ಕುಂತ್ರ ಹೆಂಗ ?'' ಎಂದು ಸಿಡುಕಿದಳು. ಮಾತಿನ ಹೊಲಬ ಅರಿತ ಚಲುವಜ್ಜ, ''ಏ ರಾಜು, ಬಾ ಇಲ್ಲಿ'' ಎಂದು ಆಳಮಗನ್ನ ಕರೆದ. ಆಳಮಗ ಬೇರೆಯವನೇನಾಗಿರಲಿಲ್ಲ. ಚಲುವಜ್ಜನ ತಂಗಿ ಮಗ. ಓಡಿ ಬಂದು ಬಹಳ ಸಲುಗೆಯಿಂದ ನಿಂತುಕೊಂಡು, ''ಏನು ಮಾವಾ'', ಎಂದ. ''ನೋಡು ಮಾದಜ್ಜನ ಮನಿಗಿ ಹೋಗಿ ಮನೇಲಿ ರಾತ್ರಿ ಭಜನಿ ಇಟಗೊಂಡೈತಿ, ಅಕ್ಕ ಪಕ್ಕದ ಊರ ಮ್ಯಾಳಗಳು ಬರ‍್ತಾವ. ನೀನೂ ಮ್ಯಾಳ ತಗೊಂಡು ಬರಬೇಕಂತ ಹೇಳು. ಹೋಗು ಅವಸ್ರವಸ್ರ ಹೋಗಿ ಬಂದ ಬಿಡು'' ಎಂದ. ''ಐತ ಮಾವ್'' ಎಂದು ರಾಜು ಭರಭರನೆ ಕೈ ಬೀಸುತ್ತಾ ಹೊಂಟ. ಚಲುವಜ್ಜ ಬಂದೂಕನ್ನು ಪಡಸಲಗ್ಯಾನ ಗೂಟಕ್ಕ ಸಿಗಿಸತ್ತಿದ್ದ, ಅದ ವೇಳ್ಯಾಕ ಅಲ್ಲಿಗಿ ಬಂದ ಅಂಬಜ್ಜಿ, ''ಅಲ್ಲ! ಮಾದಪಣ್ಣ ನಿನ್ನ ವಾರಗ್ಯಾಂವ ಅದಾನ, ನೀನ ಹೋಗಿ ಕರ್ದರ ಏನಾಗತ್ತಿತ್ತು ?'' ಅಂದಳು. ''ಅಂವ ನನ್ನ ಮಾತ ಮೀರಾಂಗಿಲ್ಲೇಳು. ರಾಜಾ ಹೋಗಿ ಕರಿತಾನ. ಬರ‍್ತಾನೇಳು'', ಎನ್ನುತ್ತಾ ಚಲುವಜ್ಜ ಹೆಂಡತಿಯ ಮುಖ ನೋಡಿದ. ಅಂಬಜ್ಜಿ, ''ಇದೇ ಐತು'' ಎಂದು ಗೊಣಗಿ ಕೊಳ್ಳುತ್ತ ಕೆಲಸದಲ್ಲಿ ಮುಣುಗಿದಳು.

ಚಲುವಜ್ಜ, ಮಾದಜ್ಜ ಅಂದರ ಹೊಂಗೇನ ಹಳ್ಳಿಯ ಎರಡೂ ಕೇರಿಯ ಕಣ್ಣುಗಳಿದ್ದಾಂಗಿದ್ರು. ಮಾದಜ್ಜನದು ಮ್ಯಾಲಿನ ಕೇರಿ, ಚಲುವಜ್ಜನದು ಕೆಳಗಿನ ಕೇರಿ. ಚಲುವಜ್ಜನ ಕೇರ‍್ಯಾಗ ನಾಲ್ಕಾರೆ ಮನಿಗಳು, ಮಾದಜ್ಜನ ಕೇರಿ ಅಂದ್ರ ಒಂದರ್ಧ ಊರಿದ್ದಾಂಗಿತ್ತು. ಇಬ್ರೂ ಬಾಲ್ಯದ ಗೆಳ್ಯಾರು, ಚಲುವಜ್ಜನ ತಂದೆ ಬಹಳ ಕಕ್ಕುಲಾತಿಯಂವ, ಇದ್ದೊಂದೀಟು ಜಮೀನನಲ್ಲೇ ಬಾವಿ ಹೊಡೆದು ನೀರ ಮಾಡಿದ್ದ. ಆಟು ಈಟು ಹಸರ ಬೆಳಿ ಕಾಣುವಂಗ ಮಾಡಿ ಕೈಲಾಸ ಸೇರಿದ್ದ. ಚಲುವಜ್ಜ ಅದನ್ನು ಇನ್ನೊಂದೀಟು ಹೆಚ್ಚಿಸಿದ್ದ. ಆದರ ಮಾದಜ್ಜನ ತಂದಿ ಏನೂ ಮಾಡಿರಲಿಲ್ಲ. ತಾತ ಮುತ್ತಾತರಿಂದ ಬಳುವಳಿಯಾಗಿ ಬಂದಿದ್ದ ಚಪ್ಲಿ ಹೊಲಿವ ಉದ್ಯೋಗ ನಂಬಿಕೊಂಡು ಮಾದಜ್ಜ ಜೀವ್ನ ಸಾಗಿಸ್ತಿದ್ದ. ಮಾದಜ್ಜನ ಹೊಟ್ಟೀಲೆ ಒಬ್ಬಳೆ ಹೆಣ್ಣುಮಗಳು, ಗಂಡು ಮಕ್ಕಳಿರಲಿಲ್ಲ. ಮದುವಿ ಆದ ಹೊಸದರಲ್ಲಿ ಒಂದು ಗಂಡು ಮಗುವಿಗೆ ಜನ್ಮ ನೀಡಿ, ಗಂಡಾ ಹೆಣ್ತಿ ಇಬ್ರು ಕೆಲಸಕ್ಕೆ ಹೋದಾಗ ಅಕಾಲಿಕ ಗಾರಿನ ಮಳಿಗಿ ಸಿಕ್ಕು ಸಿಡ್ಲ ಬಡದು ಸತ್ತಿದ್ರು. ಅದರ ನೋವಿನಲ್ಲೆ ಮಾದಜ್ಜ ಕುಡ್ಯಾದ ಹೆಚ್ಚ ಮಾಡಿದ್ದ. ಇದರಿಂದ ಮನಿ ಪರಿಸ್ಥಿತಿ ಛಂದಿರಲಿಲ್ಲ, ಆದರೂ ಮೊಮ್ಮಗನ ವಿದ್ಯಾಭ್ಯಾಸದ ಕನಸಕಂಡಿದ್ದ. ಚಲುವಜ್ಜ ತಂದೆಗೆ ಒಬ್ಬನೇ ಮಗನಾಗಿದ್ದರೂ, ಹೊಟ್ಟೀಲೆ ಹುಟ್ಟಿದ ಎಲ್ಲ ಮಕ್ಕಳು, ಆಟು ಈಟು ಓದಿದ್ರು. ಒಬ್ಬಂತೂ ಭಾಳ ಓದಿ ಹೊರಗಿನ ದೇಶಕ್ಕ ಹೋಗಿದ್ದ. ಇನ್ನೇನ ಆತ ಈಟರಲ್ಲೇ ಬರೋದರಲ್ಲಿದ್ದ. ಅದಕ್ಕಂತ ಮನ್ಯಾಗ ಹಿರ‍್ಯಾರ ಹಬ್ಬ ಇಟಗೊಂಡಿದ್ದ. ಬೀಗರು, ಅಣತಮ್ರು ಬಂದಿದ್ರು. ಕಟಗಿ ಒಡಿಯೋರು, ಬ್ಯಾಟಿ ಮಾಡೋರು, ಗ್ವಾಳೆ ಆಗಿ ಕೆಲಸಾ ಮಾಡಾಕ ಹತ್ತಿದ್ರು. ಚಲುವಜ್ಜ ಆ ಸಂಭ್ರಮ ಸವೀತಾ ಕೂತಿದ್ದ. ಮುಖದಲ್ಲಿ ಏನೋ ಸಾಧಿಸಿದ ಕಳೆ ಎದ್ದು ಕಾಣುತ್ತಿತ್ತು. ''ಹೊಲ ಮನಿಯ ಪರವಾ ಇಡಲಾರದೆ ಸಾಲ ಸೂಲ ಮಾಡಿ ಮಗನ್ ಓದಿಸಿ ಕೀರ್ತಿ ಏಳ ಸಮುದ್ರ ದಾಟಿ ಹೋಗುವಂಗ ಮಾಡ್ಯಾನ, ನೋಡ್ರಪಾ'' ಎಂದು ಬಂದವರಲ್ಲಿ ಅನೇಕರು ಮಾತಾಡತಿದ್ರು. ಚಲುವಜ್ಜ ಅದನ್ನು ಕೇಳಿಯೂ ಕೇಳಿಸಿಕೊಳ್ದಂಗ ಎಲ್ಲಾನೂ ನಿಭಾಯಿಸ್ತಾ ಮನಸ್ಸಿನಾಗೇ ಬೀಗ್ತಾ ಕುಂತಿದ್ದ. ಮನೆ ತುಂಬ ನಗು ಓಡಾಡಿಕೊಂಡಿತ್ತು. ಅಂಬಜ್ಜಿ ಹಿರಿ ಮಗನಿಗಿ ಕರದು ''ಕೇರ‍್ಯಾಗಿನವರಿಗೆಲ್ಲ ಹೇಳ್ಯಾರಿಲ್ಲ ನೋಡೆಪಾ, ಖೇರ ಬಾಕಾ, ಚಂದ್ರಶ್ಯಾ, ಈರಪ್ಪಗೋಳು, ತಳಕೇರಿ ಮ್ಯಾಗಿನಕೇರಿಯವರು'' ಅನ್ನುವಾಗ ಸಣ್ಣಮಗ ಬಂದು

**ಡಾ|| ಎಚ್. ಟಿ. ಪೋತೆ**

''ಈಗ ಹೇಳಿಬಂದಿನೇಳವ್ವ'' ಎಂದು ಜೋರಾಗಿ ಹೇಳಿದ. ಸಣ್ಣ ಮಗನ ಮಾತಿನಲ್ಲಿ ಸಿಡುಕುತನ ಇದ್ದದ್ದು ಕಂಡು, ''ಹೇಳಿದ್ರ ಆಯ್ತು ಬಿಡತ್ತ'' ಎಂದು ಅಂಬಜ್ಜಿ ಸಿಡಿಮಿಡಿಗೊಂಡು ಅಡಿಗಿ ಮನಿಕಡೆ ನಡದಳು. ಚಲುವಜ್ಜ ಮಗನ ವರಸೆ ನೋಡಿ ಕಣ್ಣು ಕಿಸಿದ. ಮಗ ಮಾರಿ ಸಣ್ಣ ಮಾಡಕೊಂಡು ಹೊಂಟ.

ಇತ್ತ ಮಾದಜ್ಜ ತನ್ನ ಮನೆಯ ಮೂಲೆಯಲ್ಲಿ ಕುಂತುಗೊಂಡು ನಿತ್ಯದ ಕಾಯಕದ ಸಾಮಾನುಗಳನ್ನು ಸಜ್ಜುಗೊಳಿಸ್ತಿದ್ದ. ಇನ್ನೇನು ಒಂದೀಟು ಕೂಳು ಹೊಟ್ಟಿಗಿ ಹಾಕ್ಕೊಂಡು ಹೋಗಬೇಕು ಅನ್ನುವಷ್ಟರಲ್ಲಿ ಚಲುವಜ್ಜನ ಆಳು ರಾಜು ''ಮಾದಜ್ಜ! ಮಾದಜ್ಜ! ನಾಯಿ ಹಿಡಿರಿ ಕಡದಗಿಡದೀತು'' ಎಂದು ಗಾಬರಿಯಿಂದ ಒದರಿದ್ದು ಕೇಳಿಸ್ತು. ''ಯಾರದು ನೋಡೋ ತಮಾ! ನಾಯಿ ಬೊಗಳಾಕ ಹತ್ಯೆತಿ, ಹಿಡಿಯೋ'' ಎಂದು ಮೊಮ್ಮಗನಿಗೆ ಮಾದಜ್ಜ ಕೂಗಿ ಹೇಳಿದ. ಮಾತು ಕೇಳಿ ಓಡಿ ಬಂದ ಹುಡುಗ ''ಹಳಿ ಹಳಿ'' ಎಂದು ಬೆದರಿಸಿ ನಾಯಿ ಹಿಡಿದ. ''ಮಾದಜ್ಜ ! ಪಾರನ ಸಾಲಿ ಇಲ್ಲೇನು? ಯಾವಾಗ ಬಂದಾನ'' ಎಂದು ರಾಜು ಅಂಗಳದಾಗ ಬರಕೋತ ಕೇಳಿದ. ''ಸೂಟಿ ಐತಿ ಅದಕ ಬಂದಾನ'' ಅಂತ ಹೇಳ್ತಾ, ''ಕುಂದ್ರಪ್ಪ ಕುಂದ್ರು, ನಿನ್ನ ಮಾಲಕ ಏನ ಸುದ್ದಿ ಹೇಳಿ ಕಳಸ್ಯಾನ'' ಅನ್ನೊಷ್ಟರೊಳಗ ಯಾರೋ ಒಳಗೆ ಕೆಮ್ಮಿದಂಗ ಕೇಳಿಸ್ತು. ''ಮಾದಜ್ಜ, ಅಜ್ಜಿ ಎಲ್ಲಿ? ಗಂಡಸ್ರು, ಕೆಮ್ಮಿದಂಗ ಕೇಳಿಸ್ತದ'' ಎಂದ. ''ಅದಪಾ ನಿಮ್ಮಜ್ಜಿ ಸ್ವಾದರಳ್ಯಾ ಬಂದಾನ'' ಅನ್ನುವಷ್ಟರಲ್ಲಿ ''ಭಾಳ ಚಂದಾತೇಳು'', ಎಂದು ರಾಜು ಹೇಳ್ದಾಗ ''ಯಾಕಪ್ಪಾ?'' ಎಂದು ಆಶ್ಚರ್ಯದಿಂದ ಮಾದಜ್ಜ ಕೇಳ್ದ. ''ಮನ್ಯಾಗ ಹಿರ್‍ಯಾರ ಹಬ್ಬ ಇಟ್ಗೊಂಡಾರ, ಬೇನೂರ, ಚೌಡ್ಯಾಳ ಭಜನಾ ಮ್ಯಾಳ ಬರ್ತಾವ, ಅದಕ ನೀನು ಭಜನಿ ಮ್ಯಾಳ ತಗೊಂಡು ಬರಬೇಕಂತ ಮಾಮಾ ಹೇಳ್ಯಾನ.'' ರಾಜುನ ಮಾತು ಕೇಳಿದ ಮ್ಯಾಲ, ಮಾದಜ್ಜ ''ಅಂವ ದೊಡ್ಡಾಂವ ಆಗ್ಯಾನ, ಮಗಾ ಹೊರಗಿನ ದೇಶಕ್ಕ ಹೋಗ್ಯಾನ, ಅವನಃ ಕರ್‍ಯಾಕ ಬಂದ್ರ ಸಣ್ಣಾಂವ ಆಗತಾನ, ಅದಕ್ಕ ನಿನಗ ಕಳಿಶ್ಯಾನೇನಪ್ಪ'' ಎಂದು ಸಿಟ್ಟು ಮಾಡಿದ. ಒಳಗಿಂದ ಹೊರಬಂದ ಗಂಗಜ್ಜಿ ''ಅಯ್ಯ ನಿಂದ ಇದ ಆತು, ಒಕ್ಕಲುತನ ಮಾಡಕೋ ಅಂತ ಎತ್ತ ಕೊಟ್ರ ನೀ ಕಟಕರಗಿ ಮಾರಿದಾಂವ, ನೋಡು! ಚಲುವಣ್ಣ ನಿನ್ನ ವಾರಗ್ಯಾಂವ್ನ ಹೆಂಗ ಸಂಸಾರ ಮಾಡ್ಯಾನ, ನೀ ಹ್ಯಾಂಗ ಮಾಡೀದಿ'' ಎಂದು ಸ್ವಾಟ ತಿರುವಿದಳು.

ಚಲುವಜ್ಜ ಮಾದಜ್ಜ ಇಬ್ರು ಬಾಲ್ಯದ ಗೆಳ್ಯರಾಗಿದ್ರೂ ಇತ್ತಿತ್ತಲಾಗಿ ಊರಾಗಿನ ಸಣ್ಣಪುಟ್ಟ ಜಾತಿ ರಾಜಕೀಯ ಕಾರಣಕ್ಕಾಗಿ, ಆ ಜಾತಿ ಈ ಜಾತಿ ಅಂತ ಬಿರಕ ಬಿಟ್ಟು ಮಾದಜ್ಜ ಚಲುವಜ್ಜನ ಗೆಳೆತನಕ ಒಂದೀಟು ಮಸಕ ಕವಿದಂಗಾಗಿತ್ತು. ''ಎಟ್ಟೇ ಆದ್ರೂ ನೀವು ನೀವು ವಾರಿಗೆವ್ರು, ಬಿಡಾಕ ಹೆಂಗ ಬರ್‍ತದ, ರಾಜು ನೀ ಹೊಗೆಪ್ಪ ಬರ್ತಾರಂತ ಹೇಳು'' ಎಂದು ಗಂಗಜ್ಜಿ ಒಂದೇ ಮಾತಿನಲ್ಲಿ ಗಂಡನ್ನ ಸಮಾಧಾನಪಡಿಸಿ ರಾಜುಗ ಸಾಗಹಾಕಲು ನೋಡಿದಳು. ರಾಜು ಎದ್ದು ಹೋಗುವಾಗ, ''ಏ ತಮ್ಮಾ ಒಂದೀಟು ಚಹ ಮಾಡಿವಿ. ಕುಡದು ಹೋಗೋ. ನನ್ನ ಬುದ್ದಿಗೀಟು ಮಣ್ಣ ಹಾಕ್ಲಿ ಮನಿಗಿ ಬಂದವನಿಗಿ ಹಂಗ ಕಳಸಾಕತ್ತೀವಿ'' ಎಂದು ತನ್ನ ಮರುವಿಗೆ ತಾನೇ ಬೈಕೊಂಡ್ಳು. ''ಇಲ್ಲ ಗಂಗಜ್ಜಿ ಮನ್ಯಾಗ ದಗದಾ ಭಾಳ ಐತಿ'' ಎಂದು ರಾಜು ಹೇಳಿದ್ರು ಗಂಗಜ್ಜಿ ಕೇಳಲಿಲ್ಲ. ಮಾದಜ್ಜ ಗಂಗಜ್ಜಿ ಇಬ್ರು ಭಾಳ ಜೋರಿ ಮಾಡಿದ್ದಕ್ಕ ಹೊಳ್ಳಿ ಬಂದು ಅವರೊಂದಿಗೆ ಚಹ ಕುಡಿದು ಎದ್ದ ನಡದ. ''ಏ ತಮಾ, ನಾಯಿ ಹಿಡದಿ ಇಲ್ಲಪಾ! ಮತ್ತ ಮೈ ಮ್ಯಾಲ ಬಂದಗಿಂದೀತು'' ಎಂದು ಹೇಳಿ ಹೊಂಟ. ಹಂಗ ನಾಯಿ ಬೊಗಳ್ತಾ ಇತ್ತು ಅದಕ್ಕ ಬೆದರಸ್ತಾ ಮಾದಜ್ಜ ಕೆಲಸಕ್ಕೆ ಹೊಂಟನಿಂತ. ''ಹೋಗದ ಹೋಗ್ತಿ ಜಲ್ದಿ ಬಾ! ಕುಡದ ಅಲ್ಲೇ ಎಲ್ಲರೇ ಬಿದ್ದಗಿದ್ದಿ, ಮಾನುಳ್ಳವರು ಕಾರಣಕ್ಕ ಹೇಳ್ಯಾರ, ಕಷ್ಟ ನಷ್ಟಕ್ಕಂತ ಬರ್‍ತಾರ'' ಎಂದು ಗಂಗಜ್ಜಿ ಗಂಡಗ ಹೇಳಿದಳು, ''ಆಯಿತಾಯಿತು ಬರ್ತೀನೇಳು'' ಎಂದು ಗೋಣ ಹಾಕ್ತಾ ಹೊಂಟಹೋದ.

''ಏನ ಅತ್ತಿ ನಿಮ್ಮದು ಈ ಜಗಳಾ ಹೀಂಗ ಐತೆಲ್ಲ''



## ಗಾರ್ಡಿಯನ್

ಸೂರ್ಯನ ಸುತ್ತ
ಸುತ್ತುತ್ತವೆ ಭೂಮಿಯೂ ಸೇರಿ
ಎಂಟು ಗ್ರಹಗಳು, ಅವುಗಳ ಸುತ್ತ
ಹತ್ತಾರು ಉಪಗ್ರಹಗಳು, ಕುಟುಂಬ
ನಿಯಂತ್ರಣ ಪಾಲಿಸದ ಸೂರ್ಯನ
ಅವಿಭಕ್ತ ಕುಟುಂಬ ಸೂರ್ಯಮಂಡಲ.
ನಮ್ಮ ಮನೆಯ ಅಟ್ಟ, ಬೇಲಿಯ ಮೇಲಿರುವ
ಜೇಡರ ಬಲೆ, ಬೆಳಕು ಗಾಳಿ ಹಿಡಿದಿರುವ ಕಲೆ;
ಗ್ರಹ, ಉಪಗ್ರಹ, ಸೂರ್ಯಮಂಡಲ –
ಲಕ್ಷಾಂತರ ಸೂರ್ಯಮಂಡಲಗಳ
ಆಕಾಶಗಂಗೆ ಜಲ್ಲಿ ಕಲ್ಲುಗಳ ಒಂದು ರಸ್ತೆ,
ಇಬ್ಬನಿ ಹನಿ ಕುಳಿತ ಹಸಿರು ಪಚ್ಚೆ
ಮೆತ್ತನೆ ಹಾಸಿಗೆ.
ಒಂದು ನಕ್ಷತ್ರದ ಬೆಳಕು –
ಇನ್ನೊಂದು ನಕ್ಷತ್ರ ಮುಟ್ಟಲು
ಬೇಕು ಹಲವು ಕೋಟಿ ಜ್ಯೋತಿರ್ವರ್ಷಗಳು –
ನಡುವೆ ಕತ್ತಲು ಬೆಳಕಿನ ದೊಂಬರಾಟ,
ಕಪ್ಪುರಂಧ್ರ ಕಿರಣಗಳ ನಡುವೆ ಡಿಢಿಕ್ಕಿ
ಉತ್ತರ-ದಕ್ಷಿಣ, ಪೂರ್ವ-ಪಶ್ಚಿಮ,
ಉತ್ತರಮುಖಿಗೂ ದಿಕ್ಕು ಕಾಣದೆ ಕಕ್ಕಾಬಿಕ್ಕಿ,
ಅಜ್ಞಾತ ಗಡಿಯಾರಕ್ಕೆ ಕಾಲದ ಕೀಲಿ ಎಲ್ಲೋ?
ಒಟ್ಟಿನಲ್ಲಿ ನಮಗೆ ಸೂರ್ಯನೇ ದೊಡ್ಡವನು
ಜೀವಕೋಟಿಗೆ ಮಿಂಚು, ಮಳೆ,
ಕಾಮನಬಿಲ್ಲು ಕೊಟ್ಟವನು
ಇವನೇ ಪೃಥ್ವಿಯ ಗಾರ್ಡಿಯನ್

**ಡಾ॥ ಎಂ. ವೆಂಕಟಸ್ವಾಮಿ**
ನಂ. ೫೧೯, ೬ನೇ ಬ್ಲಾಕ್, ಸಿ.ಪಿ.ಡಬ್ಲ್ಯು.ಡಿ. ಕ್ವಾರ್ಟರ್ಸ್,
ಟೈಪ್-೫. ಹೆಚ್.ಎಸ್.ಆರ್. ಲೇಔಟ್, ಬೆಂಗಳೂರು - ೫೬೦ ೧೦೨

ಎಂದು ಸ್ವಾದರಳಿಯ ಗಂಗಜ್ಜಿಗೆ ಕೇಳಿದ. ''ಅದೇನ ಕೇಳ್ತಿಯಪಾs ನಮ್ಮ ಈ ಜಗಳ ಸಾವು ತನಕಾ ಇರೋದೆ, ಇದು ನಮ್ಮ ಜನ್ಮಕ ಹ್ಯಾಂಗ ಬಿಡ್ತದ'' ಎಂದು ಖಿನ್ನಳಾಗಿ ''ಅಯ್ಯ ಒಲಿಮ್ಯಾಲ ಬ್ಯಾಳಿ ಇಟ್ಟೇನಿ ಹೊತ್ತಿರ ಬೇಕಪ್ಪ'' ಎಂದು ಅವಸರದಿಂದ ಅಡುಗೆಮನೆ ಕಡೆ ಧಾವಿಸಿದಳು. ಹೋಗ್ತಾ ಹೋಗ್ತಾ ಮೊಮ್ಮಗನ್ನ ಕರದು ''ಏ ಪಾರಾ ನೀನು ನಿಮ್ಮ ಕಾಕಾ ಸೇರಿ ಹೊಲಕ್ಕ ಹೋಗಿ ಎಮ್ಮಿಗಿ ಒಂದೀಟು ಮೇವ ತಗೊಂಡ ಬರ್ರೆಪ'' ಎಂದು ಹೇಳಿದಳು. ''ಹೂಂ'' ಎಂದು ಕಣಕಿ ಕಟ್ಟಕೊಂಡು ಬರಲಾಕ ಹಗ್ಗ ಬೇಕಂತ ಮೊಮ್ಮಗ ಹಗ್ಗ ಹುಡುಕ್ಲಿಕ್ ಹತ್ತಿದ. ಸಿಗದಿದ್ದಕ್ಕ ''ಅಜ್ಜಿ, ಇಲ್ಲಿ ಹಳಗಿನ ಹಗ್ಗ ಇತ್ತಲ್ಲ, ಅದೆಲ್ಲಿದ ನೀ ನೋಡಿಯೇನ ?'' ಎಂದಾಗ ''ಅಲ್ಲೇ ಛಪ್ಪರ ಮ್ಯಾಲಾದೇನ ನೋಡು'' ಎಂದು ಹೇಳಿ ಕೆಲಸ ದಲ್ಲಿ ನಿರತಳಾದಳು. ಹಗ್ಗ ಸಿಕ್ಕಿದ್ದಕ ಹುಡಗ ''ಸಿಕ್ತು'' ಎಂದು ಹೇಳಿ ತಗೊಂಡು ಹೊಂಟಿದ್ರು ''ಬಣವ್ಯಾಗ ಹುಳಾ ಹುಬುಟಿ ಇರತಾವ ಜರಾ ಹುಶಾರಿಯಿಂದ ತಗೊಂಡು ಬರ್ರಿ'' ಎಂದು ಹೇಳಿದಳು ಗಂಗಜ್ಜಿ. ''ಐತೇಳು'' ಎಂದು ಜೋರಾಗಿ ಹೇಳಿ ಮುಂದೆ ಸಾಗಿದರು.

ಊರ ದಾಟಿ ಹೊಲದ ದಾರಿ ಹಿಡಿದು ಮಾತ ಹೇಳಕೋತ ಹೊಂಟಿದ್ರು. ''ಎನಪ್ಪ, ನೀ ಏಟನೆತಿ ಓದಾಕತ್ತಿ ತಮಾ'' ಎಂದು ಕೇಳಿದಾಗ ''ಎಂಟನೆತ್ತಿ ಕಾಕಾ'' ಅಂದಿದ್ದ. ''ಅಂದ್ರ ಮ್ಯಾಟ್ರಿಕ್ ಆಗಬೇಕಾದ್ರ ಇನಾ ಏಟ ವರ್ಷ ಬೇಕಪ್ಪಾ!'' ''ಇನ್ನಾ ಎರಡು ವರ್ಷ.'' ''ಅಂದ್ರ, ಅದೇ ತಮಾ ಚಲುವಜ್ಜನ ಮಗಾ ಏನ ಓದ್ಯಾನ!'' ಅಂದಾಗ ''ಏನ ಕಾಕಾss ನೀ ಹಿಂಗ ಕೇಳಾಕ್ಹತ್ತಿ, ನಮ್ಮ ಸುತ್ತ ಮುತ್ತ ಹಳ್ಳ್ಯಾಗ್ಯಾಕ ಜಿಲ್ಲಾದಾಗ ಯಾರು ಓದಿಲ್ಲ. ಪುಸ್ತಕಾನು ಬರದಾರ ಕಾಕಾ! ದೊಡ್ಡ ಸಾಹೆಬ್ರ ಅದಾರ. ನಿನಗ ಗೊತ್ತಿಲೇನ, ಅವರೀಗ ಹೊರಗಿನ ದೇಶಕ್ಕ ಹೋಗ್ಯಾರ ಫಾರೆನ್! ಫಾರೆನ್!'', ''ಫಾರೆನ್! ಅಂದ್ರೇನಪ ?'' ''ಏಳ ಸಮುದ್ರ ದಾಟಿ ದೂರದ ದೇಶಕ್ಕ ಹೋಗ್ಯಾರ, ಅವ್ರು ಇನ್ನೇನ ಬರವ್ರ ಅದಾರ. ಅದಕ್ಕ ಚಲುವಜ್ಜ ಹಿರ್ಯಾರ ಪುಣ್ಯಾ ಅಂತ ಹಬ್ಬದೂಟ ಹಾಕಾಕತ್ಯಾನ. ಭಜನಿ ಹೇಳ್ಯಾರ! ಇವತ್ತ ನಾವೂ ಭಜನಿ ಕೇಳಾಕ ಹೋಗಾನು ಕಾಕಾ.'' ''ಹೌದಪ್ಪ ನಾನೂ ಬರ್ತಿನಿ ನಿಮ್ಮಜ್ಜನ ಹಾಡ ಕೇಳಬೇಕಪಾ.'' ''ನಮ್ಮ ತಾತಾ ಏನ ಹಾಡತಾನ ಕಾಕಾ, ಚಲುವಜ್ಜ ಹಾಡತಾನ ಕೇಳಬೇಕ. ಚಲುವಜ್ಜ ಮಾತಾಡಿದ್ರ ಮುತ್ತ ಉದರದಂಗ. ಅವನ ಹಾಡ ಕೇಳ್ದರ ಕೋಗಿಲೆ ನಾಚಬೇಕು, ಅಟ್ಟ ಅಲ್ಲ, ಅವನ ಹಾಡ ಕೇಳಿದ್ರ ಕುದುರಿ ಕುಣಿತೈತಿ ಹಂಗ ಹಾಡತಾನ'' ಹೌದಾ! ಎಂದು ಆಶ್ಚರ್ಯದಿಂದ ಮೂಗಿನ ಮ್ಯಾಗ ಬೆರಳ ಇಟಗೊಂಡ. ''ತಮಾ, ನೀನು ಚಲುವಜ್ಜನ ಮಗನಂಗಾಗಬೇಕಾದರ ಏಟ ವರ್ಷ ಓದಬೇಕು'' ಅಂದಾಗ, ''ಏನ ಕಾಕಾ! ನನ್ಯಾ್ಗರ ಓದಸ್ತಾರ ? ತಾಯಿ ತಂದಿ ಇಲ್ಲದ ಮಗಾ ನಾನು. ಅಜ್ಜ ದುಡದದ್ದು ಹೊಟ್ಟಿಗಿ ಸಾಲಾಂಗಿಲ್ಲ'' ಎಂದು ಮೊಮ್ಮಗ ಹೇಳಿದ. ''ಏನ ತಮಾ ನಿನ್ಯಾಕ ಹಿಂಗ ಹೇಳ್ತಿ? ನಾ ಇದ್ದಿನೆಲ್ಲೋ ನನ್ನೆಲ್ಲ ಆಸ್ತಿ ಹೋದ್ರ ಚಿಂತಿ ಇಲ್ಲ. ನನಗರೆ ಯಾರದಾರ ಹೇಳು, ನೀನೂ ಚಲುವಜ್ಜನ ಮಗನಂಗಾಗಬೇಕು.'' ''ಕಾಕಾ ನಿನ್ನಂಗ ಚಲುವಜ್ಜನೂ ಹೇಳ್ಯಾನ, ನಿನಗ ನನ್ನ ಮಗನಿಗಿ ಹೇಳಿ ಓದಲಾಕ ಅನುಕೂಲ ಮಾಡಿಸ್ತಿನಂದಾನ.'' ''ನೀ




ಚಿಂತಿ ಮಾಡ ಬ್ಯಾಡ ತಮಾ ಏಟ ಓದತಿ ಓದು ನಾ ನಿನ್ನ ಬೆನ್ನೀಗಿರ್ತಿನಿ, ಅಂತ್ಹೇಳ್ಯಾನ ಕಾಕಾ! ಹಂಗ ಮಾತ ಹೇಳಕೋತ ನಿಂತ್ರ ಹೊತ್ತ ಹೋಗಿದ್ದ ತಿಳ್ಯಾಂಗಿಲ್ಲ ನಡಿ ಕಾಕಾ ಅಜ್ಜಿ ಹಾದಿ ನೋಡ್ತಿರತಾಳ, ಈ ಕಣಕಿ ಹೊರಿ ನನ್ನ ತಲಿಮ್ಯಾಲ ಹೊರ್ಸು'' ಎಂದ ಹುಡುಗ. ''ಏ ತಮಾ ನೀ ಸಾಲಿ ಬರ್‍ಯಾಂವ ಕಣಕಿ ಹೊರದೇನಪ್ಪ ನಮ್ಮಂಥವರು ಹೊರತೀವಿ ಬಿಡು. ನಾ ಹೊತಗೋತಿನಿ ಹಿಡಿ ಎತ್ತು... ಎತ್ತು... ಹೌದು ಭಪ್ಪರೆ ಬಾಹದ್ದೂರ'' ಎಂದು ತಲಿಮ್ಯಾಲ ಹೊತಗೊಂಡು ಮಾತಾಡಕೋತ ಹಾದಿ ಹಿಡದ್ರು.

ಅಳ್ಯಾ, ಮೊಮ್ಮಗ ಕಣಕಿ ತರಲಾಕ ಇಬ್ರೂ ಹ್ವಾದವರು ಇನ್ನು ಬರಲಿಲ್ಲ, ಅವ್ರು ಬಂದ ಮ್ಯಾಲ ಉಂಡ್ರಾತು ಅಂತ್ಹೇಳಿ ಗಂಗಜ್ಜಿ ಅಡಗಿ ಮಾಡಕೊಂಡು ದನಗೋಳ ಹೆಂಡಿಕಸ ಮಾಡಿ, ಮೈಮ್ಯಾಲ ಒಂದೀಟು ನೀರ ಹಾಕ್ಕೊಂಡು ಊಟ ಮಾಡ್ದೆ ಸ್ವಾದರಳ್ಯಾ ಮತ್ತು ಮೊಮ್ಮಗ ಇಬ್ರು ಬರೋದನ್ನೇ ನೋಡ್ತಾ ಕಾದು ಕುಳ್ತಿದ್ಳು. ಕಣಕಿ ಹೊರಿ ಹೊತಗೊಂಡು ಮನಿ ಅಂಗಳದಾಗ ಬರೋದ ನೋಡಿ ಬಂದ್ರೇಳು ಎಂದು ಮನಸ್ಸಿಗಿ ಸಮಾಧಾನ ಮಾಡಕೊಂಡು, ''ಮೇವ ಹಾಕಿ ಕೈ ಕಾಲ ಮುಖ ತೊಳಕೊಂಡು ಬರ್ರೆಪ ಉಣ್ಣಾಕ'' ಎಂದು ಕರದ್ಳು. ಇಬ್ರು ಉಂಡ್ರು. ''ನೀನು ಉಣ್ಣಜಿ'' ಎಂದು ಮೊಮ್ಮಗ ಹೇಳಿದ. ''ಬಿಸಲ ಭಾಳ ಐತಿ ಒಂದೀಟು ಗಿಡದ ನೆಳ್ಳಿಗಿ ಅಡ್ಡಾಗರಿ. ಸಂಜಿಕ ಚಲುವಣ್ಣನ ಹೊಲಕ್ ಹೋಗಾ ಕತ್ತಿರಿ'' ಎಂದಾಗ ''ಆಯ್ತಜ್ಜಿ'' ಎಂದು ನೆಳ್ಳಿಗೆ ಹೋಗಿ ಕಾಲ ಚಾಚಿದರು. ''ಚಲುವಜ್ಜ ಮತ್ತ ನಿಮ್ಮ ಮುತ್ಯಾ ಇಬ್ರು ಪದ ಹೇಳಲಿಕ್ಕ ನಿಂತ್ರಂದ್ರ ಬೆಳಗಾಗೋದೆ ಗೊತ್ತಾಗಂಗಿಲ್ಲ'', ಅನ್ನುವ ಅಜ್ಜಿ ಮಾತ ನೆನಪಿಸಿಕೊಂಡು ಮಲಗಿ ನಿದ್ದಿಮಾಡಿ ಎದ್ದು ನೋಡಿದ್ರ ಹೊತ್ತ ಹೊಳ್ಳಿ ಇಳಿ ಹೊತ್ತಾಗಿತ್ತು. ''ಕಾಕಾ ಹೊತ್ತ ಇಳಿದೈತಿ ಏಳು ತಡಾ ಆಗತೈತಿ'' ಎಂದು ಮೊಮ್ಮಗ ಎಬ್ಬಿಸಿದ. ''ಐತಪಾ ನಡಿ ಮನಿಗಿ ಹೋಗಿ ಗಂಗಜ್ಜಿಗಿ ಹೇಳಿ ಹೋಗಾನು ನಡಿ ನಡಿ'' ಎಂದು ಅವಸರ ಮಾಡಿ ನಡೆದರು.

ಚಲುವಜ್ಜನ ಅಂಗಳ ತುಂಬ ಜನರು ತುಂಬಿದ್ರು. ಮನೆ, ಅಂಗಳ ಮಾವಿನತೋರಣ, ತೆಂಗಿನಗರಿಯಿಂದ ಸಿಂಗಾರಗೊಂಡಿತ್ತು. ಅಂಗಳದಾಗ ಒಡ್ಯಾಡೋರಿಗೆ ಮಾವಿನ ತಳಿರು ತೋರಣಗಳು ಮುಖಕ್ಕ ತೆಲಿಗಿ ಬಡದು ಸ್ವಾಗತಿಸುತ್ತಿದ್ದವು. ಈ ಸಂಭ್ರಮಾಚರಣೆಯಲ್ಲಿ ಚಲುವಜ್ಜ ಯಾರಿಗೇನು ಕಡಿಮಿ ಬೀಳಬಾರ್ದು ಎಂದು ನಿಗಾವಹಿಸಿದ್ದ. ಅಜ್ಜ ಹಿಂಡ ಮಂದ್ಯಾಗ ಕುಂತಿದ್ದ. ನಾವು ಬಂದುದ್ದ ನೋಡಿ ಅಂಬಜ್ಜಿ ಒಳಗ ಕರದು ನನಗ ಕಾಕಾಗ ಉಣ್ಣಾಕ್ಕಿಟ್ಟಳು. ಉಂಡು ಸಬಾದಾಗ ಬಂದು ಕುಂತೇವು. ಭಜನಿ ಇನ್ನಾ ಸುರು ಆಗಿರಲಿಲ್ಲ. ಅಲ್ಲಲ್ಲಿ ಗುಂಪು ಗುಂಪಾಗಿ ಜನ ಕುಂತಿದ್ರು ಕೆಲವರು ಚಲುವಜ್ಜನ ಮಗನ ಬಗ್ಗೆ ಮಾತಾಡಕೊತಿದ್ರು. ಅದ ವೇಳ್ಯಾಕ ಚಲುವಜ್ಜ ಬಂದೂಕ ಹೆಗಲಿಗೆ ಹಾಕೊಂಡು ಹೊರಗ ಬಂದ. ಗುಂಡು ಹಾರಿಸಿ ಹಿರ್ಯಾರಿಗೆ ಗೌರವ ಸಲ್ಲಿಸುವುದು ಆ ಮನೆತನದ ವಾಡಿಕೆ. ಆ ರೀತಿ ತನ್ನ ಖುಷಿ ವ್ಯಕ್ತಪಡಿಸುವ ಪರಿಪಾಠ ಚಲುವಜ್ಜ ಹಿಂದಿನಿಂದಲೂ ಮಾಡಕೊಂಡು ಬಂದಿದ್ದ. ಎರಡು ಗುಂಡು ಹಾರಿಸಿ ಗೌರವ ಸಲ್ಲಿಸಿದಾದ ಮ್ಯಾಲ ಮಕ್ಕಳು ಮರಿ ಸೇರಿ ಪೂಜೆ ಸಲ್ಲಿಸಿದ್ರು. ಪೂಜೆ ಮಾಡಿದ ಮ್ಯಾಲ ಊಟ, ಊಟ ಮುಗಿದ ಮ್ಯಾಲ ಭಜನಿ, ಇದು ಪ್ರತಿ ವರ್ಷದ ಪದ್ಧತಿ ಯಂತೆ ನಡಿಯೋದು. ಬಂದೂಕ ಸದ್ದ ಕೇಳಿಕೊಂಡು ಗೂಡ್ನಲಿದ್ದ ಪಕ್ಷಿಗಳು ಎಚ್ಚರಗೊಂಡು ಚಲುವಜ್ಜನ ಮನೆಯಲ್ಲಿ ಏನೋ ಐತಿ ಎಂದು ಹಾರಿ ಹೋಗ್ದೆ ನಿದ್ದೆನೂ ಮಾಡದೆ ಸಂಭ್ರಮದಿಂದ ಪದ ಕೇಳಾಕ ತಯ್ಯಾರಾಗಿ ಕುಂತ್ವು. ಪಂಕ್ತಿವಾರ ಊಟ ಮುಗಿದ ಮೇಲೆ ಬೇರೆ ಬೇರೆ ಮ್ಯಾಳದವರು ಒಂದೊಂದು ಹಾಡ ಹಾಡಿದ್ರು. ''ಚಲುವಜ್ಜ, ಮಾದಜ್ಜ ಇಬ್ಬರೂ ಒಂದು ಪದ ಹೇಳಬೇಕು'' ಎಂದು ನೆರೆದವರು ಜೋರಮಾಡಿದ್ರು. ''ಅಯ್ತಪಾ ಹಾಡ್ತೇವಿ ನಮಗೂ ವಯಸ್ಸಾತು ನಾವ ಏಟಂತ ಹಾಡೋದು'' ಎಂದು ಹೇಳ್ತಾ ಒಂದು ಪದ ಹಾಡಿದರ, ಸುತ್ತ ಮುತ್ತ ಹೊಲದಾಗಿನೋರು, ಮಲಗಿದೋರು ಎದ್ದುಬಂದು ಕೂತರು. ಅಡವಿ ಗಿಡಾ-ದನ-ಪ್ರಾಣಿ-ಪಕ್ಷಿಗಳು ಆನಂದದಿಂದ ಆಲಿಸಿದವು. ಎರಡನೇ ಹಾಡು ಹಾಡಬೇಕಾದರ, ಮಾದಜ್ಜ ಒಂದೀಟು ತೋಂಡಿದ್ದ ಹಿಂಗಾಗಿ ಅರ್ದಾಕ ನಿದ್ದಿ ಹೋದ. ಚಲುವಜ್ಜ ಪದ ಮುಂದುವರಿಸಿದ. ಚಲುವಜ್ಜನ ಪದ ಕೇಳಕ್ಕೆಂದೇ ಮೋಡದ ಮುಸುಕಿಂದ ಚಂದ್ರ ಹೊರ ಬಂದಾನೇನು ಅನ್ನುವಂಗ ಹಾಲ ಚೆಲ್ಲಿದ ಬೆಳದಿಂಗಳು ಬಿದ್ದಿತು. ಕುಂತು ಕೇಳವ್ರಿಗೂ ಹಾಡವ್ವರಿಗೂ ಹಿತ ನೀಡಿತು. ಮೋಡಗಳು ಚಂದ್ರನಿಗೆ ಅಡ್ಡ ಬರದೆ ಸಹಕರಿಸಿದ್ವು, ಧಾವಂತ ದಲ್ಲಿರುವವರು ಕೂಡ ಒಂದೀಟು ನಿಂತ ಹಾಡ ಕೇಳಬೇಕು ಅನಿಸ್ತಿತ್ತು. ಗೆಳತನದ ಹಾಡೊಂದು ಹಾಡಿ ನಡುವ ಸೊಗಸಾದ ಒಂದು ಉಪ ಕಥೆ ಹೇಳಿದ. ಬಂದವರೆಲ್ಲರೂ ಚಲುವಜ್ಜನ ಹಾಡು, ಕಥಿ ಕೇಳಿ ಕೊಂಡಾಡಿದ್ರು. ಬೆಳಗಾತು, ಮಂಗಳಾರುತಿ ಮಾಡಿದ್ರು. ದೂರದ ಊರವರು ಹೊರಟ ನಿಂತ್ರು. ಮ್ಯಾಳಿನವರಿಗೆ ಖುಷಿ ಕೊಟ್ಟು ಕಳಿಸಿದ್ರು. ಕೆಲವರು ಮನಿಕಡಿ ಹೋಗಬೇಕು ಅಂದ್ರು. ಮಾದಜ್ಜ ನಿದ್ದೆಯಿಂದ ಎದ್ದು ಮುಖ ತೊಕ್ಕೊಂಡು ಅಂಬಜ್ಜಿ ಮತ್ತು ಚಲುವಜ್ಜನಿಗೆ ಹೇಳಿ ಹೊಂಟನಿಂತ. ಜೊತೆಗೆ ಮೊಮ್ಮಗ, ಅಳ್ಯಾ ಇಬ್ರು ಇದ್ರು. ''ಮಾದಪಣ್ಣ ನಿಂದ್ರು ಜರ'' ಅಂತ್ಹೇಳಿ ಒಳಗ ಹೋದ ಅಂಬಜ್ಜಿ ಹುಗ್ಗಿ ತುಂಬಿದ ಗಡಗಿ ತಂದು ಮೊಮ್ಮಗನ ತಲಿಮ್ಯಾಲ ಹೊರಸಿದಳು.

ಹೊತ್ತಗೊಂಡು ಹುಡುಗ ಮುಂದ ಮುಂದ ನಡೆದ.

''ತಮಗೊಳ್ಳಾ ಇಂದು ಯಾಕ ಹಿಂಗ ಆಗಿದೇವು, ನಾ ಯಾಕ ಹೊಲ ಮನಿ ಮಾರಿ ಮಗನಿಗೆ ಓದ್ಸದೆ, ಯಾಕಂದ್ರ ಜಾತಿ ಭಾಳ ಕೆಟ್ಟದ್ದು ನಮ್ಮ ನಮ್ಮಲ್ಲೇ ಆ ಕೇರಿ ಈ ಕೇರಿ ಅಂತ ಜಗಳಾ ಮಾಡಿಕೊಂಡು ಸುಮ್ ಸುಮ್ನ ಮಾರಿ ಖರ್ರಗ ಮಾಡಕೊಂಡಿವಿ. ಹಾಳ ರಾಜಕೀಯ, ಈ ಸಮಾಜ ನಮ್ಮನ್ನು ಮುಂದ ಹೋಗಲಾಕ ಬಿಡಾಂಗಿಲ್ಲ, ಶಿಕ್ಷಣ ಕಲಿಯೋದ್ರಿಂದ ನಮ್ಮ ಮಕ್ಕಳು ಮುಂದ ಬರ್ತಾವ. ಅದರಿಂದ ಅರಿವು ಬರ್ತಾದ. ಅಣ್ಣ ತಮ್ಮರಂಗಿದ್ದ ನಮ್ಮನ್ನು ಮನಿ ಬ್ಯಾರಿ ಮಾಡಿದ್ದಲ್ದೆ, ಓಣಿ ಬ್ಯಾರಿ, ಕೇರಿ ಬ್ಯಾರಿ ಮಾಡಿ ಮ್ಯಾಲಿನವರು ನಮ್ಮನ್ನು ಸುಖವಾಗಿ ಇರ್ಲಾಕ ಬಿಡಾಂಗಿಲ್ಲ, ಬಿಟ್ಟಿಲ್ಲ. ನಮ್ಮ ನಡುವ ಏನ ಒಡಕ ಹುಟ್ಟಿಸ್ಯಾರಲ್ಲ, ಇದು ಇವತ್ತಿಂದೇನು ? ಯಾವ ಕಾಲಕ್ಕೋ ಪುರಾಣ ಕಾಲದಿಂದ್ಲೂ ನಡಕೊಂಡು ಬಂದದ. ಅದ್ನೆಲ್ಲ ನಂಬಲಾರ್ದೆ ಕೂಡಿ ಬಾಳಬೇಕಾಗ್ಯಾದ'' ಅಂತ ಚಲುವಜ್ಜ ಹೇಳಿದ ಮಾತುಗಳನ್ನು ನೆನಪಿಸಿಕೊಳ್ಳುತ್ತ ಮಾದಜ್ಜನ ಮೊಮ್ಮಗ, ಅಳಿಯ ಮನಿ ಸೇರಿದ್ರು. ಗಂಗಜ್ಜಿ ಮೊಮ್ಮಗನ ತಲಿಮ್ಯಾಲಿನ ಗಡಗಿ ಇಳಸಕೊಂಡು, ''ಅಂಬಕ್ಕ ಕೊಟ್ಟಳೇನು'' ಎಂದು ಕೇಳಿದಳು. ''ಹೌದಜ್ಜಿ'' ಎಂದು ಮೊಮ್ಮಗ ಉತ್ತರಿಸಿದ. ''ಎಟ್ಟೇ ಆದ್ರು ನಿಮ್ಮದು ಅವರದು ಹಳಿ ಗೆಳತನ ನೋಡು, ನಡುವ ಯಾರ್ಯಾರೋ ಜಗಳ ಹಚ್ಚಿದ್ರೂ, ಅಂಬಜ್ಜಿ ಮನಿಗಿ ಅಡಗಿ ಕೊಡೋದು ಮರತಿಲ್ಲ ಅತ್ತಿ'' ಎಂದು ಅಳ್ಯಾ ಹೇಳಿದ. ಮಾತಿಗಿ ಹೌದೆಂದು ಹೇಳುತ್ತ ಇಲ್ಲಪ್ಪ ಅಂಬಕ್ಕ ಭಾಳ ಒಳ್ಳೆಯವಳಪ್ಪ ಎನ್ನುತ್ತ ಲವಲವಿಕೆಯಿಂದ ಮಾತಾಡಿ ನಡಿರಿ, ನಡಿರಿ, ನೀರಿನ ಗೊದ್ಲಿಗಿ ಉರಿ ಹಚ್ಚೀನಿ ನೀರ ಕಾದಾವಿಲ್ಲ ನೋಡ್ರಿ ! ನೋಡಿ ಮೈ ತೊಕ್ಕೊರಿ. ನಿಮ್ಮ ಮುತ್ಯಾ ಎಲ್ಲಿಗಿ ಹೋದ ಎಂದು ಗಂಗಜ್ಜಿ ಕೇಳಿದ್ಲು, ''ಹಳ್ಳಕ್ಕ ಹೋಗ್ಯಾನು, ತಂಬಿಗಿ ತಗೊಂಡು'', ಅಂತ ಮೊಮ್ಮಗ ಹೇಳಿದ, ಇಡೀ ದಿನ ನಿದ್ದೆಯಲ್ಲಿ ಕಳದ್ರು, ರಾತ್ರಿ ಉಂಡು ಹಾಸಿಗಿ ಹಾಸಿದ್ರು ಗಂಗಜ್ಜಿ ಇನ್ನೇನು ಮಲಗಬೇಕು ಅಂತಿದ್ಲು ಅಷ್ಟೊತ್ತಿಗಿ, ''ಅಜ್ಜಿ! ಅಜ್ಜಿ!'' ಎಂದು ಮೊಮ್ಮಗ ಕೂಗಿದ, ''ಏನೋ ಅದು ಅಜ್ಜಿ ಅಜ್ಜಿ ಅಂತಿಯಲ್ಲ'' ''ಏನಿಲ್ಲ ಅಜ್ಜಿ. ಚಲುವಜ್ಜ ರಾತ್ರಿ ಭಜನಾದಾಗ ಒಂದು ಕಥಿ ಹೇಳ್ಯಾನ ಅದು ನಿನಗ ಹೇಳ್ಲೇನ ಅಜ್ಜಿ?'' ಅಂದಾಗ ''ನನಗ ಅದರ ಅರ್ಥಾ ಆಗಿಲ್ಲ'' ಎಂದು ಮೊಮ್ಮಗ ಕೇಳಿದ. ''ನೋಡು ನನಗ ನಿದ್ದಿ ಬಂದೈತಿ ನಿಮ್ಮಜ್ಜಗ ಹೇಳು'' ಎಂದಾಗ ಮೊಮ್ಮಗ ''ಅಜ್ಜಾ! ಅಜ್ಜಾ!'' ಎಂದು ಜೋರಾಗಿ ಕೂಗಿದರೂ ಉತ್ತರ ಬರ್ಲಿಲ್ಲ. ಆಗ ''ಚಲುವಜ್ಜ ರೊಕ್ಕಾ ಕೊಟ್ಟಿದ್ದ ಅದರಿಂದ ಕುಡುದು ಮಲಗ್ಯಾನ ಕಾಣಸ್ತದ'', ''ಹೌದಾ ಇದರದು ಇದೇ ಆತು, ಏನು ಹೇಳ್ತಿ ಹೇಳು ಕೇಳತೀನಿ'' ಎಂದಳು.

''ಪುರಾಣ ಕಾಲದಾಗ ಒಬ್ಬ ಡೋಂಬಿ ರಾಜ ಇದ್ದಂತ. ಆತ ದೊಡ್ಡ ಶ್ರೀಮಂತ, ''ರಾಜ ಅಂದ್ರ ಸಾವುಕಾರ ಇರ್ತಾನೇಳು ಹೇಳು ಮುಂದಕ;'' ಅಂದಾಗ ''ನಲ್ವತ ಹಳ್ಳಿಗಿ ಮಾಲಕ ಇದ್ದಂತ. ಊರಿಗಿ ಗಟ್ಲೆ ಹೊಲಗೋಳು, ಅರಮನ್ಯಾಗ ಒಂದು ಭಾರಿ ಗೂಳಿ ಇತ್ತಂತ. ಅಲ್ದೆ ಎಂಟೆತ್ತಿನ ಒಕ್ಕಲುತನ, ಬಿತ್ತಲಕ ಹೋಗಬೇಕಾದರ, ಅರಮನ್ಯಾಗ ಏನೇ ಒಳ್ಳೆ ಕೆಲಸ ಮಾಡಬೇಕಾದ್ರ ಗೂಳಿ ಪೂಜೆ ತಪ್ಪದೆ ನಡೀತಿತ್ತಂತ. ಹಿಂಗ ರಾಜಾನ ಕಾರಾಭಾರ ಸಾಗಿತ್ತಂತ, ವಯಸ್ಸಾದ್ದರಿಂದ ಡೋಂಬಿ ರಾಜಾ ತೀರಿಹೋದ ಮ್ಯಾಲ ಯುವರಾಜ ಗದ್ಗಿ ಏರಿದನಂತ, ಕಾಲ ಉರುಳಿತು. ತಂದೆಯಂತೆ ರಾಜ್ಯಭಾರ ಯುವರಾಜ ನಡೆಸಿಕೊಂಡು ಹತ್ತ ಹಳ್ಳಿದಾಗೆಲ್ಲಾ, ಅಸ್ಥಾನದಲ್ಲೆಲ್ಲಾ ಹೆಸರ ಮಾಡಿದ. ಸುತ್ತೂರಲೆಲ್ಲ ಇವರದೇ ಸುದ್ದಿಯಂತ ಹೀಂಗ ಅವರ ಭೋಗ ಭಾಗ್ಯ ಮುಂದವರಿದಿತ್ತು, ಒಂದು ದಿನಾ ಮಾತಂಗ ವಂಶದಾಂವ ಒಬ್ಬ ಕೆಲಸಾ ಹುಡುಕ್ಕೊಂಡು ಅರಮನೆ ಪಕ್ಕದ ಊಗಳತೆ ದೂರದಲ್ಲಿ ಮರದ ಕೆಳಗೆ ಬಿಡಾರ ಹೂಡಿ ಚಪ್ಲಿ ಹೊಲ್ಯೋ ಕೆಲ್ಸ ಮಾಡ್ತಾ ಜೀವ್ನ ಸಾಗಸಲಿಕ್ಕ ಹತ್ತಿದ್ದ. ಅವನಿಗೊಬ್ಬಳು ಮಗಳಿದ್ಲು, ಆಕಿ ರೂಪವತಿ, ನೋಡ್ಲಕ್ ಚಲುವ ಚೆಲೋ ಮುದ್ದೆ ಆಗಿದ್ಲು. ದಿನಾ ಅರಮನೆ ಎದುರಿಗಿ ಹಾದು ನೀರ ತರಾಕ, ಒಗ್ಯಾಣ ಒಗಿಯಾಕ, ಕಟಗಿ ಕುಳ್ಳ ತರ್ಲಾಕ ಹೋಗತ್ತಿದ್ಲು, ಡೋಂಬಿ ರಾಜ ಆಕಿ ಹೋಗಾದು ಬರಾದು ನೋಡಿ, ಮನ ಸೋತಿದ್ದಂತ. ಯಾರ ಇಕಿ, ಇಟೊಂದು ಛಂದ ಅದಾಳ ಅಂದಕೊಂಡು ಅವಳನ್ನ ಪಡದೇ ತೀರಬೇಕು ಅಂತ್ಹೇಳಿ ಸೇವಕರಿಗೆ ಹಚ್ಚಿ ಕರಸ್ದ. ನಿನ್ನ ಹೆಸರೇನು ! ನಿನ್ನಮ್ಯಾಲ ಮನಸ್ಸಾಗೈತಿ. ನಿನ್ನ ವಿಚಾರ ಏನದ ಅಂತ ಕೇಳಿದ. ಆಗ ಆ ಸುಂದರಿ ಏನೂ ಹೇಳ್ದೆ ಕೇಳ್ದೆ ಮೌನಾಗಿ ಮನಿಗಿ ಹೊಳ್ಳಿ ಬಂದಿದ್ಲು. ರಾಜನ ಕಾಟ ತಾಳಲಾರ್ದೆ, ಒಂದು ದಿನ ಮಾತಂಗ ಸುಂದರಿ, ''ಅಪಾ'' ಮSSತ! ಮSSತ! ನಾ ದಿನಾ ಹಳ್ಳಕ್ ನೀರಿಗಿ, ಕಟಗಿ ಕುಳ್ಳಿಗಿ ಹೋದಾಗ ರಾಜಾನ್ನ ಕಿರಿ ಕಿರಿ ಭಾಳ ಆಗ್ಯೆತಿ'', ''ಏನ ಕಿರಿಕಿರಿ'' ''ಏನಿಲ್ಲ ನನ್ನಮ್ಯಾಲ ಮನಸಾಗೈತಿ ಅಂತ ಪೀಡಾಸ್ಕತ್ಯಾನ'' ''ಅದಕ್ಕ ನೀ ಏನ್ ಹೇಳಿದಿ ?'' ''ನಮ್ಮಪ್ಪಗ ಕೇಳಿ ಹೇಳ್ತಿನಿ'' ಅಂದೀನಿ. ''ಭಾಳ ಛಲೋ ಕೆಲ್ಸ ಮಾಡಿದಿ, ನಿನಗ ಇನ್ನೊಂದ ಸಾರಿ ಕರ್ದ ಕೇಳಿದ್ರ ನಾ ಕೇಳಿದ್ ಕೊಡತಿ ಏನ್ ? ಎಂದು ಕೇಳಿ ಬಾ'' ಎಂದು ಹೇಳಿದಾಗ ''ಐತಪಾ'' ಎಂದು ಮಲಗಿದಳು. ಮರುದಿನ ಮಾತಂಗ ಸುಂದರಿ ಯಥಾಪ್ರಕಾರ ನೀರಿಗಾಗಿ ಹಳ್ಳಕ್ ಹೊಂಟಿದ್ಲು, ಡೋಂಬಿ ರಾಜಾ ಮತ್ತ ಕರೆದು ಕೇಳಿದ. ಆಗ ಆ ಸುಂದರಿ ''ನಾನು ಕೇಳಿದ್ ಕೋಡೋದಾದ್ರ ನಾ ನಿಮ್ಮವಳಾಗ್ತಿನಿ'' ಅಂದ್ಲು, ''ನೀ ಏನ್ ಕೇಳ್ತಿ ಕೇಳ್ ಅದನ್ನ ಕೊಡಾಕ ನಾ ಸಿದ್ದಿದ್ದೀನಿ. ಅದು ನಿನಗ ಏನ್ ಬೇಕ್ ಅನ್ನೋದು ವಿಚಾರ ಮಾಡಿ ನಿಮ್ಮಪ್ಪಗ ಕೇಳಿ ಹೇಳು'' ಎಂದು ಹೊಂಟಹೋದ. ಮಗಳು ನೀರ ತುಂಬಕೊಂಡು ಬರೋದನ್ನ ಅಪ್ಪ ಕಾಯ್ತಾ ಕುಂತಿದ್ದ. ''ಏನು ಆತು, ನೀ ಏನ್ ಕೇಳ್ದಿ ? ರಾಜಾ ಅದಕ್ಕೇನಂದ'' ಎಂದು ಬಿಟ್ಟೂ ಬಿಡದ ಕೇಳಾಕ ಹತ್ತಿದ. ಆಗ ಆಕಿ ''ಏನಿಲ್ಲಪಾ ನೀ ಕೇಳಿದ್ ಕೊಡತೀನಿ. ನಿಮ್ಮಪ್ಪಗ ಕೇಳಕೊಂಡ ಬಾ ಅಂದಾನ.'' ''ಹಾಂಗಿದ್ರ ಮಗಳ! ನೀ ಏನೂ ಕೇಳಬ್ಯಾಡ, ರಾಜ ಕುಂದ್ರೋ ಗದ್ದಿಗಿ ಐತಲ್ಲ ಅದರ ಮ್ಯಾಲ ಹಾಕಿದ ಎತ್ತಿನ ತೊಗಲ ಕೊಡು ಅಂತ ಕೇಳಮ್ಮ'' ಅಂದಾಗ ''ಹಂಗ ಮಾಡತಿನೇಳಪಾ'' ಎಂದು ತಲೆ ಹಾಕಿದಳು.

ರಾತ್ರಿ ಮಲಗೊ ಹೊತ್ತಿಗಿ ಮಗಳು ಮಾತಂಗ ಸುಂದರಿ, ''ಅಪಾ ! ಅಪಾ ! ನಮಗೀಟ ಬಡತನ ಐತಿ. ಕೂಲಿ ಮಾಡಿದ್ರೂ ಹೊಟ್ಟಿ ತುಂಬಲಾಕತ್ತಿಲ್ಲ ಅದಕ್ಕ ಬೆಳ್ಳಿ ಬಂಗಾರ ಸಂಪತ್ತು ಏನರೇ ಕೇಳಾದ ಬಿಟ್ಟು ಎತ್ತಿನ ತೊಗಲ ಕೇಳಿದಲ್ಲಪ ಯಾಕ ?'' ''ಅವಾ ನಿನಗ ತಿಳ್ಯಾಂಗಿಲ್ಲೇಳು, ಸುಮ್ನ ಮಲಗು'' ಎಂದ. ''ಅಲ್ಲಪಾ ಏನರ ಐತಿ ಹೇಳು'' ಎಂದು ಹಟ ಹಿಡದಳು. ಆಗ ಅವರಪ್ಪ, ''ನಾನ್ ಭಾಳ ಸಣ್ಣಾಂವ ಇದ್ದೆ, ಸಣ್ಣಾಂವ ಅಂದ್ರ ನಾಲ್ಕೈದು ವರ್ಷದಾಂವ ಇರಬೇಕು, ಡೋಂಬಿರಾಜ ಅಂದ್ರ ಈ ರಾಜನ ಅಪ್ಪ ತನ್ನ ಅರಮನೆಯ ಗೂಳಿ ಮೆರವಣಿಗಿ

ಮಾಡ್ತಾಕ್ಹತ್ತಿದ್ದ. ಬಾಜಾ ಬಜೇಂತ್ರಿ ಹಚ್ಚಿ ಊರಾಗ ಮೆರವಣಿಗಿ ನಡದಿತ್ತು, ಅಪ್ಪ ಗೂಳಿ ಮುಂದ ಹಲಗಿ ಭಾರಸತಿದ್ದ, ಗದ್ದಲದಾಗ ಗೂಳಿ ಬೆದರಿ ಜಿಗದು ನಮ್ಮಪ್ಪನ ಕಾಲ ಮ್ಯಾಲ ಜೋರಾಗಿ ತುಳಿದಿದ್ದಕ್ಕ ಅಪ್ಪನ ಕಾಲ ಮುರಿತು, ಆಗ ಸಿಟ್ಟಿಗೇರಿದ ಅಪ್ಪ ''ಏ ಗೂಳಿ, ನೀ ನನ್ನ ಕಾಲ ಮುರಿದಿಯಲ್ಲ, ನಿನ್ನ ಎದ್ಯಾಗ ನಾ ಉಳಿ ಹೊಡಿಲಿಲ್ಲಂದ್ರ ಮಾತಂಗ ವಂಶದವನೇ ಅಲ್ಲ ನೆನಪಿಟಗೋ'' ಎಂದು ಪ್ರತಿಜ್ಞೆ ಮಾಡಿದ್ದ. ಆಗ ಗೂಳಿ, ''ನಿನ್ನಿಂದ ಸಾಧ್ಯವಿಲ್ಲ ನಿನ್ನ ಕೈಯಲ್ಲಿ ನಾನು ಸಾಯೋದ ಅದು ಸಾಧ್ಯವಿಲ್ಲದ ಮಾತು. ಅದು ನಿನ್ನ ಕನಸು, ನಿನ್ನ ಕೈಯಾಗ ನನ್ನ ತೊಗಲಿನ ಸಣ್ಣ ಚೂರು ಸಿಗಾಂಗಿಲ್ಲ'' ಎಂದು ಆ ಗೂಳಿ ಪ್ರತಿಜ್ಞೆ ಮಾಡಿತು. ಕಾಲ ಹಾಗೆ ಉರಳಿತು, ನೋವಿನಿಂದ ಅಪ್ಪ ಏಳಲೇಇಲ್ಲ ಹಾಸಗಿ ಹಿಡದಾಂವ ಏಕಾಏಕಿ ಜೇರಾದ, ಸಾಯು ಮುಂದ ನನ್ನ ಕರದು, ''ಎತ್ತಿನ ಎದ್ಯಾಗ ಉಳಿ ಹೊಡಿಬೇಕು ಅಂತ, ನಾ ಗೂಳಿಗುಡಾ ವಾದ ಮಾಡಿನಿ ನೀ ಅದನ್ನ ಮರಿಲಾರ್ದೆ ನನ್ನಿಂದ ಆಗಲಾರದ್ದು ನೀ ಮಾಡಬೇಕು, ಮಾಡ್ಲಿಲ್ಲಂದ್ರ ನಾ ಸೋಲ ಕಂಡಂಗಾಗ್ತದ. ಅದಕ್ಕ ನೀ ಅದನ್ನ ಮಾಡ್ತೀನಿ ಅಂತ ಮಾತಕೊಡು'' ಎಂದು ನನ್ನ ಕಡಿಯಿಂದ ವಚನ ತಗೊಂಡಾನ. ಅಪ್ಪ ಸತ್ತಮ್ಯಾಲ ನಮ್ಮವ್ವ ಇದ್ದ ಹೊಲಮನಿ ಮಾರ ಕೊಂಡ ನನ್ನ ಕರಕೊಂಡು ಬ್ಯಾರೇ ಊರಿಗೆ ಹೋದ್ಳು. ಅಲ್ಲಿ ಅವ್ವನೂ ತೀರಿಹೋದ್ಳು, ಮುಂದ ನಿಮ್ಮವ್ವನು ನನ್ನ ಸಾಥ ಕೊಡಲಿಲ್ಲ. ಈಗ ಇಲ್ಲಿಗಿ ಬಂದ್ವೀ. ನಾವ್ಯಾರು ಅನ್ನೋದು ಡೋಂಬಿ ರಾಜನಿಗಿ ಗೊತ್ತಿಲ್ಲ. ಅಪ್ಪನ ಜಿದ್ದ್ ಗೆಲ್ಲಸಬೇಕಾಗ್ಯಾದ ಅದಕ್ಕಾಗೇ ತೊಗಲ ಕೇಳಿನಿ, ತಿಳಿತಲ್ಲ'' ಎಂದು ಹೇಳಿದ. ''ಐತೆಪ್ಪ! ನಾಳಿಗಿ ಹೋಗಿ ಕೇಳಿ ಇಸಕೊಂಡು ಬರ್ತಿನಿ'' ಎಂದು ಹೇಳಿ ಮಲಗಿದಳು.

ಹೊತ್ತ ಹೊಂಟಿತು. ರಾಜಾ ಆತುರದಲ್ಲಿದ್ದ ಯಾವಾಗ ಮಾತಂಗ ಸುಂದರಿಯನ್ನು ಕಾಣಬೇಕು, ಅವಳನ್ನು ಪಡಿಬೇಕು ಅಂತ ಕಾಯ್ತಿದ್ದ. ಮಾತಂಗ ಸುಂದರಿ ರಾಜಾನ ಅರಮನಿಗೆ ಬಂದ್ಳು. ರಾಜಾ ಆಕಿಗಾಗೇ ಕಾಯ್ದು ಕುಂತಿದ್ದ, ''ಬಾ ಸುಂದರಿ. ನಿಮ್ಮಪ್ಪ ಏನ್ ಕೇಳ್ಯಾನ ನೀ ಏನ್ ಕೇಳಬೇಕಂತಿ ಕೇಳು'', ಎಂದು ಒಂದೇ ಉಸಿರಿನಲ್ಲಿ ಹೇಳಿದ. ಆಗ ಆ ಸುಂದರಿ ''ರಾಜಕುಮಾರ ನಾನು ನಿನ್ನವಳಾಗಬೇಕು ಅಂದ್ರ ನೀ ಕುಂತಿರುವ ರಾಜ ಗದ್ದುಗೆ ಮ್ಯಾಲ ಐತಲ್ಲ ಆ ಗೂಳೆತ್ತಿನ ತೊಗಲು ಕೊಡಬೇಕು'', ಎಂದಾಗ ರಾಜಾ ಯಾವುದು ವಿಚಾರ ಮಾಡ್ದೆ ಹಿಂದು ಮುಂದು ನೋಡ್ದೆ ಒಪ್ಪಿಕೊಂಡ. ಡೋಂಬಿ ರಾಜನ ತಂದೆ ಸಾಯುವಾಗ, ಯುವರಾಜಾಗ ಕರದು, ''ಜೀವಮಾನಪೂರ್ತಿ ನಿನ್ನ ಸಂಪತ್ತು ಹಂಗs ಉಳಿಬೇಕಂದ್ರ, ಸದಾ ನೀ ಹೊಲದ ಒಡೆಯನಾಗಿರ ಬೇಕಂದ್ರ, ನಿನ್ನ ಗದ್ದುಗಿ ಮ್ಯಾಲಿರುವ ಗೂಳೆತ್ತಿನ ಚರ್ಮ ಮಾತಂಗ ವಂಶದವರಿಗೆ ಮಾತ್ರ ಕೊಡಬ್ಯಾಡ'' ಅಂದಿದ್ದಕ್ಕ – ಯಾಕ ಅದರ ಗುಟ್ಟೇನು, ಎಂದು ಯುವರಾಜ ಕೇಳಿದ. ''ಅದು ನಮ್ಮ ಸಂಪತ್ತಿನ ಸಂಕೇತ, ಗೂಳೆತ್ತು ಸಾಯುವಾಗ ನನ್ನನ್ನು ಕರದು ಹಿಂಗ ಹೇಳ್ಯಾದ. ''ನೀನು ನಿನ್ನ ವಂಶದವರು ಸದಾ ಶ್ರೀಮಂತ ನಾಗಿರಬೇಕು. ಭೂಮಿ ಒಡೆಯರಾಗಿರಬೇಕಂದ್ರ ನಾ ಸತ್ತಮ್ಯಾಲ ನನ್ನ ತೊಗಲ ಮಾತಂಗ ವಂಶದವರಿಗಿ


## ಚುಟುಕು

ಗುಡಿ ಮಂದಿರ ಆಗ ಎಲ್ಲವೂ ಚೆನ್ನ
ದುರಾಸೆಯಲಿ ರೈತರ ಭೂಮಿಗೆ
ಹಾಕಿದರು ಕನ್ನ
ಮರೆತರು ರೈತರ ಬೆವರಿನ ಅನ್ನದ ತುತ್ತು
ಸೇರಿಕೊಂಡರು ಜೈಲೆಂಬ ಹಾವಿನ ಹುತ್ತು

**ಸುರೇಶ ಅಂಗಡಿ**
ಮುಖ್ಯಗುರುಗಳು, ತುಂಗಭದ್ರಾ ಪ್ರೌಢಶಾಲೆ
ಹೂವಿನ ಹಡಗಲಿ, ಬಳ್ಳಾರಿ ಜಿಲ್ಲೆ

ಕೊಡಬಾರ್ದು. ಕೊಟ್ಟೆಂದ್ರ ನೀ ದರಿದ್ರನಾಗತಿ ಸಂಪತ್ತೆಲ್ಲ ಕಳಕೊಂಡು ಬಡವನಾಗತಿ'' ಎಂದು ಹೇಳಿ ಭಾಷೆ ತಗೊಂಡಾದ. ಅನ್ನುವ ಮಾತು ಮಗನಿಗೆ ಹೇಳಿದ್ದ, ಆದ್ರ ಅಪ್ಪನ ಆ ಮಾತ ಮಣಕಾಳ ಮಾಡಿದ ಯುವರಾಜ ಕಾಮದ ಗುಂಗಿನಲ್ಲಿ ಭಯ, ನಾಚಿಕೆ ಎರಡೂ ಬಿಟ್ಟು ತೊಗಲು ಕೊಟ್ಟಬಿಟ್ಟ. ಗೂಳೆತ್ತಿನ ತೊಗಲು ತಗೊಂಡು ಹೋಗಿ ಅಪ್ಪಗ ಕೊಟ್ಟು ಹೊಳ್ಳಿ ಹೋಗಿ ಅರಮನೆ ಹೊಸ್ತಿಲ ಮೆಟ್ಲೇರಿರಲಿಲ್ಲ, ಇತ್ತ ಸುಂದರಿಯ ತಂದೆ ಉಳಿಯನ್ನು ಹರಿತಗೊಳಿಸಿ ಗೂಳೆತ್ತಿನ ತೊಗಲು ತನ್ನ ಕೈಗೆ ಬಂದ ಕೂಡ್ಲೇ ವಿಕಾರ ರೂಪದ ಭಾವನೆಯಿಂದ ನನ್ನ ತಂದೆ ಪ್ರತಿಜ್ಞೆಗೆ ಇಂದ ಮೋಕ್ಷ ಸಿಕ್ತು ಎಂದು ಗೂಳೆತ್ತಿನ ತೊಗಲು ಹಾಸಿದ್ದೆ ತಡ ಮೊಳಕಾಲ ಮಂಡಿಯೂರಿ ರೌದ್ರಾವತಾರ ತಾಳಿದಂತವನಾಗಿ ಮನಸ್ಸಿನಲ್ಲಿ ಸೇಡಿನ ಕಿಚ್ಚನ್ನು ಹೊತ್ತಿಸಿಕೊಂಡು ಹರಿತವಾದ ಉಳಿಯಿಂದ ಎದೆಯ ನಡುಭಾಗದಾಗ ಜೋರಾಗಿ ಇರಿದ. ಇರಿತದಿಂದ ನಿರ್ಜೀವವಾಗಿದ್ದ ಆ ತೊಗಲು ಅಂಭಾ! ಅಂಭಾ! ಎಂದು ನೋವಿನಿಂದ ಒದರಿತು, ತೊಗಲಿನಿಂದ ರಕ್ತ ಚಿಮ್ಮಿತು, ಅದರ ಈ ಆಕ್ರಂದನಕ್ಕೆ ರಾಜನ ಅರಮನೆ ಮೂಲೆ ಬಿರಕು ಬಿಟ್ಟಿತು. ಗದ್ದುಗೆ ನೆಲಕ್ಕುರಿಳಿತು. ''ಡೋಂಬಿರಾಜ ಮಾತಿಗೆ ತಪ್ಪಿ ನಡೆದಿದ್ದಾನೆ. ನನ್ನನ್ನು ಯಾರಿಗೆ ಒಪ್ಪಿಸಬಾರದು ಎಂದು ವಚನ ಪಡೆದಿದ್ದನೋ, ಅವರಿಗೇ ಒಪ್ಪಿದಾನೆ, ನನ್ನ ಮಾತಿಗೆ ತಪ್ಪಿ ನಡದಿದ್ದಕ್ಕಾಗಿ ನಿನ್ನ ಸಿರಿ ಸಂಪತ್ತು ಹಾಳಾಗಲಿ, ನಿನ್ನಲ್ಲಿರುವ ಭೂಮಿ ಬೇರೆಯವರ ಪಾಲಾಗಲಿ'' ಎಂದು ಗೂಳಿ ಶ್ಯಾಪ ನೀಡಿತಂತೆ. ''ಅದಕ್ಕಾಗಿ ಕೆಳಗಿನ ಕೇರಿಯವರು ಹೊಲ ಮನಿ ಕಳಕೊಂಡು ಕೂಲಿ ಮಾಡುವಂಗ ಆಗ್ಯಾದಂತ'', ಹಿಂಗ ಚಲುವಜ್ಜ ಹೇಳ್ಯಾನ, ನೋಡ ಅಜ್ಜಿ'' ಅಂದಾಗ, ''ಹೌದಪ್ಪ ಅನಾದಿ ಕಾಲದಿಂದಲೂ ಈ ವೈರತ್ವ ಮ್ಯಾಲಿನಕೇರಿ ನಮ್ಮ ಕೇರಿ ನಡುವ ನಡಕೊಂಡ ಬಂದದ. ಆದರ ಅವು ಈಗ ನಮಗ ಅನ್ನಾ ಹಾಕಂಗಿಲ್ಲ, ತಮಾ, ಅದಕ್ಕ ಅವೆಲ್ಲ ನೀ ತೆಲ್ಯಾಗ ಹಾಕ್ಕೊಬ್ಯಾಡ. ನಾ ! ನೀ ! ಅಂದೇ ನಮ್ಮ ಸಣ್ಣ ಸಣ್ಣ ಜಾತಿಯವರು ಹಾಳಾಗ್ಯಾರ, ಇವೆಲ್ಲ ಬ್ಯಾರೆಯವರು ಸುಳ್ಳು ಹೇಳಿ ಇವ ದೊಡ್ಡುಮಾಡಿ ನಮಗ ಜಗಳಾ ಹಚ್ಚಿ ಮೋಜಾ ನೋಡ್ತಾಕ ಹತ್ಯಾರ, ಅವ್ವೆಲ್ಲ ತೆಲ್ಯಾಗ ಹಾಕೋಬ್ಯಾಡ ಮಲಕೋ'' ಎಂದು ಗಂಗಜ್ಜ ಮೊಮ್ಮಗನಿಗೆ ಬುದ್ಧಿವಾದ ಹೇಳಿದಳು.

ಅಜ್ಜಿಯ ಬುದ್ಧಿವಾದ ಕೇಳಿದ ಮೊಮ್ಮಗ ಹೌದಲ್ಲ ನಾವೆಲ್ಲ ಜಾಂಭವ ಸಂಘ, ಅಂಥಾ ಇಂಥ ಸಂಘ ಅಂತ್ಹೇಳಿ ಸುಮ್ಮ ಸುಮ್ಮನೆ ಹಾಳಾಗಾಕ ಹತ್ತಿವೆಲ್ಲಾ, ಮೊದಲ ಚಲುವಜ್ಜ, ಮಾದಜ್ಜ ಅಂದ್ರ ದೇಹ ಎರಡು ಜೀವ ಒಂದಿದ್ದಾಂಗ ಇದ್ರು. ಇವತ್ತ ನೋಡದ್ರ ನಾವೇ ಬೇರೆ ಅವ್ರೇ ಬೇರೆ ಆಗಿದೇವು, ಊರವರು ಅವರಿಗೂ ಮುಟ್ಸಕೊಳ್ಳಾಂಗಿಲ್ಲ, ನಮಗೂ ಮುಟ್ಸಕೊಳ್ಳಾಂಗಿಲ್ಲ, ಮ್ಯಾಲಿನವರ ಕಣ್ಣಾಗ ನಾವು ಅಸ್ಪಶ್ಯರೇ ಅವ್ರು ಅಸ್ಪೃಶ್ಯರೇ ಎಂದು ವಿಚಾರ ಮಾಡ್ತಾ ಮಾಡ್ತಾ ನಿದ್ರಾದೇವಿ ತೆಕ್ಕೆಗೆ ಜಾರಿದ. ''ಅನಾದಿಕಾಲದಿಂದಲೂ ಬೇರೆಯವರ ಮಾತ ಕೇಳಿ ಹಾಳಾಗಿದ್ದಲ್ದೆ, ಅವ್ರ ಆಳಾಗಿ ದುಡದು ದುಡದು ಸಾಕಾಗ್ಯಾದ, ನಮಗೂ ಸ್ವತಂತ್ರವಾದ ಬದುಕುದ, ನಾವು ಇತರರಂತೆ ಬಾಳಬೇಕಾಗ್ಯಾದ ಅದಕ್ಕ ನೀವೆಲ್ಲ ಈ ಜಾತಿ ರಾಜಕೀಯ ತೆಲ್ಯಾಗ ಹಾಕ್ಕೊಂಡು ಎಡ ಹೆಚ್ಚು ಬಲ ಕಮ್ಮಿ! ಅಂತ ಹೊಡದಾಡೋದ್ರಿಂದ ಏನೂ ಸಾಧಿಸ್ಲಿಕ್ ಆಗಾಂಗಿಲ್ಲ. ಅದಕ್ಕಾಗಿ ನಾವು ಏನೂ ಇಲ್ದೆ ಹಾಳಾಗಿವಿ ಕುಲಕ್ ಕೋಡ್ಲಿಕಾಂವ ಮೂಲ ಅಂದಂಗಾಗಿ ನಮ್ಮೌರನ್ನ ನಾವೇ ಹಾಳ ಮಾಡಾಕತ್ತೇವಿ. ಅದನ್ನೆಲ್ಲ ನಾವು ಬಿಡಬೇಕು ನಮ್ಮನ್ನ ನಾವು ಅರ್ಥಾ ಮಾಡಕೋಬೇಕು. ಬಡವರಾಗಿ ಹುಟ್ಟೋದು ಹುಟ್ಟೇವಿ, ಸಾಯುವಾಗ ಬಡವರಾಗಿ ಸಾಯಬಾರ್ದು. ಗುಲಾಮರಾಗಿ ಹುಟ್ಟಿ ಗುಲಾಮರಾಗಿ ಸಾಯುವುದಂತೂ ಅಪರಾಧ. ಅದಕ್ಕ ಎಲ್ಲರ ಮಕ್ಕಳೂ ನನ್ನಂಗ ಓದಿ ಸನ್ಮಾನಕ್ ಪಾತ್ರರಾಗಬೇಕು'' ಎಂದು ಮಾದಜ್ಜನ ಮೊಮ್ಮಗ ಭಾಷಣ ಮುಗಿಸಿ ವೇದಿಕೆ ಮ್ಯಾಲಿಂದ ಇಳಿತಿದ್ದ ಅದು ಅವನಿಗಿ ಕನಸು ಅಂತ ಗೊತ್ತಿಲ್ಲ, ನಿದ್ದಿಗಣ್ಣಾಗ ಇಳದಂಗಾಗಿ ಮಲಗಿದ್ದಾಂವ ಕಟ್ಟಿ ಮ್ಯಾಲಿಂದ ದಪ್ಪಂತ ಬಿದ್ದ. ಬಿದ್ದು ಕೌದಿ ಚಿಂದಿ ಯೊಳಗಿಂದ ಗಡಿಬಿಡಿಲೆದ್ದು ಕೂತ, ಮೊಮ್ಮಗ ದಪ್ಪಂತ ಬಿದ್ದ ಸದ್ದು ಕೇಳಿ ಏನೋ ಬಿದ್ದೆಲ್ಲ ಸಪನ ಬಿದ್ದಿರ್ತೇನೋ ? ಎಂದಳು. ''ಹೌದಜ್ಜಿ, ನಾ ದೊಡ್ಡ ಸಾಹೇಬ ಆಗಿದ್ದೆ. ಅದೊಂದು ದೊಡ್ಡ ಸಭೆ ಸಾವಿರಾರು ಜನರು ನೆರದಂಗಾಗಿ ನಾ ಭಾಷಣ ಮಾಡದಂಗಾಗಿತ್ತು. ನನಗೆ ಸನ್ಮಾನ ಮಾಡಿತಿದ್ರು ಅದು ನೀನು ಅಜ್ಜ ನೋಡಿ, ಚಪ್ಪಾಳೆ ತಟ್ಟತಿದ್ರಿ, ಅದು ಹಬ್ಬ ಇದ್ದಾಂಗಿತ್ತು. ನೀ ಹೇಳಿದ ಮಾತ ನಾ ಹೇಳಿದಂಗಾಗಿತ್ತು ನೋಡಜ್ಜಿ'' ಎಂದ. ಅದಕ, ''ಅಪಾ ! ನೀ ಓದಿ ದೊಡ್ಡ ಸಾಹೇಬ ಆಗು. ಆದ ನಿನ್ನ ಬಾಳಿಗಿ ಬೆಳಕ ನೀಡತೈತಿ. ಇದೆಲ್ಲ ಇದ್ದೇ ಇರ್ತದ. ಇಂದಲ್ಲ ನಾಳೆ ಕಡು ಆಗ್ತದ. ಈ ಒಣ್ಯಾನ ಜಂಜಾಟ ಬಿಟ್ಟುಬಿಡು. ತಮ್ಮಾ ! ನಾಳಿಗಿ ನೀ ಹೊಂಟಬಿಡು'' ಎಂದು ಗಂಗಜ್ಜ ಎದ್ದು, ''ಕೋಳಿಕೂಗು ಹೊತ್ತಾಗ್ಯೆತಿ ನಾ ನಿನಗ ರೊಟ್ಟಿ ಬುತ್ತಿ ಕಟ್ಟೊ ತಯಾರಿ ಮಾಡ್ತಿನಿ. ನೀ ಇನ್ನೊಂದಿಟು ನಿದ್ದಿ ಮಾಡು, ನಾ ಎಬ್ಬಸ್ತಿನಿ'' ಎಂದು ಕಾಯಕದಲ್ಲಿ ತಲ್ಲೀನಳಾದಳು.

**ಡಾ|| ಎಚ್. ಟಿ. ಪೋತೆ**
ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ
ವಿಶ್ವವಿದ್ಯಾಲಯ, ಗುಲಬರ್ಗಾ





# ಬಾಯಿ ಮಾತು

'ಬಾಯಿ ಮುಚ್ಚು' ಎಂಬ ಬೈಗುಳದ ಮಾತಿದೆ. ಬಾಯಿ ಮುಚ್ಚಿಕೊಂಡಿರುವುದು ಅಷ್ಟೊಂದು ಸುಲಭವೆ? ಬಾಯಿ ಮುಚ್ಚಿಸುವ ಮಾತಂತೂ ಮರಳಿನಲ್ಲಿ ಎಣ್ಣೆ ತೆಗೆಯುವಷ್ಟೇ ಅಸಾಧ್ಯವೆನ್ನಿ. ನಾನು ಹೀಗೆನ್ನಲು ಹಲವಾರು ದೃಷ್ಟಾಂತಗಳು ನನ್ನ ಬೆನ್ನಿಗಿವೆ. ಎರಡೂವರೆ ಅಥವಾ ಮೂರು ದಶಕಗಳ ಹಿಂದಕ್ಕೆ ಹೋಗೋಣ. ರೈಲು, ಬಸ್ಸು, ಗ್ರಂಥಾಲಯ, ಕಛೇರಿ, ಸಿನಿಮಾ ಅಥವಾ ನಾಟಕ ಮಂದಿರ, ಸರ್ಕಸ್... ಎಲ್ಲೆಂದರಲ್ಲಿ ಬೀಡಿ, ಸಿಗರೇಟು, ಚುಟ್ಟಾ ಸೇದುವವರು ಇರುತ್ತಿರಲಿಲ್ಲವೆ ಹೇಳಿ. ಅಬ್ಬಬ್ಬ! ಅದೇನೆಲ್ಲ ಅಂತಹವರ ಸಮರ್ಥನೆಗಳು ತಾವು ಗೈದ ಘನಕಾರ್ಯಕ್ಕೆ!! ಮೈಸೂರಿನಿಂದ ಬೆಂಗಳೂರಿಗೆ ಬಸ್ಸಿನಲ್ಲಿ ಪ್ರಯಾಣಿಸುತ್ತಿದ್ದೆ. ಬಸ್ಸು ಮಧ್ಯಾಹ್ನದ ವೇಳೆಗೆ ಮದ್ದೂರು ತಲುಪಿತ್ತು. ಆ ತನಕ ಒಂದಿಬ್ಬರೇನು, ಡಜನ್ ಮಂದಿ ಧೂಮಪಾನ ಮಾಡಿದ್ದರು. ಅಲ್ಲಿಂದ ಮುಂದೆ ಪಯಣದ ಆಯಾಸವೂ ಹೆಚ್ಚಾಗಿ ಧೂಮಪಾನಿಗಳು ಇನ್ನಷ್ಟು ಕ್ರಿಯಾಶೀಲರಾದರು. ಉಳಿದವರು ವಾದಕ್ಕಿಳಿಯತೊಡಗಿದರು. ಅವರಿಗೆಲ್ಲ ಉಫ್... ಉಫ್ ಅಂತ ಹೊಗೆ ಬಿಡುತ್ತಲೇ ಉತ್ತರ ನೀಡುತ್ತಿದ್ದರು. ರಸಿಕರು! ಒಂದಷ್ಟು ಸ್ಯಾಂಪಲ್ಲುಗಳು ನಿಮ್ಮ ಅವಗಾಹನೆಗೆ.

''ನಾವು ಹೊಗೆ ಕುಡೀತಿಲ್ಲ, ಬಿಡ್ತಿದ್ದೀವಿ.''

''ನೀವು ಬೇಕಾದ್ರೆ ಟ್ಯಾಕ್ಸೀಲಿ ಹೋಗಿ.''

''ಹತ್ತು ರೂಪಾಯಿ ಕೊಟ್ಟು ಟಿಕೇಟು ಕೊಂಡಿದೀನಿ.''

''ಮುಂದ್ಗಡೆ ಸೀಟದೆ ಹೋಗಿ.''

''ನಿಮಗೆಷ್ಟು ಹಕ್ಕಿದೆಯೊ ನಂಗೂ ಅಷ್ಟೇ ಇದೆ.''

ನಾನು ಒಬ್ಬಾತನಿಗೆ ನೀನು ''ಧೂಮಪಾನ ನಿಷೇಧಿಸಿದೆ'' ಅನ್ನುವ ಬೋರ್ಡ್ ನೋಡ್ಲಿಲ್ಲವೇನಪ್ಪ, ಅಂದೆ. ಆ ಮಾರಾಯ ಖಂಡತುಂಡವಾಗಿ, ''ಹಾಕ್ಕೊಂಡು ಕೂರ್ಲಿ ಬಿಡಿ'', ಎಂದಿದ್ದ. ಅಂತೂ ಇಂದು ಧೂಮಪಾನವನ್ನು ಸಾರ್ವಜನಿಕವಾಗಿ ಜನರೇ ತಿರಸ್ಕರಿಸಿದ್ದಾರೆ. ಸಣ್ಣ ಹೊಗೆ ಏಳುವ ಮಾತಿರಲಿ, ಯಾರಾದರೂ ತುಟಿಗೆ ಬೀಡಿ, ಸಿಗರೇಟು ತಗುಲಿಸುವುದೆ ತಡ ಹರಿಹಾಯುತ್ತಾರೆ. ಕಾರಣ, ಧೂಮಪಾನದ ಮಾರಕ ಪರಿಣಾಮ ಜನಮಾನಸಕ್ಕೆ ಅರಿವಾಗಿದೆ. ಕಾನೂನು, ಕಟ್ಟಳೆಗಿಂತ ಜನರ ಅರಿವು ಕಾರ್ಯೋನ್ಮುಖವಾಗಬೇಕು ಎನ್ನಲು ಇದಕ್ಕಿಂತ ಪುರಾವೆ ಬೇಕೆ?

ಸದ್ಯ, ಬಾಯಿ ತೆಪ್ಪಗಾಯಿತು ಅಂತ ನಿಟ್ಟುಸಿರು ಬಿಡುತ್ತಿದ್ದಂತೆಯೆ ಇನ್ನೊಂದು ತಂಟೆಗೆ ಅದು ಶುರುವಿಟ್ಟುಕೊಂಡಿತು. ಅದುವೇ ಮೊಬೈಲು! ಮೊಬೈಲು ಜನಜೀವನವನ್ನು ಸುಧಾರಿಸಿದೆ ಒಪ್ಪೋಣ. ಆದರೆ ಅತಿಯಾದರೆ ಯಾವುದೂ ಕೇಡೇ. ಹಿತಮಿತವಾಗಿ ಬಳಸಲಿ. ಯಾರೂ ಬೇಡ ಅನ್ನರು. ಆದರೆ ಏರುದನಿಯಲ್ಲಿ ಹಲೋ... ಹಲೋ... ಎಲ್ಲಿದ್ದೀ? ನಾನಿಲ್ಲಿದೀನಿ, ಬಂದೆ, ಬರುತ್ತಿರುವೆ... ಹೀಗೆ ಅಬ್ಬರಗಳು. ಒಮ್ಮೊಮ್ಮೆಯೇನು, ಹಲವೊಮ್ಮೆ ಒಳ ಬರುವ ಕರೆಗಳ ಧ್ವನಿಯೇ ಜೋರು! ಮಾತು, ಮಾತು... ಮಾತು. ನಾಳೆ ಆಪ್ತರು, ನೆಂಟರು, ಪ್ರಿಯರು ಸಿಗುವುದೇ ಇಲ್ಲ ಎನ್ನುವಂತೆ. ಸಾಲದ್ದಕ್ಕೆ ರಿಂಗ್‌ಟೋನುಗಳು, ಸಂಭಾಷಣೆಗಳು ಬೇರೆ. ಬಸ್ಸಿನಲ್ಲಿರುವವರಿಗೆಲ್ಲ ಕೇಳಿಸುವಂತೆ ''ಇಡ್ಲಿಗೆ ಜಾಸ್ತಿ ಉದ್ದಿನಬೇಳೆ ಬೇಡ, ಹಿಟ್ಟಟ್ಟಾದೀತು ಪಾತಿ'', ಎಂದು ನಿನ್ನೆ ಸಂಜೆ ಅತ್ತೆಯಮ್ಮ ಸೊಸೆಗೆ ಮೊಬೈಲಾಯಿಸುತ್ತಿದ್ದರು. ನನ್ನ ಕೋ ಬ್ರದರ್ ನಾಣಿ ಮೊಬೈಲ್ ಹಾವಳಿಯಿಂದ ಪಾರಾಗಲು ಒಂದು ಉಪಾಯ ಹುಡುಕಿದ್ದಾನೆ. ಸಾರ್ವಜನಿಕ ಸ್ಥಳದಲ್ಲಿ ಯಾರಾದರೂ ಏರುಧ್ವನಿಯಲ್ಲಿ ಮೊಬೈಲು ಕರೆ ಮಾಡುತ್ತಿದ್ದರೆ ಡಬ್... ಡಬ್ ಅಂತ ಸದ್ದು ಮಾಡುವುದು. ಇದಕ್ಕಾಗಿ ತಗಡಿನ ಡಬ್ಬದ ಬಳಕೆ. ಹೋದಲ್ಲೆಲ್ಲ ಅದನ್ನು ಒಯ್ಯಬೇಕಂತೆ. ಎಷ್ಟರಮಟ್ಟಿಗೆ ನಾಣಿಯ ಕನಸು ನನಸಾದೀತೊ ಕಾಣೆ. ಇವನು ಡಬ್ಬಕ್ಕೆ ಬಡಿದು, ಆ ಬಡಿತದ ಫಲವಾಗಿಯೆ ಇವನೂ ಮೊಬೈಲ್ ಒಡೆಯರಿಂದ ಬಡಿಸಿಕೊಂಡರೆ ಗತಿಯೇನು? ಅಂದಹಾಗೆ ಮೊಬೈಲಿನಿಂದ ತಕ್ಕಮಟ್ಟಿಗೆ ಇದ್ದಲ್ಲೇ ಇರುವುದರಿಂದ ಅಲ್ಲಿಂದಲ್ಲಿಂದಲೇ ಸಂಭಾಷಿಸುವುದರ ಕಾರಣ ಟ್ರ್ಯಾಫಿಕ್ ಜ್ಯಾಂ ಕ್ಷೀಣಿಸುತ್ತದೇನೋ ಎಂಬ ಆಸೆಯಿತ್ತು. ಇಲ್ಲ... ಇಲ್ಲ ಅದು ಹುಸಿಯಾಗಿರುವುದನ್ನು ಕಾಣುತ್ತಲಿ ಇದ್ದೇವೆ. ಬದಲಿಗೆ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ದೌಡೋ ದೌಡು! ವಾಹನಗಳೇನು, ಮಂದಿಯೇನು!

ಮೊಬೈಲ್ ಪಕ್ಕಕ್ಕಿಡೋಣ. ಅಕ್ಕಪಕ್ಕದವರನ್ನು ಗೋಳಿನಲ್ಲಿಡಲು ಏರುಧ್ವನಿಯಲ್ಲಿ ಉಭಯಕುಶಲೋಪರಿ ನಡೆಸುವ ಮಹಾಶಯರಿಗೇನು ಕಡಿಮೆ ಹೇಳಿ. ಮಾತು ಮನೆ ಕೆಡಿಸೀತು ಮಾತ್ರವಲ್ಲ, ಇಡೀ ಪರಿಸರವನ್ನೇ ಹಾಳುಮಾಡೀತು. ನಿಶ್ಶಬ್ದ, ನೀರವತೆಯಲ್ಲಿ ಅದ್ಭುತ ಶಕ್ತಿಯಿದೆ. ಮಹತ್ ಚಿಂತನೆಗಳು ಮೂಡುವುದು ಗೌಜು, ಗದ್ದಲದಲ್ಲಿ ಅಲ್ಲ, ಪ್ರಶಾಂತ ವಾತಾವರಣದಲ್ಲಿ. ಮಾತನಾಡಬಾರದೆಂದಲ್ಲ, ಇತರರಿಗೆ ಉಪದ್ರವವಾಗದಂತೆ ಅದನ್ನು ಸಾಧಿಸಬಹುದಲ್ಲವೆ? ಮರೆತಿದ್ದೆ, ಬಾಯಿ ಪರರಿಗೆ ತೊಂದರೆ, ಮುಜುಗರವನ್ನುಂಟುಮಾಡಬಹುದಾದ ಮತ್ತೊಂದು ಅವತಾರವಿದೆ. ಅದೇ ಅಗಿಯುವ ಚಟ. ಎಲೆ ಅಡಿಕೆ ಇರಬಹುದು, ಗುಟ್ಕಾ ಇರಬಹುದು, ಚ್ಯೂಯಿಂಗಂ ಇರಬಹುದು. ಆಸುಪಾಸಿನವರಿಗೆ ಈ 'ಜೀವಂತ ಮಿಕ್ಸರ್'ಗಳು ಖಂಡಿತವಾಗಿ ನಾಸಿಕವನ್ನು ಕಿತ್ತೊಗೆದು ಬಿಡೋಣವೆ ಎನ್ನವಷ್ಟರಮಟ್ಟಿಗೆ ಕಿರಿಕಿರಿ ಉಂಟುಮಾಡುತ್ತವೆ. ಒಂದು ರೀತಿಯಲ್ಲಿ ಇವು 'ರಾಸಾಯನಿಕ ಕಾರ್ಖಾನೆ'ಗಳೂ ಹೌದು. ಬಸ್ಸು, ರೈಲಿನಲ್ಲಿ ಇವುಗಳೊಡ್ಡಬಹುದಾದ ಆತಂಕ ಯಾವ ವೈರಿಗೂ ಬೇಡ. ಹಿಂಬದಿ ಸೀಟಿನವರಿಗೊ 'ಪಿಚಕಾರಿ' ಸವಾಲೋ ಸವಾಲು. ಬಾಯ್ತುಂಬ ತಾಂಬೂಲ ಹಾಕಿಕೊಂಡು ಬರುವವರು ಯಾವುದೇ ಕ್ಷಣದಲ್ಲಾದರೂ 'ಸ್ಫೋಟಿಸ'ಬಹುದಲ್ಲವೆ?!


**ಬಿಂಡಿಗನವಿಲೆ ಭಗವಾನ್**

೩೩ ಜಿ, ೯ನೇ ಮುಖ್ಯರಸ್ತೆ, ಬನಶಂಕರಿ ೧ನೇ ಹಂತ, ಎರಡನೇ ಬ್ಲಾಕ್, ಬೆಂಗಳೂರು - ೫೬೦ ೦೫೦



# ಮತೀಯ ರಾಷ್ಟ್ರೀಯವಾದಿ ನೆಲೆ ಹಾಗೂ ಕುವೆಂಪು ಅವರ 'ಹಂಪೆಯ ಭೀಮ'


ಗತಕಾಲದ ವೈಭವೀಕರಣ, ಮಧ್ಯಕಾಲೀನ ಚರಿತ್ರೆಯ ವಿಕೃತೀಕರಣ, ಮುಸ್ಲಿಮ್ ದ್ವೇಷ, ರಾಷ್ಟ್ರೀಯ ಹೋರಾಟಗಳಲ್ಲಿ ಹಿಂದೂ ಆಕರಗಳ ಬಳಕೆಯ ಪ್ರಭಾವ ಮುಂತಾದವುಗಳನ್ನು ಮತೀಯ ರಾಷ್ಟ್ರೀಯವಾದಿ ನೆಲೆಯ ಕಾವ್ಯದ ಮುಖ್ಯ ಲಕ್ಷಣಗಳು ಎನ್ನುವುದಾದರೆ, ಅವು ಕನ್ನಡದ ನವೋದಯ ಕಾಲದ ಬಹುತೇಕ ಕವಿಗಳ ಕಾವ್ಯದಲ್ಲಿ ಕಂಡುಬರುತ್ತವೆ. ಆದರೆ ಈ ನಿಲುವುಗಳನ್ನು 'ಕೋಮುವಾದಿ' ಎಂದು ಕರೆಯಲಾಗದು. ಯಾಕೆಂದರೆ ಇವು ವಸಾಹತುಶಾಹಿ ಕಾಲಘಟ್ಟದ ಸಂಕೀರ್ಣ ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಸಂದರ್ಭದ ಸಹಜ ಉತ್ಪನ್ನಗಳು. ರಾಷ್ಟ್ರೀಯ ಹೋರಾಟದ ಅತಿ ಭಾವುಕತೆ, ಚರಿತ್ರೆಯ ಅಪಕಲ್ಪನೆ, ಮಾಧ್ಯಮಗಳ ತಪ್ಪು ಮಾಹಿತಿ, ಮುಸ್ಲಿಮ್ ಮೂಲಭೂತವಾದದ ಪರಿಣಾಮ ಮೊದಲಾದವುಗಳಿಂದ ಪ್ರೇರಿತವಾದ ಮನಸ್ಥಿತಿಯಲ್ಲಿ ಇಂಥ ಕವಿತೆಗಳು ಹುಟ್ಟಿವೆ. ಇದರಲ್ಲಿ ಕವಿಯ ಪಾಲೂ ಇರುವುದನ್ನು ಮರೆಯಲಾಗದು.

ಈ ಹಿನ್ನೆಲೆಯಲ್ಲಿ ಕುವೆಂಪು ಅವರ 'ಹಂಪೆಯ ಭೀಮ' ಕವಿತೆಯನ್ನು ಅವರ ಮತೀಯ ರಾಷ್ಟ್ರೀಯವಾದಿ ಲಕ್ಷಣದ ಹಲವಾರು ಕವಿತೆಗಳ ಅಂತರ್ ಸಂಬಂಧದಲ್ಲಿ ವಿಶ್ಲೇಷಿಸಲಾಗಿದೆ. ಕುವೆಂಪು ಅವರಂಥ ಅತ್ಯಂತ ವಿಚಾರಶೀಲ-ಜಾಗೃತ-ಶೂದ್ರ ಪ್ರಜ್ಞೆಯ ಕವಿಯ ಕಾವ್ಯದಲ್ಲೂ ಈ ಚಿಂತನೆ ನುಸುಳುವುದಾದರೆ ಆ ಸಂದರ್ಭ ಮತ್ತು ಕಾಲಘಟ್ಟಗಳನ್ನು ನೆನೆಯಬೇಕಾಗುತ್ತದೆ.



ಡಾ|| ಎಂ. ಡಿ. ಒಕ್ಕುಂದ


ರಾಷ್ಟ್ರ ಮತ್ತು ರಾಷ್ಟ್ರೀಯತೆಗಳು ಆಧುನಿಕ ಬಂಡವಾಳಶಾಹಿಯ ಪರಿಕಲ್ಪನೆಗಳಾಗಿದ್ದು ಅವುಗಳೊಂದಿಗೆ ಭಾರತದಲ್ಲಿ ಮತೀಯವಾದವೂ ಮೈದಾಳಿತು. ಬೆನೆಟಿಕ್ ಆ್ಯಂಡರ್ಸನ್ ಹೇಳುವಂತೆ 'ರಾಷ್ಟ್ರವೆಂದರೆ ಒಂದು ಕಲ್ಪಿತ ರಾಜಕೀಯ ಸಮುದಾಯ. ಆಂತರಿಕವಾಗಿ ಮಿತವಾದುದೆಂದೂ ಆದರೂ ಪರಮಾಧಿಕಾರವುಳ್ಳದ್ದೆಂದೂ ಕಲ್ಪಿತವಾದ ಸಮುದಾಯ.' ಕಲ್ಪಿತವೆಂದರೆ ಒಂದು ಭೂಪ್ರದೇಶದ ಒಟ್ಟು ಜನಸಮುದಾಯದ ಕಲ್ಪನೆ ಎಂದಲ್ಲ, ಆ ಪ್ರದೇಶವನ್ನು ಸಮುದಾಯಗಳನ್ನು ನಿಯಂತ್ರಿಸಲು ಆಧುನಿಕ ಬಂಡವಾಳಶಾಹಿ ವ್ಯವಸ್ಥೆಯ ಪಟ್ಟಭದ್ರರು ಕಲ್ಪಿಸಿ ಪಸರಿಸಿದ ಹಾಗೂ ಹೇರಿದ ಕಲ್ಪನೆಯಾಗಿದೆ. ಇದು ಆಧುನಿಕ ರಾಷ್ಟ್ರ ಪ್ರಭುತ್ವದ ಹೇರಿಕೆಯ ಭಾಗವಾಗಿದೆ. ''ಒಂದು ಸಾಂಸ್ಕೃತಿಕ ಪ್ರದೇಶ ಅಥವಾ ಭೌಗೋಲಿಕ ಪ್ರದೇಶ ತನ್ನನ್ನು ತಾನು ಸಂಘಟಿಸಿಕೊಳ್ಳುವ ಪ್ರಯತ್ನದಲ್ಲಿ ತಾನು ವಾಸಿಸುವ ನೆಲವನ್ನು ಪವಿತ್ರವೆಂದು ಪರಿಕಲ್ಪಿಸಿಕೊಳ್ಳಲು ಪ್ರಾರಂಭಿಸುತ್ತದೆ. ಅದನ್ನು ರಾಷ್ಟ್ರವೆಂದು ಅಮೂರ್ತೀಕರಿಸಿ ಆರಾಧಿಸ ತೊಡಗುತ್ತದೆ.'' ಚಲನಶೀಲ ಗಡಿಗಳು ಹಾಗೂ ಅಧಿಕಾರದ ವಿಕೇಂದ್ರೀಕರಣಗಳಿಂದ ಭಾಷೆ, ಜನಾಂಗ, ಧರ್ಮ, ಸಂಸ್ಕೃತಿಗಳ ವೈವಿಧ್ಯತೆ ಮತ್ತು ಸಂಕರಶೀಲತೆಗಳಿಂದ ಕೂಡಿದ್ದ ಆಧುನಿಕ ಪೂರ್ವ ರಾಷ್ಟ್ರ ವ್ಯವಸ್ಥೆಯು ಈ ಬಗೆಯ ಮಣ್ಣಿನ ಪವಿತ್ರೀಕರಣಕ್ಕೊಳಗಾದ ಸಂದರ್ಭದಲ್ಲಿ ಭಾಷೆ, ಮತ, ಜನಾಂಗ, ಜಾತಿ ಮುಂತಾದವುಗಳ ಆಧಾರದಲ್ಲಿ ಹಲವಾರು ಉಪಕಲ್ಪಿತ ಕುಲಗಳು ಹುಟ್ಟತೊಡಗುತ್ತವೆ. ರಾಷ್ಟ್ರ ಪ್ರಭುತ್ವದಲ್ಲಿ ತಮ್ಮ ಅಸ್ತಿತ್ವ ಮತ್ತು ಪಾಲುದಾರಿಕೆಗಾಗಿ ಸಂಘರ್ಷಕ್ಕೆ ತೊಡಗುತ್ತವೆ. ''ಪ್ರತಿಯೊಂದು ರಾಷ್ಟ್ರವೂ ಸುಸ್ಪಷ್ಟ ಗಡಿಗಳಿಂದ ರಚಿತವಾಗಿರಬೇಕು. ಅಂತಹ ಪ್ರತಿಯೊಂದು ಭೂಭಾಗದಲ್ಲಿಯೂ ಸುಸ್ಪಷ್ಟವಾದ ಏಕರೂಪಿಯಾದ ರಾಷ್ಟ್ರೀಯತೆಯ ಭಾವವನ್ನು ಹೊಂದಿರುವಂಥ ಜನಗಳೇ ವಾಸವಿರಬೇಕು'' ಎಂಬುದು ಅದರ ಆದರ್ಶವಾಸ್ತವದ ಕಲ್ಪನೆಯಾಗಿದೆ. ಸಾವಿರಾರು ವರುಷಗಳಿಂದ ಹಲವಾರು ಜನಾಂಗ, ಧರ್ಮ, ಸಂಸ್ಕೃತಿಗಳ ಸಂಕರರೂಪಿಯಾಗಿ ಬೆಳೆದ ಭಾರತೀಯ ಪರಂಪರೆಯಲ್ಲಿ ಅತೀ ಪ್ರಾಚೀನಕಾಲದಿಂದ ಈ ಭೌಗೋಲಿಕತೆಯ ಜೊತೆಗೆ ಸಂಬಂಧ ಹೊಂದಿದ ಮತ-ಪಂಥ-ಜನಾಂಗಗಳು ಪ್ರಾಚೀನತೆಯನ್ನು ವೈಭವೀಕರಿಸುತ್ತ ನಂತರದ ಕಾಲದಲ್ಲಿ ಸಂಪರ್ಕ ಪಡೆದ ಮತೀಯರನ್ನು ದೂರೀಕರಿಸುವ ಚಿಂತನೆಗಳು ರೂಪತಾಳಿದವು. ಈ ಚಿಂತನೆಗಳ ಹಿಂದೆ ಹಳೆಯ ರಾಷ್ಟ್ರ ವ್ಯವಸ್ಥೆಯ ಪ್ರಬಲ ವರ್ಗಗಳು ಹೊಸ ರಾಷ್ಟ್ರ ವ್ಯವಸ್ಥೆಯಲ್ಲಿಯೂ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಳ್ಳುವ ತಂತ್ರಗಾರಿಕೆ ಕಂಡುಬಂದಿತು. ಆಧುನಿಕ ರಾಷ್ಟ್ರದ ಹೆಗ್ಗುರುತಾದ ನಕಾಶೆಗಳು, ''ಲೋಕವನ್ನು ಭಾಗಭಾಗವಾಗಿ ಕತ್ತರಿಸಿದಷ್ಟೇ ಸಹಜವಾಗಿ ಭವ-ಭಾವ ಲೋಕಗಳನ್ನು ಕತ್ತರಿಸಬಹುದೆಂದು ತಿಳಿದುಕೊಂಡಿರುತ್ತವೆ. ಪ್ರತ್ಯೇಕಿಸಲಾರದಷ್ಟು ಜೊತೆಯಾಗಿ ಪರಸ್ಪರ ಜಗಳವಾಡಿಕೊಂಡು ಅನ್ಯೋನ್ಯವಾಗಿ ಕೂಡಿ ಬಾಳಿಕೊಂಡಿರುವ ಜನಸಮುದಾಯಗಳ ಸಸ್ಯಗಳು, ನದಿಗಳು, ಗಾಳಿ, ನೀರು, ನೆಲ ಇತ್ಯಾದಿಗಳನ್ನು ಅವು ನಿಖರವಾಗಿಯೂ ನಿರ್ಣಾಯಕವಾಗಿಯೂ ಬೇರ್ಪಡಿಸಿ ತೋರಿಸಿ ತಿಳಿಸುತ್ತವೆ.'' ಭಾರತದಲ್ಲಿ ಆಧುನಿಕ ರಾಷ್ಟ್ರ ವ್ಯವಸ್ಥೆ ಮೊದಲು ಹಿಂದೂ-ಮುಸ್ಲಿಮ್ ಸಮುದಾಯಗಳನ್ನು ಮತೀಯ ಆಧಾರದ ಮೇಲೆ ಕತ್ತರಿಸಿ ಹಾಕಿತು.

ವಸಾಹತುಶಾಹಿ ಕಾಲಘಟ್ಟದಲ್ಲಿ ಮತೀಯ ರಾಷ್ಟ್ರೀಯವಾದವು ಹಲವಾರು ಲಕ್ಷಣಗಳೊಂದಿಗೆ ಭಾರತದ ಬಹು ಭಾಷೆಗಳ ಸಾಹಿತ್ಯವನ್ನು ಪ್ರವೇಶಿಸಿತು. ಆ ನಿಟ್ಟಿನಲ್ಲಿ ಬಂಕಿಮಚಂದ್ರ ಚಟರ್ಜಿಯವರ 'ಆನಂದಮಠ' ಪ್ರಾತಿನಿಧಿಕ ಕೃತಿ. ಭಾರತದಲ್ಲಿ ಸಾಂಸ್ಕೃತಿಕ ರಾಷ್ಟ್ರೀಯತೆಯ ಮೊದಲ ಸೂಚನೆಗಳು ಈ ಕೃತಿಯಲ್ಲಿವೆ. ವಸಾಹತುಶಾಹಿ ಹಾಗೂ ಓರಿಯಂಟಲ್ ಚರಿತ್ರೆ ಮತೀಯ ರಾಷ್ಟ್ರೀಯ ವಾದವನ್ನು ಪೋಷಿಸಿತು. ಹಿಂದೂ ಸುಧಾರಣಾವಾದಿ ಚಳುವಳಿಗಳು, ಹಿಂದೂ ಮಹಾಸಭಾ, ಆರ್.ಎಸ್.ಎಸ್.ಗಳ ಕ್ರಿಯಾ ಚಟುವಟಿಕೆಗಳು, ಬ್ರಾಹ್ಮಣರ ಹಿಡಿತದಲ್ಲಿದ್ದ ಪತ್ರಿಕೋದ್ಯಮ

ಗಳೆಲ್ಲ ಇದಕ್ಕೆ ಪ್ರೇರಣೆ ನೀಡಿದವು. ಕನ್ನಡ ಸಾಹಿತ್ಯದಲ್ಲಿಯೂ ಕೂಡ ಮತೀಯ ರಾಷ್ಟ್ರೀಯವಾದದ ಪ್ರತಿಪಾದನೆಯು ಕಾಲದ ಒತ್ತಾಯವೆಂಬಂತೆ ಕಂಡುಬರುತ್ತದೆ.

ಗತಕಾಲದ ವೈಭವೀಕರಣ, ಮಧ್ಯಕಾಲೀನ ಚರಿತ್ರೆಯ ವಿಕೃತೀಕರಣ, ಮುಸ್ಲಿಮ್ ದ್ವೇಷ, ರಾಷ್ಟ್ರೀಯ ಹೋರಾಟಗಳಲ್ಲಿ ಹಿಂದೂ ಆಕರಗಳ ಬಳಕೆಯ ಪ್ರಭಾವ ಮುಂತಾದವು ಗಳನ್ನು ಮತೀಯ ರಾಷ್ಟ್ರೀಯವಾದಿ ನೆಲೆಯ ಕಾವ್ಯದ ಮುಖ್ಯ ಲಕ್ಷಣಗಳು ಎನ್ನುವುದಾದರೆ, ಅವು ಕನ್ನಡದ ನವೋದಯ ಕಾಲದ ಬಹುತೇಕ ಕವಿಗಳ ಕಾವ್ಯದಲ್ಲಿ ಕಂಡುಬರುತ್ತವೆ. ಆದರೆ ಈ ನಿಲುವುಗಳನ್ನು 'ಕೋಮುವಾದಿ' ಎಂದು ಕರೆಯಲಾಗದು. ಯಾಕೆಂದರೆ ಇವು ವಸಾಹತುಶಾಹಿ ಕಾಲಘಟ್ಟದ ಸಂಕೀರ್ಣ ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಸಂದರ್ಭದ ಸಹಜ ಉತ್ಪನ್ನಗಳು. ರಾಷ್ಟ್ರೀಯ ಹೋರಾಟದ ಅತಿ ಭಾವುಕತೆ, ಚರಿತ್ರೆಯ ಅಪಕಲ್ಪನೆ, ಮಾಧ್ಯಮಗಳ ತಪ್ಪು ಮಾಹಿತಿ, ಮುಸ್ಲಿಮ್ ಮೂಲಭೂತವಾದದ ಪರಿಣಾಮ ಮೊದಲಾದವುಗಳಿಂದ ಪ್ರೇರಿತವಾದ ಮನಸ್ಥಿತಿಯಲ್ಲಿ ಇಂಥ ಕವಿತೆಗಳು ಹುಟ್ಟಿವೆ. ಇದರಲ್ಲಿ ಕವಿಯ ಪಾಲೂ ಇರುವುದನ್ನು ಮರೆಯಲಾಗದು.

ಈ ಹಿನ್ನೆಲೆಯಲ್ಲಿ ಕುವೆಂಪು ಅವರ 'ಹಂಪೆಯ ಭೀಮ' ಕವಿತೆಯನ್ನು ಅವರ ಮತೀಯ ರಾಷ್ಟ್ರೀಯವಾದಿ ಲಕ್ಷಣದ ಹಲವಾರು ಕವಿತೆಗಳ ಅಂತರ್ ಸಂಬಂಧದಲ್ಲಿ ವಿಶ್ಲೇಷಿಸಲಾಗಿದೆ. ಕುವೆಂಪು ಅವರಂಥ ಅತ್ಯಂತ ವಿಚಾರಶೀಲ-ಜಾಗೃತ-ಶೂದ್ರ ಪ್ರಜ್ಞೆಯ ಕವಿಯ ಕಾವ್ಯದಲ್ಲೂ ಈ ಚಿಂತನೆ ನುಸುಳುವುದಾದರೆ ಆ ಸಂದರ್ಭ ಮತ್ತು ಕಾಲಘಟ್ಟಗಳನ್ನು ನೆನೆಯಬೇಕಾಗುತ್ತದೆ.

**ಕುವೆಂಪು ಅವರ 'ಹಂಪೆಯ ಭೀಮ'**

ಕುವೆಂಪು ಅವರ ಕಾವ್ಯದ ಮತೀಯ ರಾಷ್ಟ್ರೀಯವಾದಿ ನೆಲೆಯನ್ನು ಕುರಿತು ಕನ್ನಡದಲ್ಲಿ ತುಂಬ ಕಡಿಮೆ ಪ್ರಮಾಣದ ಚರ್ಚೆ ನಡೆದಿದೆ. ಡಿ. ಆರ್. ನಾಗರಾಜ ಅವರು ಕುವೆಂಪು ಕಾವ್ಯವನ್ನು ಚರ್ಚಿಸುತ್ತ, ''ಕನ್ನಡ ನವೋದಯ ಕಾವ್ಯದಲ್ಲಿ ವ್ಯಕ್ತವಾಗಿರುವ ರಾಷ್ಟ್ರೀಯತೆ ಮೂಲತಃ ತಿಲಕ್‌ವಾದಿ ಸ್ವರೂಪದ್ದು'' ಎಂದು ಅಭಿಪ್ರಾಯಪಡುತ್ತಾರೆ. ಎಚ್. ಎಸ್. ರಾಘವೇಂದ್ರರಾವ್ ಅವರು, ''ಕುವೆಂಪು ಅವರು ತಿಲಕರಂತೆ ಹಿಂದೂ ಪುನರುಜ್ಜೀವನ ಗಣೇಶೋತ್ಸವ ಗೀತೆಯ ಬಗೆಗಿನ ಗೌರವವನ್ನು ತೋರಿಸುವ ಕವಿತೆಗಳನ್ನು ಎಲ್ಲಿ ಬರೆದಿದ್ದಾರೆ ?'' ಎಂದು ಪ್ರಶ್ನಿಸುತ್ತ ಕುವೆಂಪು ಕಾವ್ಯದ ರಾಷ್ಟ್ರೀಯತೆ ನಿರ್ಮತೀಯವಾದದ್ದು ಎಂದು ಸಮರ್ಥಿಸಿಕೊಳ್ಳುತ್ತಾರೆ. ಡಾ|| ರಾಜೇಂದ್ರ ಚೆನ್ನಿ, ರಾಜಾರಾಮ್ ಹೆಗಡೆ ಮೊದಲಾದವರು ಕುವೆಂಪು ಅವರನ್ನು ಪ್ರಭಾವಿಸಿದ ವಿವೇಕಾನಂದರ ಚಿಂತನೆಗಳ ವೈಚಾರಿಕ ಚೌಕಟ್ಟಿನ ಮಿತಿಯನ್ನು ಗುರುತಿಸುತ್ತ ತಕ್ಕಮಟ್ಟಿಗೆ ಈ ವಿಷಯವನ್ನು ಪ್ರಸ್ತಾಪಿಸುತ್ತಾರೆ. ಆದರೆ ಇವರಾರೂ ಈ ಚರ್ಚೆಯನ್ನು ಹಿಂದೂ-ಮುಸ್ಲಿಂ ಕೋಮುವಾದ ಹಾಗೂ ಮೂಲಭೂತವಾದದ ಹಿನ್ನೆಲೆಯಲ್ಲಿ ಬೆಳೆಸುವುದಿಲ್ಲ. ರಹಮತ್ ತರೀಕೆರೆಯವರು ಕುವೆಂಪು ಸಾಹಿತ್ಯದಲ್ಲಿ ಮುಸ್ಲಿಮರನ್ನು ರಾಕ್ಷಸೀಕರಿಸಿರುವ ಬಗ್ಗೆ ಸೂಚನೆ ನೀಡಿದರೂ ಅದು ಕಾಲಮಾನದ ದ್ವಂದ್ವವಾಗಿರಬಹುದೆಂದು ಅಭಿಪ್ರಾಯ ಪಡುತ್ತಾರೆ. ಇಲ್ಲಿಯವರೆಗೆ ಕುವೆಂಪು ಕಾವ್ಯದ ಮತೀಯ ನೆಲೆಗಳ ಬಗ್ಗೆ ದೀರ್ಘವೂ ಗಂಭೀರವೂ ಆದ ಚರ್ಚೆ ನಡೆದಂತೆ ತೋರುವುದಿಲ್ಲ.

ಬಿ. ಎಸ್. ಚಂದ್ರಶೇಖರ ಅವರು ''ತಿಲಕವಾದಿ ರಾಷ್ಟ್ರೀಯತಾ ತಾತ್ವಿಕತೆ ಕನ್ನಡ ಸಾಹಿತ್ಯವನ್ನು ಆಳದಲ್ಲಿ ನಿಯಂತ್ರಿಸಿದಂತೆ ತೋರುತ್ತದೆ. ಕುವೆಂಪು ಅವರ 'ಪಾಂಚಜನ್ಯ', 'ಕ್ರಾಂತಿಕಾಳಿ' ಮತ್ತು 'ಕೋಗಿಲೆ ಮತ್ತು ಸೋವಿಯತ್ ರಷ್ಯಾ' ಸಂಕಲನಗಳ ಅನೇಕ ಕವಿತೆಗಳಲ್ಲಿ ತಿಲಕ್ ತಾತ್ವಿಕತೆಗೆ ಸೇರುವ ಉಜ್ವಲ ರಾಷ್ಟ್ರೀಯ ಭಾವನೆ ಪ್ರಕಟವಾಗಿದೆ'' ಎನ್ನುತ್ತಾರೆ.



ಕುವೆಂಪು ಅವರ ಕಾವ್ಯದುದ್ದಕ್ಕೂ ಮತೀಯ ರಾಷ್ಟ್ರೀಯವಾದಿ ಚಿಂತನೆಗಳ ಒಂದು ಝರಿ ನಿರಂತರವಾಗಿ ಹರಿದಂತೆ ತೋರುತ್ತದೆ. ಕುವೆಂಪು ಅವರ ಈ ಮಾದರಿಯ ಕವಿತೆಗಳ ಪಟ್ಟಿಯನ್ನು ಗಮನಿಸಿದರೆ ಈ ನೆಲೆಯ ಚಾರಿತ್ರಿಕ ಬೆಳವಣಿಗೆ ಹಾಗೂ ವಿವಿಧ ಲಕ್ಷಣಗಳನ್ನು ಗುರುತಿಸಬಹುದು. 'ಗೊಮ್ಮಟೇಶ್ವರ' (೧೯೨೬), 'ಪಾಂಚಜನ್ಯ' (೧೯೨೯), 'ಕಾಳಿ ಬರುವಳು' (೧೯೨೯), 'ಭೈರವನಾರಿ' (೧೯೨೦), 'ಹಂಪೆಯ ಭೀಮ' (೧೯೨೯), 'ಹಂಪೆಯಲ್ಲಿ' (೧೯೨೯), 'ವಿಪ್ಲವಮೂರ್ತಿ' (೧೯೩೦), 'ಧ್ರಾಂ, ಧ್ರೂಂ, ಧ್ರೀಂ' (೧೯೩೩), 'ಸಂಸ್ಕೃತಮಾತೆ' (೧೯೩೪), 'ದೇಶಭಕ್ತನೋರ್ವನಿಗೆ' (೧೯೩೫), 'ಧರ್ಮ' (೧೯೩೧), 'ನಿರ್ವಾಣ ಷಟ್ಕಂ, ಗಣೇಶಗಾಥಾ' (೧೯೪೧), 'ಕವನ ಮಾತ್ರವೇ ಕೇಳ್ ಮಂತ್ರಶಕ್ತಿ' (೧೯೪೬), 'ಪತ್ರಿಕಾ ಗವಾಕ್ಷ' (೧೯೪೭), 'ಗತಿಸಿದ ರಾಜಕೀಯ ರಾವಣನೊಂದಿಗೆ' (೧೯೪೮), 'ದಾಸವರೇಣ್ಯರಿಗೆ' (೧೯೬೪), 'ಎತ್ತಿ ಆರತಿ ಓ ಆರತಿ' (೧೯೬೪), 'ಸಾಕಾಯಿತೇ ರಕ್ತಸ್ನಾನ' (೧೯೬೫), 'ಪರಾಭವ ಸಂವತ್ಸರ ಪುರುಷನಿಗೆ' (೧೯೬೬) ಇತ್ಯಾದಿ.

'ಸಂಸ್ಕೃತಮಾತೆ', 'ಧರ್ಮ', 'ನಿರ್ವಾಣ ಷಟ್ಕಂ' ಮೊದಲಾದ ಕವಿತೆಗಳು ಗತಕಾಲದ ವೈಭವೀಕರಣ ಮತ್ತು ಹಿಂದೂ ಪುನರುಜ್ಜೀವನದ ಮಾದರಿಗಳಾದರೆ 'ಪಾಂಚಜನ್ಯ', 'ಕಾಳಿ ಬರುವಳು', 'ವಿಪ್ಲವಮೂರ್ತಿ', 'ಭೈರವನಾರಿ', 'ಗಣೇಶಗಾಥಾ' ಮೊದಲಾದ ಕವಿತೆಗಳು ರಾಷ್ಟ್ರೀಯ ಚಳುವಳಿಗೆ ಹಿಂದೂ ಆಕರಗಳ ಬಳಕೆಯ 'ವಂದೇ ಮಾತರಂ' ಮಾದರಿಯಲ್ಲಿವೆ. 'ಹಂಪೆಯ ಭೀಮ', 'ಧ್ರಾಂ, ಧ್ರೂಂ, ಧ್ರೀಂ', 'ದಾಸವರೇಣ್ಯರಿಗೆ', 'ಹಂಪೆಯಲ್ಲಿ' ಮೊದಲಾದ ಕವಿತೆಗಳು ವಿಜಯನಗರ ಚರಿತ್ರೆಯ ವಿಕೃತೀಕರಣದ ಪ್ರಭಾವದಲ್ಲಿ ಬರೆಯಲ್ಪಟ್ಟಿವೆ. 'ದೇಶಭಕ್ತನೋರ್ವನಿಗೆ', 'ಗೊಮ್ಮಟ' ಮೊದಲಾದ ಕವಿತೆಗಳು ಮತಾಂತರ ವಿರೋಧಿ ನಿಲುವನ್ನು ಪ್ರಕಟಿಸುತ್ತವೆ. 'ಪತ್ರಿಕಾ ಗವಾಕ್ಷ' ಹಾಗೂ 'ಕವನ ಮಾತ್ರವೇ ಕೇಳ್ ಮಂತ್ರಶಕ್ತಿ' ಕವಿತೆಗಳಲ್ಲಿ ಕೋಮು ಹಿಂಸಾಚಾರಕ್ಕೆ ತುತ್ತಾದ ಹಿಂದೂಗಳ ನೋವಿನ ಬಗ್ಗೆ ಮಾತ್ರ ಮಿಡಿತವಿದ್ದು ಮುಸ್ಲಿಮರ ಮೇಲೆ ಆಕ್ರಮಣಕ್ಕೆ ಪ್ರಚೋದಿಸಲಾಗಿದೆ. 'ಎತ್ತು ಆರತಿ ಎತ್ತು', 'ಸಾಕಾಯಿತೇ ರಕ್ತಸ್ನಾನ', 'ಪರಾಭವ ಸಂವತ್ಸರ ಪುರುಷನಿಗೆ' ಮೊದಲಾದ ಕವಿತೆಗಳು ರಾಷ್ಟ್ರೀಯತೆ ಹಾಗೂ ಮತೀಯ ರಾಷ್ಟ್ರೀಯತೆಯ ನೆಲೆಗಳಿಂದ ಯುದ್ಧಕೋರ ನೀತಿಯನ್ನು ಬೆಂಬಲಿಸುತ್ತವೆ. 'ಗತಿಸಿದ ರಾಜಕೀಯ ರಾವಣನೊಬ್ಬನಿಗೆ' ಎಂಬ ಕವಿತೆ ದೇಶ ವಿಭಜನೆಗೆ ಹಾಗೂ ಕೋಮುಗಲಭೆ ಗಳಿಗೆ ಜಿನ್ನಾ ಮತ್ತು ಮುಸ್ಲಿಮರು ಮಾತ್ರ ಕಾರಣವೆಂಬ ನಿಲುವನ್ನು ಪ್ರಕಟಿಸುತ್ತದೆ. 'ಸ್ವಾತಂತ್ರ್ಯ ಲಕ್ಷ್ಮಿಗೆ', 'ಸ್ವಾತಂತ್ರ್ಯೋತ್ಸವ ಮಹಾಪ್ರಗಾಥ' ಮೊದಲಾದ ಕವಿತೆಗಳಲ್ಲಿ ನಿರ್ಮತೀಯ ಹಾಗೂ ಮತೀಯ ರಾಷ್ಟ್ರೀಯತೆಗಳು ಸೇರಿಯೇ ಪ್ರಕಟವಾಗಿವೆ. ಈ ಎಲ್ಲ ಕವಿತೆಗಳು ಮತೀಯ ರಾಷ್ಟ್ರೀಯವಾದದ ಒಂದೊಂದು ಮಗ್ಗುಲನ್ನು ಒಳಗೊಂಡಿದ್ದು, ಇವು ಪರಸ್ಪರ ಅಂತರ್ ಸಂಬಂಧಿಯಾಗಿದ್ದು, ಕುವೆಂಪು ಕಾವ್ಯದ ಮತೀಯ ರಾಷ್ಟ್ರೀಯತೆಯ ನೆಲೆಯ ಒಂದು ಸ್ಪಷ್ಟ ಚಿತ್ರವನ್ನು ಬಿಡಿಸುತ್ತವೆ.

ಈ ಹಿನ್ನೆಲೆಯೊಂದಿಗೆ ಕುವೆಂಪು ಅವರ 'ಹಂಪೆಯ ಭೀಮ' ಪದ್ಯವನ್ನು ಈ ಪದ್ಯಗಳ ಅಂತರ್‌ಸಂಬಂಧದಲ್ಲಿ ಚರ್ಚೆಗೆ ಎತ್ತಿಕೊಳ್ಳಲಾಗಿದೆ. 'ಹಂಪೆಯ ಭೀಮ' ಕವಿತೆಯು ವಿಜಯನಗರ ಸಾಮ್ರಾಜ್ಯದ ಅವನತಿಯನ್ನು ಕುರಿತಾದ ದಟ್ಟವಾದ ವಿಷಾದವನ್ನು ವ್ಯಕ್ತಪಡಿಸುತ್ತ, ಮುಸ್ಲಿಮರ ಆಕ್ರಮಣದಿಂದ ಸರ್ವನಾಶವಾಯಿತೆಂಬ ಚಾರಿತ್ರಿಕ ಕಾರಣವನ್ನೂ ಶೋಧಿಸಿಕೊಳ್ಳುತ್ತದೆ. ಭಾರತದ ಪ್ರಾಚೀನ ಸಂಸ್ಕೃತಿಯ ಕ್ಷಾತ್ರತೇಜಸ್ಸನ್ನು ನೆನಪಿಸುತ್ತ ಮರಳಿ ಆ ಪೌರುಷವನ್ನು ಪಡೆಯಲು ಪ್ರೇರೇಪಿಸುತ್ತದೆ. ಹಿಂದೂ ಕೋಮುವಾದಿ ಚಿಂತನೆಗೆ ಕಾರಣವಾದದ್ದು ವಿಜಯನಗರದ ತಿರುಚಿದ ಚರಿತ್ರೆಯ ಪ್ರಭಾವ. ಕೋಮುವಾದಿ ಸಿದ್ಧಾಂತ ಉದ್ದೇಶಪೂರ್ವಕವಾಗಿ ಚರಿತ್ರೆಯನ್ನು ತಿರುಚುತ್ತದೆ. ಹಾಗೆ ತಿರುಚಿದ ಚರಿತ್ರೆಯನ್ನು ಕುರಿತಾದ ಗಾಢವಾದ ನಂಬಿಕೆಯಲ್ಲಿ ಈ ಮಾದರಿಯ ಕವಿತೆಗಳು ಜನ್ಮತಾಳುತ್ತವೆ. ಆ ಕಾಲದಲ್ಲಿ ಹಿಂದೂ ಮತೀಯವಾದಿಗಳ ಹಿಡಿತದಲ್ಲಿದ್ದ ಪತ್ರಿಕಾ ಮಾಧ್ಯಮ ನೀಡಿದ ಸುದ್ದಿಗಳೂ ಸಹಿತ ಕುವೆಂಪು ಅವರಂಥ ಕವಿಗಳ ಕಾವ್ಯದಲ್ಲಿ ಮತೀಯ ರಾಷ್ಟ್ರೀಯವಾದ ಪ್ರತಿಪಾದನೆಗೊಳ್ಳಲು ಕಾರಣವಾಗಿರ ಬಹುದು. 'ಪತ್ರಿಕಾ ಗವಾಕ್ಷ' ಎಂಬ ಕವಿತೆ ಬರೆಯಲು 'ದಿ ಹಿಂದು' ಪತ್ರಿಕೆಯ ಸುದ್ದಿ ಕಾರಣವಾಗಿದ್ದನ್ನಿಲ್ಲಿ ನೆನಪಿಸಬಹುದು.

ಸಾವೆಲ್, ಸಾಲತ್ತೂರೆ, ಪಿ. ಬಿ. ದೇಸಾಯಿ ಹಾಗೂ ಆಲೂರ ವೆಂಕಟರಾಯರ ವಿಜಯನಗರ ಚರಿತ್ರೆಯನ್ನು ಕುರಿತಾದ ಮತೀಯ ಬರವಣಿಗೆ ಕನ್ನಡ ನವೋದಯ ಕವಿಗಳ ಮೇಲೆ ಗಾಢವಾದ ಪ್ರಭಾವವನ್ನು ಬೀರಿದೆ.

ಇವು ಹಿಂದುತ್ವ ಮತ್ತು ಕರ್ನಾಟಕತ್ವಗಳ ನಡುವೆ ಕರುಳುಬಳ್ಳಿ ಸಂಬಂಧವನ್ನು ಕಲ್ಪಿಸಿದವು. ವಿಜಯನಗರದ ಚರಿತ್ರೆಯ ಮತೀಯ ವಿಕೃತೀಕರಣದಿಂದಾಗಿ ರಾಷ್ಟ್ರೀಯತೆಯೊಂದಿಗೆ ಹುಟ್ಟಿದ ಕೋಮುವಾದ ಪ್ರಾದೇಶಿಕತೆಗೂ ಪಸರಿಸುವಂತಾಯಿತು. ಕುವೆಂಪು ಕೂಡ 'ಮೆಟ್ಟುವ ನೆಲ'ದಂಥ ನಾಡಗೀತೆಯಲ್ಲಿ 'ಹಾಳಾದ ಹಂಪೆಗೆ ಕರಗುವ ಮನ' ಎಂದು ಬರೆಯುವ ಮೂಲಕ ಮುಸಲ್ಮಾನರಿಂದ ಕರ್ನಾಟಕದ ಸಾಮ್ರಾಜ್ಯ ನಾಶವಾಯಿತೆಂಬ ಸಂದೇಶ ನೀಡಿದರು. 'ರಾಷ್ಟ್ರೀಯತೆ ಎನ್ನುವುದು ಹಿಂದೂಗಳಿಗೆ ಮಾತ್ರ ಸೀಮಿತ' ಎಂಬ ಸಾಂಸ್ಕೃತಿಕ ರಾಷ್ಟ್ರೀಯತೆಯ ಮತೀಯ ವ್ಯಾಖ್ಯಾನ ಕರ್ನಾಟಕತ್ವವನ್ನೂ ಹಿಂದೂಗಳಿಗೆ ಸೀಮಿತಗೊಳಿಸುವ ಆಶಯಗಳನ್ನು ಒಳಗೊಂಡಿತು. ಬಹುಶಃ ವಿಜಯನಗರ ಸಾಮ್ರಾಜ್ಯದ ಮತೀಯ ಚಾರಿತ್ರಿಕ ಕಥನವನ್ನು ಮೊದಲ ಬಾರಿಗೆ ಶಾಂತಕವಿಗಳು ತಮ್ಮ 'ವಿದ್ಯಾರಣ್ಯ ವಿಜಯ'ವೆಂಬ ಕೀರ್ತನೆಯಲ್ಲಿ ಅಭಿವ್ಯಕ್ತಿಸಿದಂತೆ ತೋರುತ್ತದೆ. ನಂತರದ ಕನ್ನಡ ಕವಿಗಳು ಹಿಂದಿರುಗಿ ನೋಡಲಿಲ್ಲ. ಕರ್ನಾಟಕ ಏಕೀಕರಣ ಚಳುವಳಿಗೆ ಈ ಕಥನವನ್ನೇ ಪ್ರೇರಕ ಸಾಮಗ್ರಿಯಾಗಿ ಬಳಸಿಕೊಂಡಿದ್ದು ಕನ್ನಡ, ಕರ್ನಾಟಕ, ಕರ್ನಾಟಕತ್ವಗಳ ಕಲ್ಪನೆಗೆ ಮತೀಯ ಬಣ್ಣವನ್ನು ಬಳಿಯಿತು.

**ವಿಷಾದ ಮತ್ತು ರಾಕ್ಷಸೀಕರಣದ ಸ್ವರೂಪ**

ಹಂಪೆಯ ದುಃಸ್ಥಿತಿಯನ್ನು ಕುರಿತಾದ ಗಾಢ ವಿಷಾದ ಕುವೆಂಪು ಅವರ ಮನದಾಳದ ಭಾವವಾಗಿದೆ. ಹೀಗಾಗಿ ಅದು ಅವರ ಕಾವ್ಯದಲ್ಲಿ ಸಂದರ್ಭ ಸಿಕ್ಕಾಗೊಮ್ಮೆ ಹಣಿಕಿ ಹಾಕುತ್ತದೆ. 'ಹಂಪೆಯಲ್ಲಿ' ಎಂಬ ಕವಿತೆಯಲ್ಲಿ ಕೂಡ 'ಹುಳ ಹಿಡಿದ ಹೆಣ', 'ಕಲಿಯುಗದ ಹಸಿಯ ಹಿರಿಮಸಣ' ಮುಂತಾದ ಚಿತ್ರಗಳಿವೆ. ಕನ್ನಡಿಗರು ಹಾಳು ಹಂಪೆಯನ್ನು ನೋಡಿ ಕಂಬನಿ ಸುರಿಸಬೇಕೆಂಬುದು ಕವಿತೆಯ ಅಭಿಲಾಷೆ. 'ದಾಸವರೇಣ್ಯರಿಗೆ' ಕವಿತೆಯಲ್ಲಿಯೂ ಹಾಳು ಹಂಪೆ ಪ್ರತ್ಯಕ್ಷವಾಗುತ್ತದೆ. ಹಂಪೆಗಾಗಿ ಕಂಬನಿಗರೆವ ಭೀಮ, ವಿರೂಪಾಕ್ಷರನ್ನು ಕವಿ ಸೃಷ್ಟಿಸುತ್ತಾರೆ. ಕುವೆಂಪು ಕಾವ್ಯದಲ್ಲಿ ಹರಿಯುವ ವಿಷಾದ ಮತ್ತು ಶೋಕಗಳಿಗೆ ಕಾರಣ ಕವಿಯೇ ಹೇಳುವಂತೆ 'ಮುಸಲರಿಂ ಹಸಿಮಸಣವಾದ ಹಂಪೆ.' ವಿಜಯನಗರದ ಉದಯ ಮತ್ತು ನಾಶಗಳ ಹಿಂದೆ ಹಿಂದು-ಮುಸ್ಲಿಂ ದ್ವೇಷಕ್ಕಿಂತ ಬೇರೆಯದೇ ಆದ ಚಾರಿತ್ರಿಕ ಕಾರಣಗಳಿರಬಹುದೆಂಬ ಹೊಸ ಚರಿತ್ರೆಯ ಸೂಚನೆಗಳು ಕುವೆಂಪು ಹಾಗೂ ಆ ಕಾಲದ ಲೇಖಕರಿಗೆ ಸಿಕ್ಕಿದ್ದರೆ ಈ ಮಾದರಿಯ ಕವಿತೆಗಳು ಸೃಷ್ಟಿಯಾಗುವ ಸಾಧ್ಯತೆ ಕಡಿಮೆ ಇತ್ತು. ಮಧ್ಯಯುಗೀನ ಪ್ರಭುತ್ವಗಳು ತಮ್ಮ ಉಳಿವಿಗಾಗಿ ಧರ್ಮಾತೀತವಾಗಿ ಹೊಂದಾಣಿಕೆ ಮಾಡಿಕೊಳ್ಳುತ್ತಿದ್ದ ಹಾಗೂ ನಗರನಾಶ, ದೇವಾಲಯ ನಾಶಗಳು ಮಧ್ಯಯುಗೀನ ಪ್ರಭುತ್ವಗಳ ಧರ್ಮಾತೀತ ಲಕ್ಷಣವಾಗಿರುವ ಚಾರಿತ್ರಿಕ ಸಂಗತಿಗಳು ಆ ಕಾಲದ ಲೇಖಕರ ಗಮನಕ್ಕೆ ಬಂದಿದ್ದರೆ ಈ ಮಾದರಿಯ ಕವಿತೆಗಳು ಹುಟ್ಟುತ್ತಿರಲಿಲ್ಲವೆನ್ನಿಸುತ್ತದೆ.

''ವಿಜಯನಗರವೋ ಮೊಗಲರಾಳ್ವಿಕೆಯೋ ಇಂಗ್ಲಿಷರೋ ಎಲ್ಲರೂ ಜಿಗಣೆಗಳೇ ನನ್ನ ನೆತ್ತರಿಗೆ''

– ಎಂದು ಸಾಮ್ರಾಜ್ಯಶಾಹಿ ವಿರೋಧಿ ಕವಿತೆ ಬರೆದ ಕುವೆಂಪು ಅವರು ಸಾಮ್ರಾಜ್ಯವಾದವನ್ನು ಮತೀಕರಿಸಿದ ಚರಿತ್ರೆಯಿಂದ ಪ್ರಭಾವಿತರಾಗಿದ್ದಾರೆ. ಹಿಂದು-ಮುಸ್ಲಿಂ ಪ್ರಭುಗಳ ನಡುವೆ ನಡೆದ ಯುದ್ಧಗಳನ್ನು ಹಿಂದು-ಮುಸ್ಲಿಂ ಜನಸಮುದಾಯಗಳಿಗೆ ವಿಸ್ತರಿಸುವ ಕೋಮುವಾದಿ ಚಿಂತನೆಯ ಪ್ರಭಾವವನ್ನಿಲ್ಲಿ ಗುರುತಿಸಬಹುದು. 'ಮುಸಲರಿಂ ಹಸಿಮಸಣವಾದ ಹಂಪಿ' ಎಂಬ ಸಾಲು ಮುಸ್ಲಿಂ ಅರಸರನ್ನೂ ಅವರ ಕ್ರೌರ್ಯದ ಕಾರಣದಿಂದ ಸಮಸ್ತ ಮುಸಲ್ಮಾನರನ್ನೂ ರಾಕ್ಷಸೀಕರಿಸುತ್ತದೆ. ಕೋಮುವಾದ ಪ್ರತಿಪಾದಿಸುವ ಹಿಂದೂ-ಮುಸ್ಲಿಂ ಎಂಬ ಏಕಾಕಾರಿ ರಚನೆಗಳನ್ನು ಕವಿತೆ ಒಪ್ಪಿಕೊಳ್ಳುತ್ತದೆ.

ಕುವೆಂಪು ಅವರು 'ಧ್ರಾಂ, ಧ್ರೂಂ ಧ್ರೀಂ' ಕವಿತೆಯಲ್ಲಿ ಘಜನಿ ಮಹಮ್ಮದನ ಆಕ್ರಮಣ ಕುರಿತು 'ಅವನೆದೆಯಲ್ಲಿ ಮುಸ್ಲಿಂ ಮರುಭೂಮಿಯು', 'ಕಾಫರ ರಕ್ತವ ಕುಡಿದಿತ್ತು ಸೋಮೇಶ್ವರ ಸಂಪತ್ತಿನ ಲಿಂಗಕ್ಕಾಯಿತು ಮುಸಲಾಘಾತದಿ ಭಂಗ!' ಎಂದು ಬರೆಯುತ್ತಾರೆ. ಪ್ರಭುತ್ವ ಹಾಗೂ ವ್ಯಕ್ತಿಗಳ ಗುಣಗಳನ್ನು ಆ ಧರ್ಮಗಳ ಸಮುದಾಯಗಳಿಗೆ ಆರೋಪಿಸಿ ರಾಕ್ಷಸೀಕರಿಸುವುದನ್ನಿಲ್ಲಿ ಗುರುತಿಸಬಹುದು.

**ಕ್ಷಾತ್ರತೇಜದ ಸ್ಮೃತಿ ಮತ್ತು ಆಕ್ರಮಣಕ್ಕೆ ಪ್ರೇರಣೆ**

ತಪನ್ ರಾಯ್ ಚೌಧರಿ, ವಿಲಿಯಂ ರ್‍ಯಾಡೀಸ್, ದೀಪೇನ್ ಚಕ್ರವರ್ತಿ, ಆಶೀಶ್ ನಂದಿ ಮುಂತಾದವರ ವಿಶ್ಲೇಷಣೆಯ ಒಳನೋಟಗಳನ್ನು ಬಳಸಿಕೊಂಡು ಹೇಳುವುದಾದರೆ ವಸಾಹತುಶಾಹಿ ಆಗಮನದಿಂದ ಪ್ರಚೋದಿತಗೊಂಡು ಆರಂಭವಾದ ಧಾರ್ಮಿಕ-ಸಾಮಾಜಿಕ-ಸುಧಾರಣಾವಾದಿ ಚಳುವಳಿಯ ಮುಂದುವರಿಕೆಯಾಗಿ ವಿವೇಕಾನಂದರನ್ನು ನೋಡಬೇಕಾಗುತ್ತದೆ. ಪುರೋಹಿತಶಾಹಿ ಹಾಗೂ ಜಾತಿವ್ಯವಸ್ಥೆಯ ಬಗ್ಗೆ ಅದೆಷ್ಟೇ




ಬೇಸಿಗೆಯಲ್ಲಿ ಹದಮಾಡಿ
ಮಳೆಗಾಲದಲ್ಲಿ ಬಿತ್ತಿ
ಚಳಿಗಾಲದಲ್ಲಿ ಬೆಳೆದ ಬೆಳೆಯನು
'ಸಂಕ್ರಮಣ'ದಲ್ಲಿ ರಾಶಿ ಮಾಡುವ
ಸುಗ್ಗಿ ಕಾಲವಲ್ಲವಿದು.

ದನಕರುಗಳ ಹೆಂಡಿಯನು ಜಮಾಯಿಸಿ
ಅದರಲ್ಲಿ ರಾಶಿ ಕಣವ ತಯಾರಿಸಿ
ಎಂಟೆತ್ತುಗಳನು ಕಣದ ಮೇಟಿಗೆ ಕಟ್ಟಿ
ಬೆಳ ತನಕ ಹಂತಿ ಪದ ಹಾಡುತ
ಅನ್ನ ಬಾನವ ಮಾಡಿದ ಹೊಸ ಮಡಿಕೆಗೆ
ಟೆಂಗು ಕರ್ಪೂರದ ಪೂಜೆಗೈದು
ರಾಶಿ ತುಂಬುವ ಸುಗ್ಗಿ ಕಾಲವಲ್ಲವಿದು.

ಪುನರುತ್ಪತ್ತಿಯಾಗದ ಕಂಪನಿಯ ಬೀಜವ ತಂದು
ಹೆಂಡಿಗೊಬ್ಬರಕೆ ಎಳ್ಳು ನೀರು ಬಿಟ್ಟು
ರಾಸಾಯನಿಕ ಗೊಬ್ಬರಗಳನ್ನು ಬಳಕೆ ಮಾಡಿ
ವಿಷಯುಕ್ತ ಔಷಧಿಗಳನ್ನು ಸಿಂಪಡಿಸಿ
ಯಂತ್ರಗಳ ಸಹಾಯದಿಂದ ರಾಶಿ ಮಾಡಿ
ನೇರವಾಗಿ ಮಾರುಕಟ್ಟೆಗೆ ಸಾಗಿಸುವ ಕಾಲವಿದು.

ಬೆಳೆದ ಬೆಳೆಗೆ ಬೆಲೆ ಬರದೇ
ಬೀಜ ಎಣ್ಣೆ ಗೊಬ್ಬರಗಳ ಬಾಕಿ ತೀರಿಸದೆ
ಅಸಹಾಯಕನಾಗಿ ಹತಾಶನಾಗಿ ಮನೆಗೆ ಮರಳಿ
ಬೆಳೆಗೆ ಸಿಂಪಡಿಸಲು ತಂದ ವಿಷಯುಕ್ತ
ಔಷಧಿಯನ್ನು ಸೇವಿಸಿ ಭೂತಾಯಿಯ
ಒಡಲು ಸೇರುವ ರೈತನ ಸುಗ್ಗಿಯ ಕಾಲವಿದು.

**ಈಶ್ವರಪ್ಪ ಕಟ್ಟಿಮನಿ**
ಮನೆ ನಂ. ೪೮, ಸಾಯಿರಾಮನಗರ, ರಾಘವೇಂದ್ರ ಲೇಔಟ್
ಹಳೇ ಆಕಾಶವಾಣಿ ವಿತರಣಾ ಕೇಂದ್ರ ಹಿಂದುಗಡೆ
ಜೇವರ್ಗಿ ರಸ್ತೆ, ಕಲಬುರ್ಗಿ.

ಉಗ್ರವಾಗಿ ಪ್ರತಿಭಟಿಸಿದರೂ ಅವರು ಬಳಸುವ ವೈಚಾರಿಕ ಚೌಕಟ್ಟುಗಳು ಸಾಂಸ್ಕೃತಿಕ ಪುನರುತ್ಥಾನವಾದಿ ಚೌಕಟ್ಟುಗಳೇ. ಹಿಂದೂ ಸಂಸ್ಕೃತಿಯ ಭವ್ಯವಾದ ಗತಕಾಲ, ನಮ್ಮ ಚರಿತ್ರೆಯಲ್ಲಿ ಒಂದು ಕಾಲದವರೆಗೆ ಕಂಡುಬಂದಿದ್ದ ಕ್ಷಾತ್ರ ತೇಜಸ್ಸು, ಪಶ್ಚಿಮದ ಭೌತವಾದವನ್ನು ಅಂತಿಮವಾಗಿ ಗೆಲ್ಲಲಿರುವ ಭಾರತೀಯ ಅಧ್ಯಾತ್ಮವಾದ, ಇವುಗಳೇ ಈ ಚೌಕಟ್ಟಿಗೆ ಆಧಾರಗಳಾಗಿವೆ. ಕುವೆಂಪು ಅವರ ಮೇಲೆ ಗಾಢವಾದ ಪ್ರಭಾವ ಬೀರಿದ ವಿವೇಕಾನಂದರ ಚಿಂತನೆಗಳ ಚೌಕಟ್ಟಿದು. ಕುವೆಂಪು ಅವರ ಹಲವಾರು ಕವಿತೆಗಳಲ್ಲಿ ಕಂಡುಬರುವ ಗತಕಾಲದ ವೈಭವೀಕರಣ ಹಾಗೂ ಒಂದು ಕಾಲದವರೆಗಿನ ಕ್ಷಾತ್ರತೇಜದ ಪ್ರಸ್ತಾಪವನ್ನು ಈ ಕವಿತೆಯಲ್ಲಿಯೂ ನೋಡಬಹುದು. ಆದರೆ 'ಪಾಂಚಜನ್ಯ'ದಂಥ ಕವಿತೆಗಳಲ್ಲಿ ವಸಾಹತುಶಾಹಿಗೆ ಪ್ರತಿರೋಧವನ್ನೊಡ್ಡಿದ ಗತಕಾಲದ ವೈಭವೀಕರಣ ಹಾಗೂ ಕ್ಷಾತ್ರತೇಜಗಳು 'ಹಂಪೆಯ ಭೀಮ' ಕವಿತೆಯಲ್ಲಿ ಹಿಂದೂ ಸಾಮ್ರಾಜ್ಯದ ನಾಶಕ್ಕೆ ಕಾರಣವೆಂದು ನಂಬಲಾದ ಮುಸ್ಲಿಮರ ವಿರುದ್ಧ ಪ್ರತಿರೋಧ ವ್ಯಕ್ತವಾಗುತ್ತದೆ. ಭೀಮ ಮತ್ತು ಆಂಜನೇಯರ ಶಕ್ತಿಯನ್ನು ಹಿಂದೂ ಕ್ಷಾತ್ರತೇಜ ವೆಂದು ಕವಿತೆ ಪ್ರತಿಪಾದಿಸುತ್ತದೆ. ಅಂಥ ಕ್ಷಾತ್ರತೇಜದ ಪುರುಷರಿದ್ದೂ ಹಂಪೆ ಹಾಳಾದ ಬಗ್ಗೆ ಆಶ್ಚರ್ಯವನ್ನು ಪ್ರಕಟಿಸುತ್ತದೆ. ಮರಳಿ ಕನ್ನಡಿಗರಲ್ಲಿ ಹೇಡಿತನ ತೊಲಗಿ ಕೆಚ್ಚು-ನೆಚ್ಚುಗಳು ಮೂಡುವಂತೆ ಪ್ರೇರೇಪಿಸಲು ಭೀಮನ ಗದೆಗೆ ವಿನಂತಿಸಲಾಗಿದೆ. 'ಕವನ ಮಾತ್ರವೇ ಕೇಳ್ ಶಕ್ತಿ ಮಂತ್ರ' ಎಂಬ ಕವಿತೆಯನ್ನು ಕುವೆಂಪು ಅವರ ಮತೀಯ ರಾಷ್ಟ್ರೀಯವಾದಿ ನೆಲೆಯ ಮುಂದುವರಿದ ಭಾಗವೆಂದು ಭಾವಿಸಿದರೆ ಅಲ್ಲಿ ಇನ್ನೂ ಹೆಚ್ಚು ಸ್ಪಷ್ಟವಾಗಿ 'ಹಿಂದುತ್ವ'ದ ಚಿಂತನೆಗಳು ವ್ಯಕ್ತವಾಗಿರುವುದು ಕಂಡುಬರುತ್ತದೆ. ಆಂಜನೇಯ, ಭೀಮರನ್ನು ಹಿಂದುವಿನ ಹೃದಯಕ್ಕೆ ಆಹ್ವಾನಿಸಲಾಗುತ್ತದೆ. ರಾಮನು ರಾವಣನನ್ನು, ಭೀಮನು ದುಶ್ಶಾಸನನನ್ನು ಸಂಹಾರ ಮಾಡಿದಂತೆ ಮುಸ್ಲಿಮರನ್ನು ಸಂಹಾರ ಮಾಡಲು ಕರೆ ಕೊಡಲಾಗುತ್ತದೆ.

ತಮ್ಮ ಕಾವ್ಯದಲ್ಲಿ ಬಹುಪಾಲು ಸಮಾನತೆ, ಸ್ವಾತಂತ್ರ್ಯ, ಸಮನ್ವಯತೆ, ವಿಶ್ವಮಾನವ ಸಂದೇಶ, ಜಾತ್ಯತೀತತೆ ಗಳನ್ನು ಪ್ರತಿಪಾದಿಸಿದ ಕುವೆಂಪು ಅವರಂಥ ಮಹತ್ವದ ಕವಿಯ ಕಾವ್ಯದಲ್ಲಿ ಮತೀಯ ರಾಷ್ಟ್ರೀಯವಾದಿ ನೆಲೆಗೆ ಅವಕಾಶ ಸಿಗುವುದಕ್ಕೆ ಕಾರಣಗಳನ್ನು ಹುಡುಕ ಬೇಕಿದೆ. ಅದರಲ್ಲಿ ಕಾಲ ಮತ್ತು ಕವಿ ಇಬ್ಬರ ಪಾಲೂ ಸಮಾನವಾದುದಾಗಿದೆ.

ಕುವೆಂಪು ಅವರು ಕಾವ್ಯ ರಚಿಸುತ್ತಿದ್ದ ಕಾಲ ಭಾರತದ ಚರಿತ್ರೆಯಲ್ಲಿ ಹಲವು ಬಗೆಯ ರಾಷ್ಟ್ರೀಯತೆಗಳ ನಡುವಿನ ಸಂಘರ್ಷದ ಸಂಕೀರ್ಣವಾದ ಕಾಲಘಟ್ಟ. ಹಿಂದೂ ಮಹಾಸಭಾ, ಆರೆಸ್ಸೆಸ್ ಹಾಗೂ ಕಾಂಗ್ರೆಸ್ ನಲ್ಲಿದ್ದ ತಿಲಕ್‌ವಾದಿ ಗುಂಪು ವರ್ಣಾಶ್ರಮಧರ್ಮವ ಚೌಕಟ್ಟಿನಲ್ಲಿ ಸಾಂಸ್ಕೃತಿಕ ರಾಷ್ಟ್ರೀಯತೆಯನ್ನು ಪ್ರತಿಪಾದಿಸು ತ್ತಿದ್ದುವು. ಮುಸ್ಲಿಮ್ ಲೀಗ್ ಮತ್ತು ಮುಸ್ಲಿಮ್ ಜಮೀನ್ದಾರಿ ವರ್ಗ ಅದಕ್ಕೆ ಪ್ರತಿಯಾಗಿ ಮುಸ್ಲಿಮ್ ಪ್ರಾತಿನಿಧ್ಯದ ಭಾರತ ರಾಷ್ಟ್ರೀಯತೆ ಇಲ್ಲವೇ ದ್ವಿ ರಾಷ್ಟ್ರೀಯತೆಯನ್ನು ಪ್ರತಿಪಾದಿಸುತ್ತಿದ್ದುವು. ಪರಮಹಂಸ, ವಿವೇಕಾನಂದರ ಮುಂದುವರಿದ ಚಿಂತನೆಗಳಂತೆ ಗಾಂಧಿ ಹಾಗೂ ಟ್ಯಾಗೋರರು ಸೌಹಾರ್ದತಾ ರಾಷ್ಟ್ರೀಯತೆಯನ್ನು ಪ್ರತಿಪಾದಿಸುತ್ತಿದ್ದರು. ಫುಲೆ, ಪೆರಿಯಾರ್ ಮೊದಲಾದವರು ಶೂದ್ರ ಸಮಾನತೆಯ ರಾಷ್ಟ್ರೀಯತೆಯ ಚಿಂತನೆಗಳನ್ನು ಬಿತ್ತಿದ್ದರು. ಅಂಬೇಡ್ಕರ್ ನಾಯಕತ್ವದಲ್ಲಿ ದಲಿತರು ಪ್ರತ್ಯೇಕ ಪ್ರಾತಿನಿಧ್ಯದ ರಾಷ್ಟ್ರೀಯತೆಯನ್ನು ಉಗ್ರವಾಗಿ ಬೆಂಬಲಿಸುತ್ತಿದ್ದರು. ರಾಷ್ಟ್ರೀಯತೆಯ ಚಿಂತನೆ ಕೆಲವು ವರ್ಗಗಳಿಗೆ ಸಮಾನತೆಯ ಹಕ್ಕಿಗಾಗಿ ಹೋರಾಟದ ಚಿಂತನೆಯಾದರೆ, ಕೆಲವು ವರ್ಗಗಳಿಗೆ ಸ್ವಹಿತಾಸಕ್ತಿಗಾಗಿ ಇತರ ವರ್ಗಗಳ ಹಕ್ಕುಗಳನ್ನು ಹಿನ್ನೆಲೆಗೆ ಸರಿಸುವ ಮತೀಯವಾದಿ ಹುನ್ನಾರವಾಗಿತ್ತು. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಕುವೆಂಪು ಅವರು ಒಂದೆಡೆ ಶೂದ್ರ ಮತ್ತು ದಲಿತ ಸಮಾನತೆಗಾಗಿ ಬ್ರಾಹ್ಮಣ್ಯದ ಚೌಕಟ್ಟಿನಲ್ಲಿಯ ಸಾಂಸ್ಕೃತಿಕ ರಾಷ್ಟ್ರೀಯತೆಯನ್ನು ಉಗ್ರವಾಗಿ ಟೀಕಿಸುವ ವಿವೇಕಾನಂದರ ಮಾದರಿಯಿಂದ ಗಾಢವಾಗಿ ಪ್ರಭಾವಿತ ರಾಗಿದ್ದರು. ಇನ್ನೊಂದೆಡೆ ವಸಾಹತುಶಾಹಿ ಶಕ್ತಿಗಳ ವಿರುದ್ಧದ ತಿಲಕ್‌ವಾದಿ ಹೋರಾಟದ ಮಾರ್ಗದಿಂದಲೂ ಪ್ರಭಾವಿತರಾಗಿದ್ದರು. ಕುವೆಂಪು ಅವರು ಸಾಂಸ್ಕೃತಿಕ ರಾಷ್ಟ್ರೀಯತೆಯ ಶೂದ್ರ ವಿರೋಧಿ ನೆಲೆಯನ್ನು ಕಟುವಾಗಿ ಟೀಕಿಸಿದರು. ತಕ್ಕಮಟ್ಟಿಗೆ ದಲಿತರ ನೆಲೆಯಿಂದಲೂ ಪ್ರತಿಕ್ರಿಯಿಸಿದರು. ಆದರೆ ಅವರೂ ಮುಸ್ಲಿಮ್ ವಿರೋಧಿ ನೆಲೆಯನ್ನು ಒಂದಿಷ್ಟು ಒಪ್ಪಿಕೊಂಡಂತೆ ತೋರುತ್ತದೆ. ಮಹಮದ್ ಅಬ್ಬಾಸ್ ಷೂಸ್ತ್ರಿಯವರ 'ಇಸ್ಲಾಂ ಸಂಸ್ಕೃತಿ' ಕೃತಿಗೆ ಬರೆದ ಮುನ್ನುಡಿಯಲ್ಲಿ ವ್ಯಕ್ತಪಡಿಸಿದ ಜಾತ್ಯತೀತ ಚಿಂತನೆಗಳನ್ನು ಸಾಮರಸ್ಯದ ನಿಲುವುಗಳನ್ನು ಕುವೆಂಪು ಅವರು ತಮ್ಮ ಸೃಜನಶೀಲ ಕೃತಿಗಳಲ್ಲಿ ವ್ಯಕ್ತಪಡಿಸಲಿಲ್ಲ. ಗಾಂಧೀಜಿಯವರ ಸರ್ವೋದಯ ಚಿಂತನೆಗಳಿಂದ ಪ್ರಭಾವಿತರಾಗಿದ್ದ ಅವರು ಹಿಂದು-ಮುಸ್ಲಿಮ್ ಸಾಮರಸ್ಯದ ಚಿಂತನೆಗೆ ವಿಮುಖರಾದದ್ದು ಆಶ್ಚರ್ಯದ ಸಂಗತಿ. ಸೃಜನಶೀಲ ಅಭಿವ್ಯಕ್ತಿಗಳಿಗೆ ಇಂಥ ಮಿತಿಗಳು ರೂಪುತಾಳುವಲ್ಲಿ ಕಾಲ ಮತ್ತು ಕವಿ ಇಬ್ಬರದೂ ಸಮಾನ ಪಾಲಿರುತ್ತದೆ.

ಕುವೆಂಪು ಕಾವ್ಯದ ವೈರುಧ್ಯಗಳನ್ನು ಕುರಿತು ಕನ್ನಡ ವಿಮರ್ಶೆ ಸ್ವಲ್ಪಮಟ್ಟಿಗೆ ಉದಾರವಾಗಿ ವರ್ತಿಸಿದಂತಿದೆ. "ಕೆಲವು ಅಂಶಗಳಲ್ಲಿ ಜನಮುಖಿಯೂ, ಮತ್ತೆಷ್ಟೋ ಅಂಶಗಳಲ್ಲಿ ಜನವಿರೋಧಿಯೂ ಆಗಿರುವಂಥ ವಿರೋಧಾಭಾಸಕರ ಚಿಂತನೆಗಳು ಕುವೆಂಪು ಕಾವ್ಯದಲ್ಲಿ ನಮಗೆ ಕಂಡುಬರುವುದಿಲ್ಲ. ಆಗಿನ ಸ್ವಾತಂತ್ರ್ಯ ಚಳುವಳಿಯ ಹಲವು ನೇತಾರರು ರಾಜಮಹಾರಾಜರ ಆಳ್ವಿಕೆಗಳನ್ನು ಕೀರ್ತಿಸುತ್ತಾ ಭಗವದ್ಗೀತೆಯ ಮುಖಾಂತರ ದೇಶಪ್ರೇಮವನ್ನು ಪ್ರತಿಪಾದಿಸುತ್ತಿರುವಾಗ, ಮತ್ತೊಂದು ಕಡೆ ಬೆಳೆಯುತ್ತಿದ್ದ ಕರ್ನಾಟಕ ಏಕೀಕರಣ ಚಳುವಳಿಯು ವಿಜಯನಗರವನ್ನು, ತಾಯಿ ಭುವನೇಶ್ವರಿಯನ್ನು ಚಳುವಳಿಯ ಪ್ರೇರಣಾ ಮಾದರಿಗಳಾಗಿ ಮುಂದಿಡು ತ್ತಿದ್ದಾಗ ಕುವೆಂಪು ಅವರಲ್ಲಿ ಗಟ್ಟಿಗೊಂಡಿದ್ದ ಈ ವರ್ಣ ಪ್ರಜ್ಞೆ ನಮ್ಮವರೇ ಹದಹಾಕಿ ತಿವಿದರದು ಹೂವೇ? – ಎಂಬ ಎಚ್ಚರ ಅತ್ಯಂತ ಪ್ರಸ್ತುತವಾದುದಾಗಿತ್ತು" ಎನ್ನುತ್ತಾರೆ ಬಂಜಗೆರೆ ಜಯಪ್ರಕಾಶ್. ಕುವೆಂಪು ಅವರ ಬಗ್ಗೆ ಗಂಭೀರ ಒಳನೋಟಗಳನ್ನು ಹೊಂದಿರುವ ಬಂಜಗೆರೆ ಜಯಪ್ರಕಾಶ ಅವರ ಮಾತುಗಳು ಹಾಗೂ ಹಲವಾರು ವಿದ್ವಾಂಸರ ಈ ಮಾದರಿಯ ಅಭಿಪ್ರಾಯಗಳು ಕುವೆಂಪು ಕಾವ್ಯದಲ್ಲಿ ಕೂಡ, ಕಾರಣ ಏನೇ ಇರಲಿ, ವಿರೋಧಾಭಾಸಕರ ಚಿಂತನೆಗಳೂ ಅಭಿವ್ಯಕ್ತವಾಗಿರುವುದರ ಬಗ್ಗೆ ಮೌನ ವಹಿಸುತ್ತವೆ. ಕುವೆಂಪು ಅವರ ಪ್ರಖರ ವೈಚಾರಿಕತೆ, ವರ್ಣಾಶ್ರಮ ವಿರೋಧಿ ಬಂಡಾಯ, ಸಾಂಸ್ಥಿಕ ಧರ್ಮಗಳ ತಿರಸ್ಕಾರ, ಪುರೋಹಿತಶಾಹಿಯ ವಿರುದ್ಧದ ಪ್ರತಿಭಟನೆ, ಜಾತ್ಯತೀತತೆಯ ಕಡೆಗಿನ ಅಪಾರ ಒಲವು, ಜ್ಞಾನಪ್ರೀತಿ ಮೊದಲಾದವುಗಳು ಆ ಕಾಲದ ಸನಾತನವಾದಿ ಲೇಖಕ ರಿಂದ ತುಂಬಿದ್ದ ಆ ಕಾಲದಲ್ಲಿ ಒಂದು ಮಹಾಶಕ್ತಿಯಾಗಿ ಕನ್ನಡ ಕೆಳವರ್ಗಗಳ ಸಾಂಸ್ಕೃತಿಕ ಪ್ರಜ್ಞೆಯನ್ನು ಜಾಗೃತಗೊಳಿಸಿದ್ದರಿಂದ ಅವರ ಕಾವ್ಯದಲ್ಲಿ ಒಂದು ಸಣ್ಣ ಝರಿಯಾಗಿ ಹರಿದುಬರುವ ಮತೀಯವಾದಿ



ರಾಷ್ಟ್ರೀಯತೆಯನ್ನು ಚರ್ಚಿಸುವ ಅಗತ್ಯ ಕಂಡಿರಲಿಕ್ಕಿಲ್ಲ. ಇತ್ತೀಚಿಗೆ ಸಂಘ ಪರಿವಾರ ಕೂಡ ಕುವೆಂಪು ಅವರ ಭಾವಚಿತ್ರವನ್ನು ತನ್ನ ಕಾರ್ಯಕ್ರಮಗಳಲ್ಲಿ ಬಳಸಿಕೊಳ್ಳ ತೊಡಗಿದಾಗ ಕರ್ನಾಟಕದ ಪ್ರಗತಿಪರ ಮನಸ್ಸುಗಳಿಗೆ ಗಾಬರಿಯಾಗಿತ್ತು. ಅದಕ್ಕಿಂತ ಗಾಬರಿಯ ಸಂಗತಿ ಯೆಂದರೆ, ಸೂಕ್ಷ್ಮವಾಗಿ ನೋಡಿದರೆ ಕುವೆಂಪು ಕಾವ್ಯದ ಮತೀಯ ರಾಷ್ಟ್ರೀಯವಾದಿಯೆಂದು ಹೆಸರಿಸಲಾದ ಹಲವಾರು ಕವಿತೆಗಳಲ್ಲಿ ಕೋಮುವಾದಿ ಚಿಂತನೆಗಳಿಗೆ ಕೂಡ ಪ್ರೇರಣೆ ನೀಡಬಲ್ಲ ಕೆಲವು ಸಂಗತಿಗಳಿರುವುದು. ಕನ್ನಡದ ದೊಡ್ಡ ಕವಿಗಳ ಕಾವ್ಯದ ಇಂಥ ಮುಖಗಳನ್ನು ಚರ್ಚಿಸುವುದರಿಂದ ಅವರ ಕಾವ್ಯದ ಧನಾತ್ಮಕ ಸಂಗತಿ ಗಳನ್ನು ನಿರಾಕರಿಸಿದಂತಾಗುವುದಿಲ್ಲ.

**ಅಭಿವ್ಯಕ್ತಿ ವಿಧಾನ**

ಪುರಾಣ-ಮಹಾಕಾವ್ಯಗಳನ್ನು ಸಮಕಾಲೀನ ಆಶಯ ಗಳಿಗೆ ತಕ್ಕಂತೆ ಮುರಿದು ಕಟ್ಟುವ ಪ್ರಕ್ರಿಯೆ ಕನ್ನಡದ ಮಟ್ಟಿಗೆ ಪಂಪ, ರನ್ನರಷ್ಟು ಪ್ರಾಚೀನ. ಆಧುನಿಕ ಕಾಲದಲ್ಲಿ ಶೂದ್ರಪ್ರಜ್ಞೆಯ ನೆಲೆಯಿಂದ ಕುವೆಂಪು ಆ ಪ್ರಕ್ರಿಯೆಯನ್ನು ಮುಂದುವರಿಸಿದರು. ಬಂಡವಾಳಶಾಹಿ ವ್ಯವಸ್ಥೆ, ರಾಷ್ಟ್ರೀಯತೆಯ ಉಗಮಗಳೊಂದಿಗೆ ಕೋಮುವಾದವೂ ಹುಟ್ಟಿತು. ಹಿಂದೂ ಕೋಮುವಾದ ಹೊಸ ಆಧುನಿಕ ವ್ಯವಸ್ಥೆಯಲ್ಲಿ ವರ್ಣಾಶ್ರಮಾಧಾರಿತ ಸಾಂಸ್ಕೃತಿಕ ರಾಷ್ಟ್ರೀಯತೆಯನ್ನು ಪ್ರತಿಪಾದಿಸುತ್ತ ತನ್ನ ಜಾತಿ ಮತ್ತು ವರ್ಗ ಹಿತಾಸಕ್ತಿಗೆ ಹೋರಾಟಗಳನ್ನು ರೂಪಿಸಿತು. ಮುಸ್ಲಿಮರಂತೆ ಶೂದ್ರವರ್ಗ ಕೂಡ ತನ್ನ ಪ್ರಾತಿನಿಧ್ಯಕ್ಕಾಗಿ ಪ್ರತಿ ಹೋರಾಟಗಳನ್ನು ರೂಪಿಸಿತು. ಬ್ರಾಹ್ಮಣ್ಯದ ವಿರುದ್ಧ ಶೂದ್ರ ಸಮಾನತೆಯನ್ನು ಪ್ರತಿಪಾದಿಸುವ ತುರ್ತಿನಲ್ಲಿ ಕುವೆಂಪು ಅವರು ಹಿಂದು ಪುರಾಣ ಹಾಗೂ ಮಹಾಕಾವ್ಯ ಗಳನ್ನು ಮುರಿದು ಕಟ್ಟುವ ಕ್ರಮವನ್ನು ಅನುಸರಿಸಿದರು. ಅವರ 'ಶೂದ್ರ ತಪಸ್ವಿ', 'ಬೆರಳ್‌ಗೆ ಕೊರಳ್', 'ಕಾನೀನ' ಮೊದಲಾದವು ಇಂಥ ಪ್ರಯತ್ನಗಳಾಗಿದ್ದವು. ಶೂದ್ರ, ದಲಿತ ವರ್ಗಗಳ ಪ್ರಾತಿನಿಧ್ಯದ ಪ್ರಶ್ನೆಯನ್ನು ಹಿಂದಕ್ಕೆ ಸರಿಸಲು ಕೋಮುವಾದವು ವಸಾಹತುಶಾಹಿ ಚರಿತ್ರೆಯನ್ನು ಆಶ್ರಯಿಸಿತು. ಮುಸ್ಲಿಮರ ರಾಕ್ಷಸೀಕರಣ ನಡೆಯಿತು. ಶೂದ್ರವರ್ಗ ಕೂಡ ಗತಕಾಲದ ವೈಭವೀಕರಣ ಹಾಗೂ ಮಧ್ಯಕಾಲೀನ ಚರಿತ್ರೆಯ ವಿಕೃತೀಕರಣದ ಪ್ರಭಾವದಿಂದ ಮುಕ್ತವಾಗಲಿಲ್ಲ. ಹೀಗಾಗಿ ಕುವೆಂಪು ಅವರಂಥ ಕವಿಗಳು ಕೂಡ ಶೂದ್ರ ಪ್ರಾತಿನಿಧ್ಯದ ಒತ್ತಡದಲ್ಲಿ ಹಿಂದೂ ಪುರಾಣ ಕಾವ್ಯಗಳನ್ನು ಮುರಿದುಕಟ್ಟಿದ ವಿಧಾನಕ್ಕೆ ತೀರ ವಿರುದ್ಧವಾದ ಮಾದರಿಯಲ್ಲಿ ಮತೀಯ ರಾಷ್ಟ್ರೀಯ ವಾದವನ್ನು ಪ್ರತಿಪಾದಿಸಲು ಕೂಡ ಪುರಾಣ ಕಾವ್ಯಗಳನ್ನು ಮುರಿದು ಕಟ್ಟಿದರು. 'ಹಂಪೆಯ ಭೀಮ' ಅಂಥ ಒಂದು ಹೊಸ ಮತೀಯ ರೂಪಕವಾಗಿದೆ.

ಈ ಭೀಮನು, ಕೋಟೆ ಹೆಬ್ಬಾಗಿಲಲ್ಲಿ ನಿಂತು ನಿಟ್ಟುಸಿರುಬಿಡುತ್ತ ಮೂಕನಾಗಿ ಕಂಬನಿ ಸುರಿಸುತ್ತಿದ್ದಾನೆ. ರಾಜ-ಮಹಾರಾಜರು, ಮಂತ್ರಿಗಳು, ಸೈನಿಕರು, ಕವಿಗಳಿಂದ ವೈಭವೋಪೇತವಾದ ಸಾಮ್ರಾಜ್ಯವು ಸರ್ವನಾಶವಾಗಿ ಈಗ ಹಾಳೂರಾಗಿರುವ ಹಂಪೆಯನ್ನು ಕಂಡು ಮರುಗುತ್ತ ಶೂನ್ಯಮನಸ್ಕನಾಗಿ ಬಾಗಿಲನ್ನು ಕಾಯುತ್ತಿದ್ದಾನೆ. ಕಾರಣ ಅವನಿಗೆ ಮುಸ್ಲಿಮರ ಆಕ್ರಮಣದಿಂದ ಹಂಪೆಯನ್ನು ಕಾಪಾಡಲು ಸಾಧ್ಯವಾಗಿಲ್ಲ. ವಿಜಯನಗರದ ಚರಿತ್ರೆಯ ವಿಕೃತೀಕರಣದ ಗಾಢ ಪ್ರಭಾವದಲ್ಲಿ ಅದನ್ನೊಂದು ಶಾಶ್ವತ ಆಳದ ಗಾಯವೆಂದು ಪರಿಭಾವಿಸಿದ ಕರ್ನಾಟಕದ ಸಾಂಸ್ಕೃತಿಕ ಮನಸ್ಸುಗಳು ಮಧ್ಯಕಾಲದ ಕನ್ನಡಿಗನಲ್ಲಿ ಹೇಡಿತನ, ಹೆಣ್ಣುತನಗಳನ್ನು ಹುಡುಕಿದವು. ಕುವೆಂಪು ಅವರೇ 'ಐನೂರು ವರ್ಷದ ಸಾಮ್ರಾಜ್ಯವನ್ನು ಈ ಗತಿಗೆ ತಂದ ಹೆಣ್ಣು ಭಕ್ತಿಯ ಕುಣಿತ ಸಾಕೆಮಗೆ ಇಂದು' ಎಂದು ಮತ್ತೊಂದು ಕವಿತೆಯಲ್ಲಿ ಬರೆಯುತ್ತಾರೆ. ಮುಸ್ಲಿಮರ ದುರಾಕ್ರಮಣಕ್ಕೆ ತುತ್ತಾದ ಹಂಪೆಯನ್ನು ಕಾಪಾಡಲಾಗದ ಹೇಡಿಯೂ ಹೆಣ್ಣಿಗನೂ ಆದ ಕನ್ನಡಿಗನನ್ನು ಕಲ್ಪಿಸಿ ಕೊಳ್ಳಲಾಯಿತು. ಅಂಥ ಮತೀಯ ಚಿಂತನೆಗೆ 'ಹಂಪೆಯ ಭೀಮ' ಒಂದು ಯೋಗ್ಯ ರೂಪಕವಾಗಿ ಮೈದಾಳಿದ. ಪುರೋಗಾಮಿ ಚಿಂತನೆಗೆ ಪುರಾಣ-ಮಹಾಕಾವ್ಯಗಳನ್ನು ಮುರಿದು ಕಟ್ಟಿದ ಕುವೆಂಪು ಇಲ್ಲಿ ಪ್ರತಿಗಾಮಿ ಚಿಂತನೆಗೆ 'ಬಲಭೀಮ'ನನ್ನು ಕಂಬನಿಗರೆವ, ನಿಟ್ಟುಸಿರಿಡುವ, ವೀರತನ ಕಲ್ಲಾದ, ಮನದಲ್ಲಿ ಹಾಳು ಹಂಪೆಗೆ ಕರಗುವ ಹಾಗೂ ಅದನ್ನು ಕಾಯುವ 'ಹೆಣ್ಣಿಗ ಭೀಮ'ನನ್ನಾಗಿ ಪರಿವರ್ತಿಸಿದರು. ಈತ ವಿಜಯನಗರದ ಪತನಕ್ಕಾಗಿ ದುಃಖಿಸುವ ಎಲ್ಲ ಕನ್ನಡಿಗರ ಪ್ರತಿನಿಧಿಯಾಗಿ ಬೆಳೆದನು. ಪಂಪ, ರನ್ನರ ಕಾವ್ಯದ ಮದೋನ್ಮತ್ತ ರುದ್ರ ಮಾರುತಿ ನಮಿಸುವ ಹಿಮಾಲಯದಂತಾಗಿದ್ದಾನೆ. ಮುಸ್ಲಿಮ್ ಪ್ರಭುತ್ವಕ್ಕೆ ಹಿಮಾಲಯ ಸದೃಶ ಕನ್ನಡಿಗ ಗುಲಾಮನಾದ ಆತಂಕವನ್ನು ಕವಿ ಹಂಪೆಯ ಭೀಮನಲ್ಲಿ ಅರಸುತ್ತಾರೆ. ಕುವೆಂಪು ಮತೀಯವಾದಿ ಚರಿತ್ರೆಯ ಕೆಲವು ಲಕ್ಷಣ ಗಳನ್ನು ಹಿಂದು-ಮುಸ್ಲಿಮ್ ಸಂಬಂಧದಲ್ಲಿ ಸ್ವೀಕರಿಸಿದಂತೆ ತೋರುತ್ತದೆ. 'ಹೆಣ್ಣಿಗ' ಎಂಬ ಮಹಿಳಾ ಅಪಮಾನೀ ಕರಣದ ಅಭಿವ್ಯಕ್ತಿಗೂ ಕೋಮುವಾದಿ ಚಿಂತನೆಗೂ ಆಂತರಿಕ ಸಂಬಂಧವಿದೆ.

ಕುವೆಂಪು 'ಹಂಪೆಯ ಭೀಮ'ನ ರೂಪಕಕ್ಕೆ ಮರಳಿ ಕ್ಷಾತ್ರತೇಜವನ್ನು ತುಂಬಿ ಆ ಮೂಲಕ ಕನ್ನಡಿಗ ಮರಳಿ ಶೂರ, ಧೀರ ಪುರುಷನಾಗಬೇಕೆಂದು ಹಂಬಲಿಸುತ್ತಾರೆ. ಆತ ನಿರಂತರವಾಗಿ ಕನ್ನಡಿಗರಿಗೆ ಅವರ ಹೇಡಿತನವನ್ನು ನೆನಪಿಸಿ ಕೆಚ್ಚು-ನೆಚ್ಚುಗಳನ್ನು ತುಂಬುವ ಶಾಶ್ವತ ಮಾಧ್ಯಮ ವಾಗಬೇಕೆಂದು ಬಯಸುತ್ತಾರೆ. ಕನ್ನಡಿಗರ ಮನಸ್ಸಿನಲ್ಲಿ ಮುಸ್ಲಿಮ್ ದ್ವೇಷವನ್ನು ನಿರಂತರವಾಗಿ ಪ್ರಸಾರಮಾಡುವ ಹಂಬಲದ ಭೀಮ ರೂಪ ತಾಳುತ್ತಾನೆ. ವಿಜಯನಗರ ಚರಿತ್ರೆಯ ತಿರುಚುವಿಕೆಯ ಪರಿಣಾಮದಿಂದ ರೂಪ ತಾಳಿದ ಕೋಮುವಾದಿ ಕನ್ನಡಿಗನನ್ನು ಸಮರ್ಥವಾಗಿ ಧ್ವನಿಸುವ ರೂಪಕವಾಗಿ ಹಂಪೆಯ ಭೀಮ ಬೆಳೆದು ನಿಲ್ಲುತ್ತಾನೆ. ಹಂಪೆಯ ಭೀಮ ಮತೀಯ ರಾಷ್ಟ್ರೀಯ ವಾದಿಯೂ ಹೌದು, ಮತೀಯ ರಾಷ್ಟ್ರೀಯವಾದದ ಪ್ರಚಾರಕನೂ ಹೌದು. ಕವಿಯ ಸೃಜನಶೀಲತೆಯ ಸ್ವರೂಪ ವನ್ನು ತೀರ್ಮಾನಿಸುವಲ್ಲಿ ಮತೀಯ ಹಾಗೂ ನಿರ್ಮತೀಯ ಚರಿತ್ರೆಗಳ ಪ್ರಭಾವವನ್ನು ಕುರಿತು ಈ ಕವಿತೆ ಬೆಳಕು ಚೆಲ್ಲುತ್ತದೆ. ಕವಿಯೊಬ್ಬ ಚರಿತ್ರೆಯನ್ನು ಸ್ವೀಕರಿಸುವಾಗ ವಹಿಸಬೇಕಾದ ಎಚ್ಚರದ ಬಗ್ಗೆ ತಿಳುವಳಿಕೆ ನೀಡುತ್ತದೆ.

ಕುವೆಂಪು ಅವರ ಕಾವ್ಯದಲ್ಲಿ 'ಹಂಪೆಯ ಭೀಮ' ಬೆಳೆಯುತ್ತ ಹೋಗುತ್ತಾನೆ. 'ಪ್ರತಿಗವಾಕ್ಷಿ' ಎಂಬ ಕವಿತೆ (೧೯೪೭)ಯಲ್ಲಿ ಮುಸ್ಲಿಮರು ಹಿಂದೂಗಳನ್ನು ಪಶ್ಚಿಮ ಪಂಜಾಬಿನಲ್ಲಿ ಭೀಕರವಾಗಿ ಹಿಂಸೆಗೀಡುಮಾಡಿದ ಸುದ್ದಿಯನ್ನೋದಿ,

> ಧೈರ್ಯದ್ರುಮ ಭೀಮನ ಕರೆ ಅವನಿನ್ನೂ ಸತ್ತಿಲ್ಲ
> ಅವನ ರೋಷದ ಅಗ್ನಿ ಸಮುದ್ರಂ ಇನ್ನೂ ಬತ್ತಿಲ್ಲ
> ಅಣ್ಣನ ಕಣ್ಣ ಸನ್ನೆಯ ಸಾತ್ವಿಕವಿನ್ನೂ ಉರಿ ಹೊತ್ತಿಲ್ಲ
> ...ದುಶ್ಶಾಸನವಧೆ ತಪ್ಪಿಲ್ಲ

– ಎಂದು ಬರೆಯುತ್ತಾರೆ. ಪೂರ್ವ ಬಂಗಾಳದ ನೌಖಾಲಿ ಕೋಮು ಗಲಭೆಯ ಸಂದರ್ಭದಲ್ಲಿ ('ಕವನ ಮಾತ್ರವೇ ಕೇಳ್ ಶಕ್ತಿ ಮಂತ್ರ', ೧೯೪೬) :

> ಉದ್ಭವಿಸು ಬಾ ಇಂದೆ ಹಿಂದುವಿನ ಭುಜಭುಜಗ
> ಘರ್ಷಣೆಗೆ
>
> ಹಂಬೆತನವಳಿವಂತೆ
> ಓ ಕೌರವ ಭಯಂಕರ ಸಮೀರಕುಮಾರ
> ಹೇ ಭೀಮಸೇನ

– ಎಂದು ಹಿಂದುವಿನ ಹೃದಯಕ್ಕೆ ಭೀಮಸೇನನನ್ನು ಆಹ್ವಾನಿಸುತ್ತಾರೆ. ಹಿಂದು-ಮುಸ್ಲಿಮರನ್ನು ಪಾಂಡವರು-ಕೌರವರು ಎಂದು ವಿಭಾಗಿಸುತ್ತಾರೆ. ಭೀಮ ಮಾತ್ರವಲ್ಲ ಕೃಷ್ಣ, ರಾಮರೂ ಮುಸ್ಲಿಮರ ಸಂಹಾರಕ್ಕೆ ಪ್ರತ್ಯಕ್ಷ ರಾಗುತ್ತಾರೆ. ರಾಮ-ರಾವಣ ಎಂದು ವಿಭಾಗೀಕರಣವನ್ನು ಮಾಡಿ ಜಿನ್ನಾನನ್ನು ರಾವಣನಿಗೆ ಹೋಲಿಸುವುದುಂಟು. ಕೋಮುಗಲಭೆಗಳಲ್ಲಿ ಹಿಂದುಗಳಿಗೆ ಮಾತ್ರ ಮಿಡಿದ ಕುವೆಂಪು ಕವಿತೆಗಳು ಹಿಂದೂಗಳನ್ನು ಹಿಂಸೆಗೆ ಪ್ರಚೋದಿಸುತ್ತವೆ. ಈ ಎಲ್ಲ ಭಾವಗಳು 'ಹಂಪೆಯ ಭೀಮ' ಕವಿತೆಯಲ್ಲಿ ಸುಪ್ತವಾಗಿ ಅಡಕವಾಗಿವೆ.

ಈ ಕವಿತೆ ಹಾಡಿನ ರೂಪದಲ್ಲಿದೆ. ಒಂದು ತೀವ್ರವಾದ ಲಯಗಾರಿಕೆಯಿಂದ ಓದುಗರನ್ನು ತಟ್ಟುತ್ತದೆ. ಹಂಪೆಯ ಕಲ್ಪಿತ ಚರಿತ್ರೆಯನ್ನು ಕುರಿತಾದ ಪ್ರಾಮಾಣಿಕವಾದ ನೋವು ಹಾಡಾಗಿ ರೂಪ ತಾಳಿದೆ. ಹಂಪೆಯ ಭೀಮನ ರೂಪಕದಷ್ಟೇ ಇಲ್ಲಿಯ ಲಯಗಾರಿಕೆಯೂ ಮತೀಯ ಚಿಂತನೆಗಳನ್ನು ಪ್ರೇರೇಪಿಸಲು ಸಮರ್ಥವಾಗಿದೆ. ಕವಿಯೊಬ್ಬನ ಪ್ರತಿಭೆ ರೂಪಕಶಕ್ತಿ, ಛಂದಸ್ಸಿನ ಮೇಲಿನ ಮಿಡಿತಗಳು ಪ್ರತಿಗಾಮಿ ರಾಜಕೀಯ ಚಿಂತನೆಗಳನ್ನು ಪ್ರಸಾರಮಾಡುವ ವೈರುಧ್ಯವನ್ನಿಲ್ಲಿ ಗಮನಿಸಬಹುದು. ಚರಿತ್ರೆಯ ಅಪಕಲ್ಪನೆಯಿಂದ ಸೃಜನಶೀಲತೆಯ ಮತೀಕರಣದ ಸ್ವರೂಪವನ್ನು ತಿಳಿಯಬಹುದಾಗಿದೆ.

**ಡಾ|| ಎಂ. ಡಿ. ಒಕ್ಕುಂದ**
'ನೆಮ್ಮದಿ', ನಂ. ೧೨೪, ಸಿಐಟಿಬಿ ಕಾಲೋನಿ, ಶ್ರೀನಗರ
ಧಾರವಾಡ - ೫೮೦ ೦೦೩





ಸಿ. ಯತಿರಾಜು

ಬಟ್ಟಾ ಮತ್ತು ಪರ್‌ಸೌಲ್, ಗ್ರೇಟರ್ ನೋಯ್ಡಾ ಸಮೀಪದ ಎರಡು ಜೋಡಿ ಗ್ರಾಮಗಳು. ಇದೇ ಮೇ ೭ ಮತ್ತು ೮ರಂದು ಈ ಎರಡು ಹಳ್ಳಿಗಳಲ್ಲಿ ಜನರ ಗುಂಪು ಮತ್ತು ಅಧಿಕಾರಿಗಳು ಪೊಲೀಸರ ನಡುವೆ ಒಂದು ಮಹಾ ರಣರಂಗವೇ ನಡೆದು ಇಬ್ಬರು ಪೊಲೀಸರು ಸೇರಿದಂತೆ ೮ ಮಂದಿ ಪ್ರಾಣ ಕಳೆದುಕೊಂಡರು, ಸುಮಾರು ನೂರು ಮಂದಿ ಕಾಣೆಯಾಗಿದ್ದಾರೆ. ಪೊಲೀಸರು ಕೂಡಲೇ ಆ ಪ್ರದೇಶದಲ್ಲಿ ಕರ್ಫ್ಯೂ ವಿಧಿಸಿ ಗ್ರಾಮಗಳಲ್ಲಿ ಸಿಕ್ಕ ಸಿಕ್ಕ ಗಂಡಸರನ್ನೆಲ್ಲಾ ಬಂಧಿಸಿ ಕರೆದೊಯ್ದಿದ್ದಾರೆ. ಪೊಲೀಸರ ಬಂಧನಕ್ಕೆ ಹೆದರಿ ಈ ಜೋಡಿ ಗ್ರಾಮದ ಜನ ಊರನ್ನೇ ಬಿಟ್ಟು ಪಲಾಯನ ಮಾಡಿದ್ದಾರೆ. ಈ ಗಲಾಟೆ ಮಾಧ್ಯಮಗಳಲ್ಲಿ ಪ್ರಮುಖ ಸುದ್ದಿಯಾಗಿ ಪ್ರಸಾರವಾಗುತ್ತಿದ್ದಂತೆ ಎಲ್ಲ ವಿರೋಧ ಪಕ್ಷಗಳ ಮುಖಂಡರು ಘಟನಾ ಸ್ಥಳಕ್ಕೆ ರೈತ ಹೋರಾಟಕ್ಕೆ ಸಹಾನುಭೂತಿ ತೋರಿಸಲು ಸಾಲುಗಟ್ಟಿ ಹೋದಾಗ ಉತ್ತರ ಪ್ರದೇಶ ಸರ್ಕಾರ ಅವರನ್ನು ಬಂಧಿಸಿ ಬಿಡುಗಡೆ ಮಾಡಿದೆ. ನೋಯ್ಡಾ ಜಿಲ್ಲೆಯ ದಂಡಾಧಿಕಾರಿ ದೀಪಕ್ ಶರ್ಮಾ ಜನರ ಕಲ್ಲುತೂರಾಟದಲ್ಲಿ ಪೆಟ್ಟುತಿಂದು ಸುರಕ್ಷಾ ಸ್ಥಳಕ್ಕೆ ಧಾವಿಸುತ್ತಿದ್ದ ದೃಶ್ಯಾವಳಿಗಳು ಮತ್ತು ಭಾರತದ ಭಾವಿರಾಜಕುಮಾರನಾಗಿ ರೂಪುಗೊಳ್ಳಲು ಕಸರತ್ತು ಮಾಡುತ್ತಿರುವ ರಾಹುಲ್ ಗಾಂಧಿ ಪೊಲೀಸರ ಕಣ್ಣುತಪ್ಪಿಸಿ ಧರಣಿ ನಿರತ ರೈತರಿಗೆ ಸಾಂತ್ವನ ಹೇಳಿದ್ದು ಅವರ ಜೊತೆ ತಾನೂ ಧರಣಿ ಕುಳಿತದ್ದು ಮಾಧ್ಯಮಗಳಿಗೆ ಅತ್ಯಂತ ರೋಚಕ ಸುದ್ದಿಯಾಗಿ ವಿಜ್ರಂಭಿಸಿತು. ರಾಷ್ಟ್ರೀಯ ರಾಜಧಾನಿಗೆ ಅತ್ಯಂತ ಸಮೀಪದಲ್ಲಿ ಈ ಘಟನೆ ನಡೆದದ್ದರಿಂದ ಇದೊಂದು ಪ್ರಮುಖ ರಾಷ್ಟ್ರೀಯ ಸುದ್ದಿಯಾಗಿ ಬಿಂಬಿಸಲ್ಪಟ್ಟಿತು.

ಹೂಡಿಕೆದಾರರು ಅದೆಷ್ಟು ಹುನ್ನಾರಗಳನ್ನು ಹೆಣೆದು ರೈತರ ಕಣ್ಣಿಗೆ ಮಣ್ಣೆರಚಿ ಅವರ ಫಲವತ್ತಾದ ಭೂಮಿಯನ್ನು ಕಬಳಿಸುತ್ತಿದ್ದಾರೆ, ಅದರಿಂದ ರಿಯಲ್ ಎಸ್ಟೇಟ್ ಧಂಧೆ ನಡೆಸಿ ಸಾವಿರಾರು ಕೋಟಿ ರೂಪಾಯಿಗಳ ಲಾಭ ದೋಚುತ್ತಿದ್ದಾರೆಂಬುದು ಕಣ್ಣಿಗೆ ರಾಚುವಂತೆ ಬಹಿರಂಗವಾಗಿದೆ. ರಾಜಕಾರಣಿಗಳು ಚುನಾವಣೆಗಳಲ್ಲಿ ಮತ ಯಾಚಿಸುವಾಗ ರೈತೋದ್ಧಾರದ ಬಗ್ಗೆ ವಿಪುಲವಾದ ಕಾಳಜಿ ಗೌರವಗಳನ್ನು ಪ್ರದರ್ಶಿಸಿ ಗೆದ್ದ ನಂತರ ಚುನಾವಣಾ ಖರ್ಚಿಗೆ ಹಣ ನೀಡಿದವರ ಹಿತ ಕಾಯಲು ಸಾರ್ವಜನಿಕ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ಆ ಲೂಟಿಯಲ್ಲಿ ಪಾಲನ್ನು ಪಡೆಯುತ್ತಾರೆಂಬುದನ್ನು ಬಟ್ಟಾ-ಪರ್‌ಸೌಲ್ ಘಟನಾವಳಿಗಳು ಬಹಿರಂಗಪಡಿಸುತ್ತವೆ.

**ಶ್ರೀಮಂತರ ಚೆಲ್ಲಾಟ**

ಉತ್ತರ ಪ್ರದೇಶದ ಸರ್ಕಾರ ೨೦೦೭ರಲ್ಲಿ ಒಂದು ಮಹತ್ವಾಕಾಂಕ್ಷೆಯ ಯೋಜನೆಯನ್ನು ರೂಪಿಸಿತು. ಅತ್ಯಂತ ವಿಶಾಲವಾದ ರಾಜ್ಯದಲ್ಲಿ ಮೂಲ ಸೌಕರ್ಯಗಳಲ್ಲೊಂದಾದ ಉತ್ತಮ ಹೆದ್ದಾರಿಗಳನ್ನು ನಿರ್ಮಿಸುವ ಭಾಗವಾಗಿ 'ಯಮುನಾ ಎಕ್ಸ್‌ಪ್ರೆಸ್ ಹೈವೇ' ಯೋಜನೆ ಅದು. ಈ ವೇಗದೂತ ಹೆದ್ದಾರಿ ಗ್ರೇಟರ್ ನೋಯ್ಡಾ ಎಂಬ ಕೈಗಾರಿಕಾ ನಗರವನ್ನು ಇತಿಹಾಸ ಪ್ರಸಿದ್ಧವಾದ ಆಗ್ರಾ ಪಟ್ಟಣದೊಂದಿಗೆ ಜೋಡಿಸುವುದಾಗಿತ್ತು. ೧೬೫ ಕಿ.ಮೀ. ಅಂತರದಲ್ಲಿರುವ ಈ ಪಟ್ಟಣಗಳ ನಡುವೆ ಓಡಾಡಲು ಈಗಾಗಲೇ ಒಂದು ರಾಷ್ಟ್ರೀಯ ಹೆದ್ದಾರಿ ಇದೆ. ಆ ದಾರಿಯಲ್ಲಿ ಪ್ರಯಾಣದ ಸಮಯ ಸುಮಾರು ನಾಲ್ಕು ಗಂಟೆಗಳಾಗುತ್ತಿತ್ತು. ವಿದೇಶಿ ನವ ನವ ಬ್ರಾಂಡ್ ಕಾರುಗಳನ್ನು ಕೊಂಡು ಮೆರೆಯುತ್ತಿರುವ ಶ್ರೀಮಂತರ ಕಾರುಗಳಿಗೆ ಅದೇ ದರ್ಜೆಯ ರಸ್ತೆಗಳು ಬೇಡವೆ? ಆ ಕಾರುಗಳು ಬಿರುಗಾಳಿಯೊಂದಿಗೆ ಮಾತನಾಡುತ್ತಾ ೧೬೫ ಕಿ. ಮೀ. ಹಾರಿಕೊಂಡು ೨ ಗಂಟೆಗಳಲ್ಲಿ ಆಗ್ರಾ ತಲುಪಿದರೆ ಆ ಕಾರುಗಳನ್ನು ಹೊಂದಿದ್ದಕ್ಕೂ ಮತ್ತು ಕೊಂಡದ್ದಕ್ಕೂ ಸಾರ್ಥಕ. ಅಲ್ಲದೆ, ವಿದೇಶದ ಗಣ್ಯ ಅತಿಥಿಗಳನ್ನು, ಶ್ರೀಮಂತ ಹೂಡಿಕೆದಾರರನ್ನು, ಹೆಮ್ಮೆಯ ಪ್ರವಾಸಿ ತಾಣಕ್ಕೆ ಕರೆದೊಯ್ದು ತೋರಿಸಲು ವಿಲಾಸಿ ಕಾರುಗಳಿಗೆ ನಾಲ್ಕು ಗಂಟೆ ಹಿಡಿದರೆ ಅಂತರರಾಷ್ಟ್ರೀಯ ಮಟ್ಟದಲ್ಲಿ ನಮ್ಮ ಘನತೆ ಏನಾಗಬೇಡ! ಭಾರತವನ್ನು ಪ್ರಕಾಶಿಸಬೇಕು. ಬರೀ ರಸ್ತೆಗಳಿದ್ದರೆ ಸಾಕೆ, ಹಾಗೇ ದಾರಿಯಲ್ಲಿ ಸಾಗುವಾಗ ಉಂಟಾಗಬಹುದಾದ ಆಯಾಸ ದಣಿವುಗಳನ್ನಾರಿಸಿಕೊಳ್ಳಲು ವಿದೇಶಿ ದರ್ಜೆಯ ಹೋಟೆಲ್‌ಗಳು ಮೋಟೆಲ್‌ಗಳು

# ಭೂ ಪರಿಹಾರ ನಮಗೆ ಬೇಡ; ಲಾಭದ ಪಾಲು ಬೇಕೇ ಬೇಕು

ಹೂಡಿಕೆದಾರರು ಅದೆಷ್ಟು ಹುನ್ನಾರಗಳನ್ನು ಹೆಣೆದು ರೈತರ ಕಣ್ಣಿಗೆ ಮಣ್ಣೆರಚಿ ಅವರ ಫಲವತ್ತಾದ ಭೂಮಿಯನ್ನು ಕಬಳಿಸುತ್ತಿದ್ದಾರೆ, ಅದರಿಂದ ರಿಯಲ್ ಎಸ್ಟೇಟ್ ಧಂಧೆ ನಡೆಸಿ ಸಾವಿರಾರು ಕೋಟಿ ರೂಪಾಯಿಗಳ ಲಾಭ ದೋಚುತ್ತಿದ್ದಾರೆಂಬುದು ಕಣ್ಣಿಗೆ ರಾಚುವಂತೆ ಬಹಿರಂಗವಾಗಿದೆ. ರಾಜಕಾರಣಿಗಳು ಚುನಾವಣೆಗಳಲ್ಲಿ ಮತ ಯಾಚಿಸುವಾಗ ರೈತೋದ್ಧಾರದ ಬಗ್ಗೆ ವಿಪುಲವಾದ ಕಾಳಜಿ ಗೌರವಗಳನ್ನು ಪ್ರದರ್ಶಿಸಿ ಗೆದ್ದ ನಂತರ ಚುನಾವಣಾ ಖರ್ಚಿಗೆ ಹಣ ನೀಡಿದವರ ಹಿತ ಕಾಯಲು ಸಾರ್ವಜನಿಕ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ಆ ಲೂಟಿಯಲ್ಲಿ ಪಾಲನ್ನು ಪಡೆಯುತ್ತಾರೆಂಬುದನ್ನು ಬಟ್ಟಾ-ಪರ್‌ಸೌಲ್ ಘಟನಾವಳಿಗಳು ಬಹಿರಂಗಪಡಿಸುತ್ತವೆ.

ಬೇಡವೆ? ತಿಂದದ್ದು ಹೆಚ್ಚಾದ ಮೇಲೆ ಅದನ್ನು ಕರಗಿಸಲು ಒಂದಷ್ಟು ಸಮಯ ಆಟವಾಡಲು ಕ್ರೀಡಾನಗರಗಳು ಇರಬೇಡವೆ? ಹೀಗೆ ಅತ್ಯಂತ ಸೃಜನಶೀಲವಾಗಿ ಬೆಳೆಯುತ್ತಾ ಬಂದ ಯಮುನಾ ಎಕ್ಸ್‌ಪ್ರೆಸ್ ಹೈವೇ ಯಾವ ವರ್ಗದ ಜನರ ಸೇವೆಗೆ ತಯಾರಾಗುತ್ತಿದೆ ಎಂಬುದು ಇದರಿಂದ ಸ್ಪಷ್ಟ.

**ಭೂಮಿಯ ನುಂಗಣ್ಣಗಳು**

ಈ ರಸ್ತೆ ನಿರ್ಮಾಣಕ್ಕೆ ತಗಲಬಹುದಾದ ಅಂದಾಜು ವೆಚ್ಚ ಕೇವಲ ರೂ. ೯೫೦೦ ಕೋಟಿ. ಇಷ್ಟೊಂದು ಹಣ ನಮ್ಮ ಬಡ ಸರ್ಕಾರಗಳ ಬಳಿ ಎಲ್ಲಿಂದ ಬರಲು ಸಾಧ್ಯ? ಸಿಕ್ಕ ಸಿಕ್ಕಲ್ಲೆಲ್ಲಾ ಸೋರಿಹೋಗುವ ಸರ್ಕಾರಿ ಆದಾಯದಿಂದ ಈ ಯೋಜನೆ ಪೂರೈಸಲು ಸಾಧ್ಯವೆ? ಅದಕ್ಕಾಗಿಯೇ ಒಂದು ಹೊಸ ಅಭಿವೃದ್ಧಿ ಮಂತ್ರವನ್ನು ರೂಪಿಸಲಾಗಿದೆ. ನಮ್ಮ ಸರ್ಕಾರಿ ಆರ್ಥಿಕ ತಜ್ಞರ ಪರಿಭಾಷೆಯಲ್ಲಿ ಇದನ್ನು ''ಸಾರ್ವಜನಿಕ ಖಾಸಗಿ ಪಾಲುದಾರಿಕೆ'' ಎಂದು ಕರೆಯಲಾಗುತ್ತದೆ. ಬಂಡವಾಳಗಾರರೇ ಈ ರಸ್ತೆಯನ್ನು ನಿರ್ಮಿಸಿಕೊಡುತ್ತಾರೆ ಮತ್ತು ಅದು ನಿರ್ಮಾಣಗೊಂಡ ನಂತರ ೩೬ ವರ್ಷಗಳ ಕಾಲ ಆ ರಸ್ತೆಗಳಲ್ಲಿ ಓಡಾಡುವ ವಾಹನಗಳಿಂದ ಟೋಲ್ ವಸೂಲ್ ಮಾಡಿಕೊಳ್ಳುವ ಅವಕಾಶ ಕೊಟ್ಟರೆ ಸಾಕು. ಅದಿಷ್ಟೇ ಸಾಕೇ? ಈ ರಸ್ತೆಗೆ ಬೇಕಾಗಬಹುದಾದ ಜಮೀನು ಎಷ್ಟಾಗಬಹುದೆಂದು ಅವರೇ ಲೆಕ್ಕ ಹಾಕಿ ಸಿದ್ಧ ಮಾಡಿಟ್ಟುಕೊಂಡಿದ್ದಾರೆ. ಸೂಪರ್ ಹೈವೇ ಕಡತಗಳನ್ನು ಸೂಪರ್‌ಸಾನಿಕ್ ವೇಗದಲ್ಲಿಯೇ ಓಡಾಡಿಸಿ ಒಪ್ಪಿಗೆ ಪಡೆಯಬೇಕು. ಈ ಅಭಿವೃದ್ಧಿಯ ಧಾವಂತಕ್ಕೆ ಅಧಿಕಾರಶಾಹಿ ವಿಳಂಬ ನೀತಿ, ಆಕ್ಷೇಪಣೆಗಳ ಮಹಾಪೂರ, ಲಂಚ ರುಷುವತ್ತುಗಳಿಗೆ ತುತ್ತಾದರೆ ಅಭಿವೃದ್ಧಿ ಕುಂಠಿತವಾಗುತ್ತೆ. ಆದ್ದರಿಂದ ಸರ್ಕಾರಕ್ಕೆ ಅದಾವುದರ ರೇಜಿಗೆ ಬೇಡ. ಇಡೀ ಯೋಜನಾ ವರದಿಯನ್ನು ಖಾಸಗಿ ಕಂಪನಿಗಳೇ ಅತ್ಯಂತ ವಿವರವಾಗಿ ತಯಾರಿಸಿ ನೀಡುತ್ತವೆ. ನೀವು ಅವುಗಳಿಗೆ ಅನುಮೋದನೆಯ ಮೊಹರನ್ನೊತ್ತಿದರೆ ಸಾಕು. ಅವರು ತಯಾರಿಸಿರುವ ಅಂದಾಜಿನಂತೆ ಈ ಯೋಜನೆಗೆ ಸುಮಾರು ೪೩,೦೦೦ ಹೆಕ್ಟೇರ್ ಭೂಮಿ ಬೇಕು. ಇಷ್ಟೊಂದು ಭೂಮಿಯನ್ನು ಪಡೆಯಲು ೧,೧೯೧ ಹಳ್ಳಿಗಳನ್ನು ಈ ಯೋಜನಾ ವ್ಯಾಪ್ತಿಗೆ ತರಲು ಘೋಷಣೆಯನ್ನು ಹೊರಡಿಸಲಾಗಿದೆ. ಈ ರಸ್ತೆಯ ಆಸುಪಾಸಿನಲ್ಲಿ ನಿರ್ಮಾಣಗೊಳ್ಳಲಿರುವ ಹೈಟೆಕ್ ನಗರಗಳೂ ೩೩೪ ಹಳ್ಳಿಗಳ ೭ ಲಕ್ಷ ಜನರನ್ನು ಬಾಧಿಸಲಿವೆ. ಹೀಗೆ ವಶಪಡಿಸಿಕೊಳ್ಳಲಾಗುವ ಭೂಮಿಯ ಶೇಕಡ ೯.೩ರಷ್ಟು ಭೂಮಿಯನ್ನು ಮಾತ್ರ ಅಷ್ಟಪಥ ರಸ್ತೆ ನಿರ್ಮಾಣಕ್ಕೆ ಬಳಸಿಕೊಳ್ಳಲಾಗುತ್ತದೆ. ಉಳಿದ ಶೇಕಡ ೯೦.೭ರಷ್ಟು ಭೂಮಿಯನ್ನು ವಿಲಾಸಿ ತಾಣಗಳನ್ನು ರಸ್ತೆಯ ಇಕ್ಕೆಲಗಳಲ್ಲಿ ಅಲ್ಲಲ್ಲಿ ಉದ್ದಕ್ಕೂ ನಿರ್ಮಿಸುತ್ತಾ ಸಾಗಿ, ಭರ್ಜರಿ ರಿಯಲ್ ಎಸ್ಟೇಟ್ ಧಂಧೆಗೆ ವಿನಿಯೋಗಿಸಿಕೊಂಡಾಗ ಹೂಡಿಕೆದಾರರಿಗೆ ಲಾಭದ ಸುರಿಮಳೆಯೇ ಸುರಿಯುತ್ತದೆ. ಈ ಲಾಭದ ಸುರಿಮಳೆಯ ಅಲ್ಪ ಸ್ವಲ್ಪ ಭಾಗವನ್ನು ರಾಜಕಾರಣಿಗಳ ಮತ್ತು ಅಧಿಕಾರಿಗಳ ಬಾಯಿಗೆ ಹಾಕಿ ಅವರನ್ನು ಈ ಯೋಜನೆಗಳ ನಿಷ್ಠಾವಂತ ರಕ್ಷಕ ಕಾಲಾಳುಗಳನ್ನಾಗಿ ಮಾಡಿಕೊಂಡು ಅವರು ಈ ಯೋಜನೆಗಳ ಗುಣಗಾನ ಮಾಡಲಷ್ಟೇ ಬಾಯಿ ಬಿಡಬೇಕು. ಇದ್ದಂತೆ ಬಾಯಿ ಹೊಲಿದುಕೊಂಡು ತೆಪ್ಪಗೆ ಬಿದ್ದಿರುವಂತೆ ಮಾಡಿಕೊಂಡಿದ್ದಾರೆ ಈ ನಮ್ಮ ಹೂಡಿಕೆದಾರರು.

ಈ ಸೂಪರ್ ಹೈವೇಯನ್ನು ನಿರ್ಮಿಸಲು ಗುತ್ತಿಗೆ ಪಡೆದಿರುವ ಜೆ. ಪಿ. ಇನ್‌ಫ್ರಾಟೆಕ್ ಲಿಮಿಟೆಡ್ ಕಂಪನಿ ಅದರ ಆಜುಬಾಜಿನಲ್ಲಿ ಸುಮಾರು ೩೫,೦೦೦ ಹೆಕ್ಟೇರ್ ಪ್ರದೇಶದಲ್ಲಿ, ಕೈಗಾರಿಕಾ ನಿವೇಶನಗಳು, ಮಾಹಿತಿ ತಂತ್ರಜ್ಞಾನ ಸಂಸ್ಥೆಗಳು, ಆಧುನಿಕ ಬೃಹತ್ ಗೋದಾಮುಗಳು, ಕ್ರೀಡಾಂಗಣಗಳು, ಸಣ್ಣ ಸಣ್ಣ ಗೃಹ ನಿರ್ಮಾಣ ಯೋಜನೆಗಳನ್ನು ಅಭಿವೃದ್ಧಿ ಪಡಿಸುವುದಾಗಿ ಹೇಳಿಕೊಂಡಿದೆ. ಇನ್ನೂ ಹಲವಾರು ಸಂಸ್ಥೆಗಳು ಈ ಕಂಪನಿಯೊಂದಿಗೆ ಈ ಪ್ರದೇಶದಲ್ಲೇ ಸ್ಪರ್ಧೆಗಿಳಿದಿವೆ. ರಿಯಲ್ ಎಸ್ಟೇಟ್ ಉದ್ಯಮಗಳಾದ ಡಿ.ಎಲ್.ಎಫ್., ಯೂನಿಟೆಕ್, ಪಾರ್ಶ್ವನಾಥ್ ಎಲ್‌ಡೆಕೋ, ಎಮ್ಮಾರ್, ಒಮ್ಯಾಕ್ಸ್, ವೇವ್ ಮುಂತಾದ ಕಂಪನಿಗಳಿಗೆ ಸರ್ಕಾರ ಈಗಾಗಲೇ ಗೃಹ ಮತ್ತು ವಾಣಿಜ್ಯಾಭಿವೃದ್ಧಿಯ ಉದ್ದೇಶಗಳಿಗೆ ಭೂಮಿಯನ್ನು ನಿಗದಿಪಡಿಸಿದೆ. ಮತ್ತೆ ಕೆಲವು ಕಂಪನಿಗಳಿಗೆ ಭೂಮಿ ನಿಗದಿಪಡಿಸಲು ಪ್ರಯತ್ನಗಳು ಸಾಗಿವೆ. ಹೀಗೆ ನೀಡಲಾಗುತ್ತಿರುವ ಭೂಮಿ ಅತ್ಯಂತ ಫಲವತ್ತಾದ ೨-೩ ಬೆಳೆ ಬೆಳೆಯುವ ಭೂಮಿ. ಗ್ರೇಟರ್ ನೋಯ್ಡಾದಿಂದ ಆಗ್ರಾದವರೆಗೆ ನಡೆಸಲಾಗುವ ಅಭಿವೃದ್ಧಿಗೆ ೮೫೦ ಹಳ್ಳಿಗಳ ೧೪ ಲಕ್ಷ ಜನ ಬಾಧಿಸಲ್ಪಡುತ್ತಾರೆಂದು ರಾಷ್ಟ್ರೀಯ ಲೋಕದಳದ ನಾಯಕ ಅಜಿತ್ ಸಿಂಗ್ ಆರೋಪಿಸುತ್ತಾರೆ. ಈ ಆರೋಪಗಳನ್ನು ಸರ್ಕಾರಿ ದಾಖಲೆಗಳು ಪುಷ್ಟೀಕರಿಸುತ್ತವೆ.

**ಜನಿಡೇಶ್ವರ ಪವಾಡಗಳು**

ಗ್ರೇಟರ್ ನೋಯ್ಡಾ ಪ್ರದೇಶವನ್ನು ಅಭಿವೃದ್ಧಿಪಡಿಸಲೆಂದೇ ರೂಪಿತಗೊಂಡಿರುವ ಗ್ರೇಟರ್ ನೋಯ್ಡಾ ಕೈಗಾರಿಕಾಭಿವೃದ್ಧಿ ಪ್ರಾಧಿಕಾರ-ಜನಿಡಾ ಒಂದು ಮಹಾಯೋಜನೆ ಸಿದ್ಧಪಡಿಸಿದೆ. ಅದರ ಪ್ರಕಾರ ಗ್ರೇಟರ್ ನೋಯ್ಡಾದಲ್ಲಿರುವ ಒಟ್ಟು ೪೦,೦೦೦ ಹೆಕ್ಟೇರ್ ಭೂಮಿಯಲ್ಲಿ ೨೧,೫೭೦ ಹೆಕ್ಟೇರ್ ಭೂಮಿಯನ್ನು ವಶಪಡಿಸಿಕೊಂಡು ಅನೇಕ ರೀತಿಯ ಅಭಿವೃದ್ಧಿ ಯೋಜನೆಗಳಿಗೆ ನೀಡಲಾಗುವುದು ಎಂದು ಘೋಷಿಸಿದೆ. ಹೀಗೆ ಆ ಪ್ರದೇಶದಲ್ಲಿ ಲಭ್ಯವಿರುವ ಒಟ್ಟು ಭೂಮಿಯ ಅರ್ಧಕ್ಕಿಂತಲೂ ಅಧಿಕ ಭೂಮಿ (ಶೇಕಡ ೫೪ರಷ್ಟು) ಶ್ರೀಮಂತ ಬಡಾವಣೆಗಳ





ಐಶಾರಾಮಿ ಬಂಗಲೆಗಳಿಗೆ, ಫ್ಲ್ಯಾಟ್‌ಗಳಿಗೆ ಮತ್ತಲ್ಲಿ ವಾಸಿಸುವ ಜನರ ವಿಲಾಸಿ ಹಸಿವನ್ನು ತಣಿಸುವ ಮೋಜಿನ ಹೈಟೆಕ್ ತಾಣಗಳ ಅಭಿವೃದ್ಧಿಗೆ ವಿನಿಯೋಗವಾಗುತ್ತದೆ. ಇಷ್ಟೆಲ್ಲಾ ಅಭಿವೃದ್ಧಿಯ ಮಧ್ಯದಲ್ಲಿ ಕೃಷಿ ಬದುಕಿ ಉಳಿಯಬಲ್ಲದೇ ಎಂಬುದು ಯಕ್ಷ ಪ್ರಶ್ನೆಯಾಗಿದೆ. ಜನಿಡಾ ರೈತರಿಂದ ಭೂಸ್ವಾಧೀನ ಮಾಡಿಕೊಂಡು ಖಾಸಗಿ ಕಂಪನಿಗಳಿಗೆ ಮಾರಿ ಇಲ್ಲವೆ ಲೀಸ್‌ಗೆ ನೀಡಿ ಅಪಾರ ಪ್ರಮಾಣದ ಲಾಭವನ್ನು ಕೊಳ್ಳೆ ಹೊಡೆಯುತ್ತಿದೆ. ಒಬ್ಬ ರಿಯಲ್ ಎಸ್ಟೇಟ್ ದಲ್ಲಾಳಿಯನ್ನೂ ನಾಚಿಸುವ ರೀತಿಯಲ್ಲಿ ಜನಿಡಾ ರೈತರ ಭೂಮಿಯನ್ನು ಭೂಸ್ವಾಧೀನ ಕಾಯ್ದೆ ೧೮೯೪ರ ಎಮರ್ಜೆನ್ಸಿ ಕ್ಲಾಸ್‌ಗಳನ್ನು ಬಳಸಿಕೊಂಡು ಕಬಳಿಸಿ ಅದೇ ಭೂಮಿಯನ್ನು ಖಾಸಗಿ ಅಭಿವೃದ್ಧಿದಾರ ಕಂಪನಿಗಳಿಗೆ ಭಾರಿ ಲಾಭಕ್ಕೆ ಮಾರಿ ಹಣ ಮಾಡಿಕೊಳ್ಳುತ್ತಿದೆ.

೨೦೧೦-೧೧ರಲ್ಲಿ ಜನಿಡಾ ತಾನು ವಶಪಡಿಸಿಕೊಂಡ ಭೂಮಿಯನ್ನು ಖಾಸಗಿ ಕಂಪನಿಗಳಿಗೆ ಮಾರಿ ಇಲ್ಲವೇ ಲೀಸ್ ನೀಡಿ ಬರಾಬರಿ ರೂ. ೧,೩೬೦.೧೦ ಕೋಟಿಗಳ ಲಾಭ ಗಳಿಸಿದೆಯೆಂದರೆ ಅದು ರೈತರಿಗೆ ಯಾವ ಪ್ರಮಾಣದಲ್ಲಿ ಮೋಸ ಮಾಡಿರಬೇಕೆಂಬುದನ್ನು ಊಹಿಸಬಹುದು. ಜನಿಡಾದಿಂದ ಹೆಚ್ಚು ಬೆಲೆಗೆ ಕೊಂಡ ಭೂಮಿಯನ್ನು ಅಭಿವೃದ್ಧಿಪಡಿಸಿದ ಕಂಪನಿಗಳು ಅದನ್ನು ಯಾವ ಬೆಲೆಗೆ ಮಾರಿ ಜನಿಡಾ ಬೆಲೆಯ ನೂರಾರು ಪಟ್ಟು ಲಾಭ ಮಾಡಿಕೊಳ್ಳುತ್ತಿವೆ ಎಂಬುದು ಅತ್ಯಂತ ಗಾಬರಿ ಹುಟ್ಟಿಸುವ ಸಂಗತಿಯಾಗಿದೆ. ತಮ್ಮಿಂದ ಕಸಿದುಕೊಳ್ಳಲ್ಪಟ್ಟ ಭೂಮಿ ಸರ್ಕಾರಿ ಸಂಸ್ಥೆಯೊಂದರ ಮೂಲಕವೇ ಹೆಚ್ಚಿದ ಬೆಲೆಗೆ ಖಾಸಗಿ ಡೆವಲಪರ್ಸ್ ಕಂಪನಿಗಳಿಗೆ ಮಾರಾಟಗೊಂಡು ಇಲ್ಲವೆ ಲೀಸ್ ಮೂಲಕ ಕೈ ಬದಲಾವಣೆಗೊಂಡು ಕೋಟ್ಯಂತರ ರೂ.ಗಳ ಲಾಭಕ್ಕೆ ತಮ್ಮೆದುರೇ ಮಾರಾಟಗೊಳ್ಳುತ್ತಿರುವುದನ್ನು ನೋಡಿಕೊಂಡು ತೆಪ್ಪಗಿರಲು ಹೇಗೆ ಸಾಧ್ಯವಾದೀತು?

ಯಮುನಾ ಎಕ್ಸ್‌ಪ್ರೆಸ್ ಹೆದ್ದಾರಿಯ ಈ ಕರ್ಮಕಾಂಡ ಪ್ರಧಾನವಾಗಿ ಉತ್ತರ ಪ್ರದೇಶದ ರೈತರನ್ನು ಹಾಗೂ ಇಡೀ ದೇಶದ ರೈತರನ್ನು ಜಾಗೃತಗೊಳ್ಳುವಂತೆ ಮಾಡಿದೆ. ಅದು ಸರ್ಕಾರ ಮತ್ತು ಅಭಿವೃದ್ಧಿಯ ಹರಿಕಾರರ ಮೋಸದ ಮುಖವಾಡಗಳನ್ನು ಹರಿದು ಬಿಸಾಡಿ ಅವರ ನಿಜ ಕರಾಳ ಮುಖಗಳನ್ನು ಪ್ರದರ್ಶನಕ್ಕಿಟ್ಟಿದೆ. ಗ್ರೇಟರ್ ನೋಯ್ಡಾದ ಒಬ್ಬ ರೈತ ತಾನು ಕಳೆದುಕೊಳ್ಳಲಿರುವ ಭೂಮಿಗೆ ಚದರ ಮೀಟರ್‌ಗೆ ರೂ. ೮೨೦ ಪಡೆಯುತ್ತಾನೆ. ಆದರೆ ಈ ದರ ಏಕಪ್ರಕಾರವಾಗಿ ದೊರೆಯುವುದಿಲ್ಲ. ನೋಯ್ಡಾದಿಂದ ಭೂಮಿಯು ದೂರ ಹೆಚ್ಚಾದಂತೆ ಅದರ ಬೆಲೆ

ಕಡಿಮೆಯಾಗುತ್ತದೆ. ಅದೇ ಚದರಮೀಟರ್ ಭೂಮಿಗೆ ಟಪ್ಪಾಲ್‌ನಲ್ಲಿ ರೂ. ೫೭೦ ಆಗುತ್ತದೆ. ಹೀಗೆ ಜೆನಿಡಾಗೆ ಗ್ರೇಟರ್ ನೋಯ್ಡಾದಲ್ಲಿ ಭೂಮಿ ನೀಡಿದ ರೈತ ಪ್ರತಿ ಹೆಕ್ಟೇರ್‌ಗೆ ರೂ. ೮೨ ಲಕ್ಷ ಪಡೆಯುತ್ತಾನೆ. ಇದು ಬಹಳ ದೊಡ್ಡ ಮೊತ್ತದ ಪರಿಹಾರವೆಂದು ಯಾರಿಗಾದರೂ ಅನ್ನಿಸದೇ ಇರದು. ಈ ಹಿಂದೆ ಎಲ್ಲಿಯೂ ಯಾವ ರೈತರಿಗೂ ನೀಡಲಾಗದಿದ್ದ ಪರಿಹಾರವನ್ನು ನಾವು ನೀಡಿದ್ದೇವೆ, ನಾವು ರೈತರಿಗೆ ಅನ್ಯಾಯ ಮಾಡಿಲ್ಲ, ದಗಾ ಹಾಕಿಲ್ಲ, ಎಂದು ಬೊಬ್ಬೆ ಹೊಡೆಯುವ ಜೆನಿಡಾ ಇದೇ ಭೂಮಿಯನ್ನು ಡೆವಲಪರ್ಸ್‌ಗೆ ಅತ್ಯಂತ ಕಡಿಮೆ ಎಂದುಕೊಂಡ ಬೆಲೆಯಾದ ಚ.ಮೀ.ಗೆ ೧೦,೦೦೦/- ರೂ.ಗಳಿಗೆ ಮಾರುತ್ತದೆ. ರೈತರಿಂದ ಕೊಂಡ ಬೆಲೆಯ ೪೩ ಪಟ್ಟು ಬೆಲೆಗೆ ಮಾರಿಕೊಳ್ಳುವುದು ರೈತರಿಗೆ ಮಾಡುವ ಮೋಸ. ಈ ದುಬಾರಿಯೆನಿಸುವ ಬೆಲೆಗೆ ಜೆನಿಡಾದಿಂದ ಭೂಮಿ ಪಡೆದ ಡೆವಲಪರ್ಸ್ ಅದನ್ನು ಅಲ್ಪಸ್ವಲ್ಪ ಅಭಿವೃದ್ಧಿ ಪಡಿಸಿ ಮಾರುತ್ತಾರೆ. ದೆಹಲಿ ಮತ್ತು ನೋಯ್ಡಾ ಸುತ್ತಮುತ್ತ ಮಾರುಕಟ್ಟೆ ದರದಲ್ಲಿ ಜಮೀನಿನ ಬೆಲೆ ಚದರ ಮೀಟರ್‌ಗೆ ರೂ. ೨೫,೦೦೦ ಇದೆ. ಎತ್ತಣಿಂದೆತ್ತ ಸಂಬಂಧವಯ್ಯಾ ಜೆನಿಡೇಶ್ವರ, ನಿನ್ನದೆಂತಹ ಮಹಿಮೆ! ಕೇವಲ ರೂ. ೮೨೦ ಬಂಡವಾಳ ಹಾಕಿ ರೂ. ೨೫,೦೦೦ ಪಡೆಯುವ ನಿನ್ನ ಮಹಿಮೆ ಅಪಾರ. ಈ ಜೆನಿಡೇಶ್ವರ ಮಹಿಮೆಯ ವಿರುದ್ಧ ಇಂದು ಜನ ಸಿಡಿದೆದ್ದಿದ್ದಾರೆ.

**ಪರಿಹಾರ ಬೇಡ; ನಮಗೆ ಪಾಲು ಕೊಡಿ**

ಅವರಿಂದು ಪರಿಹಾರ ಕೇಳುತ್ತಿಲ್ಲ. ಖಾಸಗಿ ಲಾಭದ ಲೂಟಿಯಲ್ಲಿ ನಮಗೂ ಪಾಲಿರಬೇಕೆಂದು ದಬಾಯಿಸಿ ಕೇಳುತ್ತಿದ್ದಾರೆ. ಕೆಲವೇ ವರ್ಷಗಳಲ್ಲಿ ರೂ. ೮೨೦ ಬೆಲೆಯ ಆಸ್ತಿಯನ್ನು ರೂ. ೨೫,೦೦೦ ಬೆಲೆಯ ಆಸ್ತಿಯನ್ನಾಗಿ ಮಾಡಿಕೊಂಡಿದ್ದೀರಿ. ಅದರಲ್ಲಿ ನಮಗೆ ಸಲ್ಲಬೇಕಾದ ಪಾಲನ್ನು ನಮಗೆ ನ್ಯಾಯವಾಗಿ ನೀಡಿ. ಯಾಕೆಂದರೆ ಯಾವುದೇ ಶ್ರಮವಿಲ್ಲದೆ ಉತ್ತುಬಿತ್ತಿ ಬೆಳೆದು, ಕೊಯ್ದು ಕಣ ಮಾಡಿ ಒಕ್ಕದೆ ಚದರ ಮೀಟರ್ ಭೂಮಿಯಲ್ಲಿ ರೂ. ೨೪,೦೦೦ಕ್ಕೂ ಅಧಿಕ ಲಾಭವನ್ನು ನಮ್ಮ ಭೂಮಿಯಿಂದ ಮಾಡಿಕೊಂಡಿದ್ದೀರಿ, ಅದನ್ನಿಲ್ಲಿ ಬಡಿಯಿರಿ ಎಂದು ಕೊರಳಪಟ್ಟಿ ಹಿಡಿದು ಕೇಳುತ್ತಿದ್ದಾರೆ.

ಪಶ್ಚಿಮ ಉತ್ತರ ಪ್ರದೇಶದಲ್ಲಿರುವ ಗ್ರೇಟರ್ ನೋಯ್ಡಾವನ್ನು ಪೂರ್ವಭಾಗದಲ್ಲಿರುವ ಬಲಿಯಾದೊಂದಿಗೆ ಜೋಡಿಸುವ ಮತ್ತೊಂದು ಮಹಾಯೋಜನೆ ಜನ್ಮ ತಾಳುತ್ತಿದೆ. ಅದೇ ೧೦೪೭ ಕಿ. ಮೀ. ಉದ್ದದ ರಸ್ತೆಯನ್ನು ನಿರ್ಮಿಸಲು ಹೊರಟಿರುವ ಗಂಗಾ ಎಕ್ಸ್‌ಪ್ರೆಸ್ ಹೆದ್ದಾರಿ ಯೋಜನೆ. ರೂ. ೩೦,೦೦೦ ಕೋಟಿ ಅಂದಾಜು ವೆಚ್ಚದಲ್ಲಿ ನಿರ್ಮಿಸಲು ಉದ್ದೇಶಿಸಿರುವ ಈ ಯೋಜನೆಯನ್ನು ಸಾಕಾರಗೊಳಿಸಲು 'ಉತ್ತರ ಪ್ರದೇಶ ಎಕ್ಸ್‌ಪ್ರೆಸ್ ವೇಸ್ ಇಂಡಸ್ಟ್ರಿಯಲ್ ಡೆವಲಪ್‌ಮೆಂಟ್ ಅಥಾರಿಟಿ' ಎಂಬ ಪ್ರಾಧಿಕಾರವನ್ನು ರಚಿಸಲಾಗಿದೆ. ಅದು ಅತ್ಯಂತ ವೇಗವಾಗಿ ತನ್ನ ಕಾರ್ಯಾಚರಣೆಯನ್ನು ಆರಂಭಿಸಿ ಈಗಾಗಲೇ ೧,೯೪೯ ಹಳ್ಳಿಗಳ ೨೬,೩೭೪ ಹೆಕ್ಟೇರ್ ಭೂಮಿಯನ್ನು ವಶಪಡಿಸಿಕೊಳ್ಳುವುದಾಗಿ ಘೋಷಿಸಿದೆ. ಹೀಗೆ ವಶಪಡಿಸಿಕೊಳ್ಳಲಾಗುವ ಭೂಮಿಯಲ್ಲಿ ಹೆದ್ದಾರಿ ನಿರ್ಮಾಣಕ್ಕೆ ೧೫,೧೨೦ ಹೆಕ್ಟೇರ್ ಭೂಮಿಯನ್ನು ಬಳಕೆ ಮಾಡಿಕೊಂಡರೆ ಇನ್ನುಳಿದ ೧೧,೨೫೪ ಹೆಕ್ಟೇರ್ ಭೂಮಿಯನ್ನು ತುಂಡು ಭೂಮಿಗಳ ರೂಪದಲ್ಲಿ ಈ ಕಾಂಟ್ರಾಕ್ಟ್‌ನ್ನು ಗೆಲ್ಲುವ ಕಂಪೆನಿಗೆ ಅನ್ಯ ಉದ್ದೇಶಗಳಿಗೆ ಅಭಿವೃದ್ಧಿಪಡಿಸಲು ಬಳುವಳಿಯಾಗಿ ನೀಡಲಾಗುವುದು. ಒಂದು ಕೊಂಡರೆ ೨ ಉಚಿತ ಎಂಬ ಮಾರಾಟ ಪ್ರೋತ್ಸಾಹ ಯೋಜನೆಯಿದ್ದಂತೆ ಇದು. ಆದರೆ ನಾಗಾಲೋಟದಲ್ಲಿ ಓಡುತ್ತಿದ್ದ 'ಗಂಗಾ ಎಕ್ಸ್‌ಪ್ರೆಸ್' ಯೋಜನೆಗೆ ಅದನ್ನು ವಿರೋಧಿಸುತ್ತಿರುವ ರೈತರು ಮತ್ತು ಪರಿಸರವಾದಿಗಳು ಒಂದು ಸ್ವಲ್ಪ ಲಗಾಮು ಹಾಕಿ ಹಿಂದಕ್ಕೆ ಜಗ್ಗಲು ಪ್ರಯತ್ನ ಮಾಡುತ್ತಿದ್ದಾರೆ. ಈ ಯೋಜನೆಗೆ ಪರಿಸರ ತೀರುವಳಿ ಇನ್ನೂ ದೊರೆಯದೇ ಇರುವುದರಿಂದ ಯೋಜನೆಯ ಪ್ರಗತಿ ಕುಂಠಿತಗೊಂಡಿದೆ.

ಜೆ. ಪಿ. ಕೈಗಾರಿಕಾ ಸಮೂಹದ ಒಂದು ಕಂಪನಿ ಮಿರ್ಜಾಪುರ್‌ನಲ್ಲಿ ಒಂದು ಸಿಮೆಂಟ್ ಉತ್ಪಾದನಾ ಕಾರ್ಖಾನೆಯನ್ನಾರಂಭಿಸಲು ಭೂಸ್ವಾಧೀನ ಪ್ರಕ್ರಿಯೆಯನ್ನಾರಂಭಿಸಿದೆ. ಆದರೆ ಅಲ್ಲಿಯ ಜನ ಅದರ ವಿರುದ್ಧ ಸಿಡಿದೆದ್ದು ಹೋರಾಡುತ್ತಿದ್ದಾರೆ. ಸೋನಾಬದ್ರದಲ್ಲಿ ಒಂದು ವಿದ್ಯುತ್ ಉತ್ಪಾದನಾ ಘಟಕವನ್ನಾರಂಭಿಸುವ ಪ್ರಯತ್ನಗಳಿಗೆ ಜನ ಅಡ್ಡಿಪಡಿಸುತ್ತಿದ್ದಾರೆ. ಮುಖ್ಯಮಂತ್ರಿ ಮಾಯಾವತಿಯವರ ಪ್ರಿಯವಾದ ಒಂದು ಯೋಜನೆಯಾದ ಬುದ್ಧ ಸರ್ಕೀಟ್ ವಿಮಾನ ನಿಲ್ದಾಣ ಯೋಜನೆಗೆ ಕುಶಿನಗರದ ಜನ ತೀವ್ರ ಪ್ರತಿರೋಧವನ್ನೊಡ್ಡುತ್ತಿದ್ದಾರೆ.

ಇಷ್ಟೆಲ್ಲಾ ರೈತರ ಭೂಮಿಯನ್ನು ಆತುರಾತುರವಾಗಿ ಸ್ವಾಧೀನಪಡಿಸಿಕೊಳ್ಳಲು ಹೊರಟ ಉತ್ತರ ಪ್ರದೇಶ ಸರ್ಕಾರ ಭೂಮಿ ಕಳೆದುಕೊಳ್ಳುವವರಿಗೆ ಪರಿಹಾರ ಮತ್ತು ಪುನರ್‌ವಸತಿ ಕಲ್ಪಿಸುವ ಒಂದು ಸಮಗ್ರ ನೀತಿಯನ್ನಾಗಲಿ ಯೋಜನೆಯನ್ನಾಗಲಿ ರೂಪಿಸಲೇ ಇಲ್ಲ. ಈ ಕಾರಣದಿಂದಾಗಿ ಉತ್ತರ ಪ್ರದೇಶದಲ್ಲಿ ಒಂದೊಂದು ಭಾಗದಲ್ಲಿ ಒಂದೊಂದು ವರ್ಷದಲ್ಲಿ ಒಂದೊಂದು ರೀತಿ ಭೂಪರಿಹಾರವನ್ನು ಪಡೆಯುವಂತಾಯಿತು. ೨೦೦೮ರವರೆಗೆ ರೈತರು ಚದರ ಮೀಟರ್‌ಗೆ ರೂ. ೨೫೦ರಿಂದ ರೂ. ೪೦೦ರವರೆಗೆ ಪರಿಹಾರ ಪಡೆದರೆ, ಗ್ರೇಟರ್ ನೋಯ್ಡಾ ಸಮೀಪದ ಘೋರಿ ಬೆಚೆರಾ ಎಂಬ ರಜಪೂತರೆ ಹೆಚ್ಚಿರುವ ಹಳ್ಳಿಯ ಜನ ಪ್ರತಿಭಟಿಸಿ ನೀಡಲಾಗುತ್ತಿದ್ದ ಪರಿಹಾರದ ದುಪ್ಪಟ್ಟು ಪರಿಹಾರವನ್ನು ಪಡೆದರು. ಇದರಿಂದ ಸ್ಪೂರ್ತಿ ಪಡೆದ ಮಥುರಾ ಮತ್ತು ಆಗ್ರಾದ ರೈತರು ಹೋರಾಟಕ್ಕಿಳಿದು ಹೆಚ್ಚಿನ ಪರಿಹಾರವನ್ನು ಪಡೆಯುವಲ್ಲಿ ಯಶಸ್ವಿಯಾದರು. ಇದರಿಂದ ರೈತರು ತೀವ್ರ ಹೋರಾಟಕ್ಕಿಳಿದಾಗ ಮಾತ್ರ ಭೂಸ್ವಾಧೀನ ಪರಿಹಾರವನ್ನು ಹೆಚ್ಚಿಸಲಾಗುವುದೆಂಬ ಹೊಸ ಸರ್ಕಾರಿ ಪದ್ಧತಿ ರೂಢಿಗೆ ಬಂತು. ಹಾಗಾಗಿ ಇಂದು ಉತ್ತರ ಪ್ರದೇಶದಲ್ಲಿ ಹೆಚ್ಚು ಹೆಚ್ಚು ರೈತರು ಹೆಚ್ಚಿನ ಭೂಸ್ವಾಧೀನ ಪರಿಹಾರ ಪಡೆಯಲು ಬೀದಿಗೆ ಇಳಿಯುತ್ತಿದ್ದಾರೆ. ಆದರೆ ೨೦೧೦ರಲ್ಲಿ ಅಲಿಘರ್ ಜಿಲ್ಲೆಯ ಟಪ್ಪಾಲ್ ಗ್ರಾಮದ ಹಿಂಸಾತ್ಮಕ ಪ್ರತಿಭಟನೆ ರೈತರ ಹೋರಾಟವನ್ನು ರಾಜಕೀಯದಂಗಳಕ್ಕೆ ದೂಡಿ ಅದನ್ನೊಂದು ಪ್ರಮುಖ ರಾಜಕೀಯ ಪ್ರಶ್ನೆಯನ್ನಾಗಿಸಿದೆ. ಈ ಹೋರಾಟ ಸರ್ಕಾರವನ್ನು ಭೂಸ್ವಾಧೀನಕ್ಕೆ ಪರಿಹಾರ ನೀಡುವುದನ್ನು ಕೈಬಿಡುವಂತೆ ಮಾಡಿ ''ಲಾಭಾಂಶ ಹಂಚಿಕೆ''ಯ ವಿನೂತನ ಮಾದರಿ ಸೂತ್ರವೊಂದನ್ನು ರೂಪಿಸುವಂತೆ ಬಲಾತ್ಕರಿಸಿದೆ.



ಉತ್ತರ ಪ್ರದೇಶದ ರೈತ ಹೋರಾಟಕ್ಕೆ ಮತ್ತೊಂದು ಸಾಮಾಜಿಕ ಆಯಾಮವೂ ಇದೆ. ಎಕ್ಸ್‌ಪ್ರೆಸ್ ಹೆದ್ದಾರಿ ಯೋಜನೆಗೆ ಬಹುಪಾಲು ಜಮೀನು ಕಳೆದುಕೊಂಡವರು ಸಣ್ಣ ಮತ್ತು ಅತಿಸಣ್ಣ ರೈತರು. ಕೆಲವು ದೊಡ್ಡ ರೈತರ ಸ್ವಲ್ಪ ಜಮೀನು ಹೋದರೂ ಅವರ ಉಳಿದ ಜಮೀನು ಹೆದ್ದಾರಿಗೆ ಹೊಂದಿಕೊಂಡಿದ್ದರಿಂದ ಆ ಜಮೀನುಗಳಿಗೆ ಹೆಚ್ಚಿನ ಬೆಲೆ ಬರುವಂತಾದ್ದರಿಂದ ಅವರು ಜಮೀನು ನಷ್ಟದ ಬಗ್ಗೆ ಆರಂಭದಲ್ಲಿ ಅಷ್ಟಾಗಿ ತಲೆಕೆಡಿಸಿಕೊಂಡಿರಲಿಲ್ಲ. ಆದರೆ ಸರ್ಕಾರ ಹೆದ್ದಾರಿಗೆ ಹೊಂದಿಕೊಂಡ ಜಮೀನುಗಳನ್ನು ಹೈಟೆಕ್ ನಗರಗಳ ನಿರ್ಮಾಣಕ್ಕೆ ಸ್ವಾಧೀನಪಡಿಸಿಕೊಳ್ಳಲು ಹೊರಟಾಗ ಪರಿಸ್ಥಿತಿ ಬದಲಾಯಿತು. ಹೆಚ್ಚಿನ ಜಮೀನನ್ನು ಹೊಂದಿದ್ದ ಜಾಟ್‌ರು ಮತ್ತು ಠಾಕೂರ್‌ಗಳ ಜಮೀನಿಗೆ ಸಂಚಕಾರ ಬಂದಾಗ ಪ್ರತಿಭಟನೆ ತೀವ್ರ ಸ್ವರೂಪಕ್ಕೆ ತಿರುಗಿತು. ಇವರುಗಳ ಜಮೀನುಗಳಲ್ಲಿ ಕೃಷಿಕಾರ್ಮಿಕರಾಗಿ ದುಡಿಯುತ್ತಿದ್ದ ದಲಿತರು ಮತ್ತು ಜಾಟ್ವಾಸ್‌ಗಳು, ಜಾಟ್ ಮತ್ತು ಠಾಕುರ್‌ಗಳ ನೇತೃತ್ವದ ಹೋರಾಟಕ್ಕೆ ಬೆಂಬಲ ನೀಡಿದರು. ಅವರ ಸಣ್ಣಪುಟ್ಟ ಜಮೀನುಗಳು ಈಗಾಗಲೇ ಕೈತಪ್ಪಿದ್ದವು. ಮತ್ತೆ ಹೈಟೆಕ್ ಪಟ್ಟಣಗಳ ನಿರ್ಮಾಣಕ್ಕೆ ತಾವು ಕೂಲಿ ಮಾಡಿ ಬದುಕುತ್ತಿದ್ದ ಜಮೀನುಗಳೂ ಹೋದದ್ದರಿಂದ ಅವರು ಸಹ ಅನಿವಾರ್ಯವಾಗಿ ಹೋರಾಟಕ್ಕೆ ಸೆಳೆಯಲ್ಪಟ್ಟು ಅದರ ವ್ಯಾಪ್ತಿ ವಿಶಾಲಗೊಂಡು ಅಧಿಕ ಜನರ ಭಾಗವಹಿಸುವಿಕೆಯಿಂದ ಅದು ತೀವ್ರಗೊಂಡಿತು. ಅದರಿಂದಾಗಿ ಎಲ್ಲ ರಾಜಕೀಯ ಪಕ್ಷಗಳು ಭೂಸ್ವಾಧೀನ ಸಮಸ್ಯೆಯನ್ನು ತೀವ್ರವಾಗಿ ಪರಿಗಣಿಸುವಂತಾಯಿತು.

ಮಹಾನಗರಗಳ ಸಂಪರ್ಕಕ್ಕೆ ಸೂಪರ್ ಹೈವೇಗಳನ್ನು ನಿರ್ಮಿಸಲು ಉತ್ಸಾಹ ತೋರುವ ಖಾಸಗಿ ಕಂಪನಿಗಳು ಮತ್ತು ಸರ್ಕಾರ ಹಳ್ಳಿಗಳನ್ನು ಈ ಆಧುನಿಕ ಸೂಪರ್ ಹೈವೇಗಳೊಂದಿಗೆ ಜೋಡಿಸುವ ಕೆಲಸವನ್ನು ಸಂಪೂರ್ಣವಾಗಿ ಕಡೆಗಣಿಸಿದವು. ಅವರ ಹಾಳುಬಿದ್ದ ರಸ್ತೆಗಳನ್ನು ರಿಪೇರಿ ಮಾಡಿ ಸುಸ್ಥಿತಿಯಲ್ಲಿಡುವ ಒಂದು ಸಣ್ಣ ಪ್ರಯತ್ನವನ್ನೂ ಅವು ಮಾಡಲಿಲ್ಲ. ಯಾಕೆಂದರೆ ಅಲ್ಲಿ ರಿಯಲ್ ಎಸ್ಟೇಟ್‌ನ ಭಾರಿ ಲಾಭವಿಲ್ಲ. ಇದರಿಂದ ಅತ್ಯಂತ ಸ್ಪಷ್ಟವಾಗಿ ಹೊರಹೊಮ್ಮುವ ವಿಷಯವೇನೆಂದರೆ ಸೂಪರ್ ಹೈವೇ ಎಂಬುದು ರಿಯಲ್ ಎಸ್ಟೇಟ್ ಧಂಧೆಯನ್ನು ವಿಸ್ತರಿಸುವ ಒಂದು ಮುಖವಾಡ. ಮೂಲ ಸೌಕರ್ಯದ ಮಾತೆಲ್ಲಾ ಈ ರಿಯಲ್ ಎಸ್ಟೇಟ್ ಧಂಧೆಯ ಅಧೀನ ಮತ್ತು ಸಾರ್ವಜನಿಕ ಹಿತಾಸಕ್ತಿಯ ಒಂದು ಮುಖವಾಡ ಮಾತ್ರ.

---


ಸಿ. ಯತಿರಾಜು

ಪ್ರಾಚಾರ್ಯರು, ಕಾಳಿದಾಸ ಪದವಿಪೂರ್ವ ಕಾಲೇಜು

ಶಿರಾ ಗೇಟ್, ತುಮಕೂರು

ಡಾ|| ಬಸವರಾಜ ಸಬರದ

# ಜಾಗತಿಕ ಭಯೋತ್ಪಾದನೆ – ಹೊಸ ಸವಾಲುಗಳು

ಭಯವೆಂಬುದು ಮನುಷ್ಯ ಹುಟ್ಟಿದಾಗಿನಿಂದಲೇ ಪ್ರಾರಂಭವಾಗಿದೆ. ಜೀವಭಯಕ್ಕಿಂತ ಮಾನಸಿಕ ಭಯ ಹೆಚ್ಚು ತೊಂದರೆ ಕೊಡುತ್ತದೆ. 'ಭಯ' ಶತ-ಶತಮಾನಗಳಿಂದಲೂ ಮನುಷ್ಯನನ್ನು ಕಾಡುತ್ತ ಬಂದಿದೆ. ಬೆಂಕಿ-ಭೂಕಂಪ-ನೆರೆಹಾವಳಿಯಂತಹ ನೈಸರ್ಗಿಕ ಭಯಗಳಿಗಿಂತ, ಮನುಷ್ಯನಿಂದ ಹುಟ್ಟಿದ ಭಯ ಹೆಚ್ಚು ಅಪಾಯಕಾರಿಯಾದುದಾಗಿದೆ. ಹಿಂದಿನ ಕಾಲದಲ್ಲೂ ಭಯವಿತ್ತು, ಆದರೆ ಅದು ಉತ್ಪಾದನೆಯ ಕೇಂದ್ರವಾಗಿರಲಿಲ್ಲ. ಇಂದು ಭಯವೆಂಬುದು ಉತ್ಪಾದನೆಯ ಜತೆಗೆ ಉದ್ದಿಮೆಯಾಗಿದೆ, ಸಾಮ್ರಾಜ್ಯಶಾಹಿಗಳ ಪ್ರಮುಖ ಅಸ್ತ್ರವಾಗಿದೆ. ಸಲಕರಣೆಗಳನ್ನು ಕಾರ್ಖಾನೆಗಳಲ್ಲಿ ಉತ್ಪಾದಿಸಿದಂತೆ, ಭಯವನ್ನು ಬೇರೆ ಬೇರೆ ರೀತಿಯಲ್ಲಿ ಉತ್ಪಾದಿಸಲಾಗುತ್ತದೆ. ಅದಕ್ಕೇ ಅದರ ಹೆಸರು ಭಯೋತ್ಪಾದನೆಯೆಂದಾಗಿದೆ. ಈ ಭಯೋತ್ಪಾದನೆಯೆಂಬುದು ಗ್ರಾಮಮಟ್ಟದಿಂದ ಹಿಡಿದು ಜಾಗತಿಕಮಟ್ಟದವರೆಗೂ ಬೆಳೆದುನಿಂತಿದೆ.

ಭಯೋತ್ಪಾದನೆಗೆ ಕೆಲವು ಪ್ರಮುಖ ಕಾರಣಗಳಿವೆ. ಭಯದ ಹುಟ್ಟಿಗೆ ಕೆಲವು ಸಂಘ-ಸಂಸ್ಥೆಗಳೂ ಕೈಜೋಡಿಸಿವೆ. ಇದರಲ್ಲಿ ದೇಶ-ವಿದೇಶಗಳ ಕೈವಾಡಗಳೂ ಸೇರಿಕೊಂಡಿವೆ. ಇಂತಹ ಭಯವನ್ನು ಹುಟ್ಟಿಸುವವರೇ ಭಯೋತ್ಪಾದಕರಾಗಿದ್ದಾರೆ. ಗ್ರಾಮೀಣ ಪ್ರದೇಶಗಳಲ್ಲಿ ಊಳಿಗಮಾನ್ಯ ವ್ಯವಸ್ಥೆಯು ದುಡಿವ ವರ್ಗದಲ್ಲಿ ಭಯವನ್ನು ಹುಟ್ಟಿಸಿದರೆ, ನಗರದ ಕಾರ್ಖಾನೆಗಳಲ್ಲಿ ಮಾಲಿಕವರ್ಗ ಕಾರ್ಮಿಕ ವರ್ಗವನ್ನು ಹೆದರಿಸುತ್ತದೆ. ಅದೇ ರೀತಿ ಬಡವರಿಗೆ ಶ್ರೀಮಂತರ ಬಗೆಗೆ, ಇಲ್ಲದವರಿಗೆ – ಉಳ್ಳವರ ಬಗೆಗೆ ಭಯ ಇರುತ್ತದೆ. ಈ ರೀತಿಯ ಭಯದ ಪರಂಪರೆ ಮೊದಲಿನಿಂದಲೂ ಇದೆ. ಆದರೆ ಇಂದಿನ ಭಯೋತ್ಪಾದನೆ ತೀವ್ರ ಭಯಾನಕವಾದುದಾಗಿದೆ. ಜಾಗತಿಕ ಭಯೋತ್ಪಾದನೆಯನ್ನು - ಭಯೋತ್ಪಾದಕರನ್ನು ಕಂಡಾಗ ಎಂಥವರಿಗೂ ಭಯವಾಗುತ್ತದೆ. ಸಿಡಿಮದ್ದು ಬಾಂಬ್ ಆಗುವುದಕ್ಕೂ, ಮಾನವನೇ ಬಾಂಬ್ ಆಗುವದಕ್ಕೂ ಬಹಳ ವ್ಯತ್ಯಾಸವಿದೆ. ಮಾನವ ಬಾಂಬ್‌ಗಳು ಇಂದು ಜಗತ್ತಿನಲ್ಲಿಯೇ ತಲ್ಲಣವನ್ನುಂಟುಮಾಡಿವೆ.

ಬಂಡವಾಳಶಾಹಿಗಳು - ಕೋಮುವಾದಿಗಳು ಹಾಗೂ ಸ್ವಾರ್ಥ ರಾಜಕಾರಣಿಗಳು ಭಯೋತ್ಪಾದನೆಯ ಮುಖ್ಯ ಆಕರಗಳಾಗಿದ್ದಾರೆ. ಭಯೋತ್ಪಾದಕರು ಧರ್ಮವನ್ನು ದುರ್ಬಳಕೆ ಮಾಡಿಕೊಂಡಿದ್ದಾರೆ; ಹೀಗಾಗಿ ಅನೇಕ ಧಾರ್ಮಿಕ ಕೇಂದ್ರಗಳು ಇಂದು ಭಯೋತ್ಪಾದನೆಯ ತಾಣಗಳಾಗಿವೆ. ಭಯೋತ್ಪಾದಕರು ಬಡವರನ್ನು - ಅಮಾಯಕರನ್ನು ದುರ್ಬಳಕೆ ಮಾಡಿಕೊಂಡಿದ್ದಾರೆ. ಹೀಗಾಗಿ ಇಂದು ಮಾನವ ಬಾಂಬ್‌ಗಳು ಸೃಷ್ಟಿಯಾಗಿವೆ. ಇವೆಲ್ಲ ಜಾಗತಿಕ ಭಯೋತ್ಪಾದನೆಯ ಹೊಸ ಸವಾಲುಗಳಾಗಿವೆ. ಮಾನವರನ್ನು ಕೊಲ್ಲುವುದಕ್ಕಾಗಿ, ಹಿಂದೆ ಸಿಡಿಮದ್ದುಗಳನ್ನು, ಬಾಂಬ್‌ಗಳನ್ನು ಉಪಯೋಗಿಸಿದರೆ, ಇಂದು ಮಾನವನನ್ನೇ ಬಾಂಬನ್ನಾಗಿ ಉಪಯೋಗಿಸಲಾಗುತ್ತದೆ. ಇದು ಇಂದಿನ ದೊಡ್ಡ ತಲ್ಲಣವಾಗಿದೆ.

ಜಾಗತೀಕರಣದ ತೀವ್ರತೆಯಿಂದಾಗಿ ಇಂದು ಅನೇಕ ಹೊಸ ಸವಾಲುಗಳು ಹುಟ್ಟಿಕೊಂಡಿವೆ. ಹಿಂದೆ ಸಾಮ್ರಾಜ್ಯಶಾಹಿಗಳಾಗಿದ್ದ ಅಮೆರಿಕ-ಇಂಗ್ಲೆಂಡ್‌ಗಳಂತಹ ದೇಶಗಳು, ಇಂದು ಬಂಡವಾಳಶಾಹಿಗಳ ರೂಪದಲ್ಲಿ ಕಾಣಿಸಿಕೊಂಡಿವೆ. ಇಡೀ ಜಗತ್ತೇ ತನ್ನ ಅಧೀನದಲ್ಲಿರಬೇಕೆಂಬ ಸಾಮ್ರಾಜ್ಯಶಾಹಿ ಮನಸ್ಸು ಇಂದು ಬಂಡವಾಳಶಾಹಿಗಳ ಮೂಲಕ ಜಾಗತೀಕರಣವೆಂಬ ಹೊಸ ರೂಪವನ್ನು ಪಡೆದುಕೊಂಡಿದೆ. ಆದುದರಿಂದಲೇ ಜಾಗತಿಕ ಭಯೋತ್ಪಾದನೆಯಲ್ಲಿ ಹೊಸ ಸವಾಲುಗಳು ಕಾಣಿಸಿಕೊಂಡಿವೆ.

ಭಯೋತ್ಪಾದನೆಗೆ ಸಂಬಂಧಿಸಿದಂತೆ ನಕ್ಸಲ್‌ವಾದಿಗಳು ಮತ್ತು ಕೋಮುವಾದಿಗಳಿಗಿಂತ, ಬಂಡವಾಳಶಾಹಿಗಳು ಮತ್ತು ಸಾಮ್ರಾಜ್ಯಶಾಹಿಗಳು ಹೆಚ್ಚು ಅಪಾಯಕಾರಿಯಾಗಿದ್ದಾರೆ. ಈ ಕಟು ಸತ್ಯವು ಜನಸಾಮಾನ್ಯರಿಗೆ ತಿಳಿಯದಂತೆ ಈ ಶಕ್ತಿಗಳು ಸಂಚು ರೂಪಿಸಿವೆ. ಹೀಗಾಗಿ ಜಾಗತಿಕ ಭಯೋತ್ಪಾದನೆ ಎಂಬುದು ಸರಳೀಕೃತವಾದುದಲ್ಲ, ಅದರೊಳಗೆ ಅನೇಕ ಸುಳಿಗಳು - ಒಳಸುಳಿಗಳು ಸುತ್ತಿಕೊಂಡಿವೆ.

ಹಿಂದೆ ಯುದ್ಧಗಳು ನಡೆಯುತ್ತಿದ್ದವು. ಒಬ್ಬ ರಾಜನ ಮೇಲೆ ಮತ್ತೊಬ್ಬ ರಾಜ ಯುದ್ಧ ಸಾರುತ್ತಿದ್ದ. ಯುದ್ಧದ ದಿನ ನಿಗದಿಯಾಗುತ್ತಿತ್ತು, ರಾಜ್ಯ-ರಾಜ್ಯಗಳ ಸೈನಿಕರ ನಡುವೆ ಯುದ್ಧ ನಡೆಯುತ್ತಿತ್ತು. ಸೋತ ರಾಜ, ಗೆದ್ದ ರಾಜನಿಗೆ ಶರಣಾಗತನಾಗುತ್ತಿದ್ದ. ಅಲ್ಲಿಯೂ ಕೂಡ ರಕ್ತ ಹರಿಯುತ್ತಿತ್ತು, ಸಾವುಗಳು ಸಂಭವಿಸುತ್ತಿದ್ದವು, ಅನೇಕ ಯೋಧರು ಮರಣವನ್ನಪ್ಪುತ್ತಿದ್ದರು. ಯುದ್ಧದ ಘೋರ ಪರಿಣಾಮಗಳು ಯುದ್ಧದ ನಂತರ ಗೋಚರವಾಗುತ್ತಿದ್ದವು. ಹಿಂಸೆಯ ತೀವ್ರತೆ ಹೆಚ್ಚಾದಾಗ ಅಹಿಂಸೆಯ ಪ್ರಾಮುಖ್ಯತೆ ಗೊತ್ತಾಗುತ್ತದೆ. ಕಳಿಂಗ ಯುದ್ಧದಲ್ಲಿ ಕೋಡಿಯಾಗಿ ಹರಿದ ರಕ್ತವನ್ನು ಕಂಡು, ಅದರಲ್ಲಿ ತೇಲಾಡುತ್ತಿರುವ ಹೆಣಗಳನ್ನು ನೋಡಿ ಸಾಮ್ರಾಟ್ ಅಶೋಕನ ಮನ ಪರಿವರ್ತನೆಯಾಯಿತು. ಹಿಂಸೆಯನ್ನು ಬಿಟ್ಟು ಅಹಿಂಸೆಯತ್ತ ಹೆಜ್ಜೆ ಹಾಕಿದ ಅಶೋಕ ಶಾಂತಿಪ್ರಿಯನಾದ. ಆದರೆ ಭಯೋತ್ಪಾದನೆಯ ಪ್ರಸಂಗಗಳಲ್ಲಿ ವೈರಿಗಳೂ ಕಣ್ಣೆದುರಿಗಿರುವುದಿಲ್ಲ. ಯುದ್ಧದಲ್ಲಿ ಸೈನಿಕರು ಮಾತ್ರ ಮಡಿದರೆ, ಭಯೋತ್ಪಾದನೆಯ ಬಾಂಬ್ ಸ್ಫೋಟಗಳಲ್ಲಿ ಅಮಾಯಕರು, ಮಹಿಳೆಯರು, ಮಕ್ಕಳು ಸಾವನ್ನಪ್ಪುತ್ತಾರೆ. ಯಾರದೋ ತಪ್ಪಿಗೆ ಯಾರಿಗೋ ಶಿಕ್ಷೆ. 'ಎತ್ತಿಗೆ ಜ್ವರ ಬಂದರೆ ಎಮ್ಮೆಗೆ ಬರೆ' ಎಂಬ ಜನಪದರ ಗಾದೆ ಇಲ್ಲಿ ನೆನಪಿಗೆ ಬರುತ್ತದೆ.

ಈ ಜಾಗತಿಕ ಭಯೋತ್ಪಾದನೆಗೆ ಸಾಮ್ರಾಜ್ಯಶಾಹಿ ರಾಷ್ಟ್ರಗಳೇ ಕಾರಣವಾಗಿವೆ. ಅಮೆರಿಕನ್ ವಸಾಹತುಶಾಹಿಗಳು ಅಲ್ಲಿಯ ಮೂಲನಿವಾಸಿಗಳನ್ನು ಅತ್ಯಂತ ದಕ್ಷತೆಯಿಂದ ನಿರ್ನಾಮ ಮಾಡಿದ ಪ್ರಸಂಗಗಳನ್ನು ಡೆ ತಾಕೋ ವಿಲ್ಲೆ




ಕೋಮುವಾದಿ ಮನೋಧರ್ಮದ ರಾಜಕೀಯ ನಾಯಕರು ಹಾಗೂ ಕೋಮುವಾದಿ ನಾಯಕರು ಒಟ್ಟಿಗೆ ಸೇರಿದ್ದರಿಂದಲೇ ಭಯೋತ್ಪಾದನೆ ಇಂದು ತೀವ್ರಸ್ವರೂಪವನ್ನು ಪಡೆದಿದೆ. 'ನಾನು ನಿನಗಿಂತ ಶ್ರೇಷ್ಠ', 'ನನ್ನ ಧರ್ಮ ನಿನ್ನ ಧರ್ಮಕ್ಕಿಂತ ಮೇಲು' ಎಂಬಂತಹ ಅಹಂಭಾವಗಳು ಮನಸ್ಸಿನಲ್ಲಿ ಹುಟ್ಟಿಕೊಂಡಾಗಲೇ ಕೋಮುವಾದದ ಬೀಜಗಳು ಚಿಗುರೊಡೆಯಲು ಪ್ರಾರಂಭಿಸುತ್ತವೆ. ಕೋಮುವಾದವೆಂಬುದು ಇಂದು ಸಾಮಾಜಿಕ ಮನೋಧರ್ಮವಾಗಿ ಬೆಳೆಯಲು ಪ್ರಾರಂಭಿಸಿದೆ. ನಿಜಕ್ಕೂ ಇದೊಂದು ಅಪಾಯಕಾರಿ ಬೆಳವಣಿಗೆಯಾಗಿದೆ.

ವಿವರವಾಗಿ ಬರೆದಿದ್ದಾನೆ. ೧೮೮೫ರಲ್ಲಿ ಹೆಲೆನ್ ಜಾಕ್‌ಸನ್ ಈ ನರಹತ್ಯೆಯನ್ನು ಪರಿಣಾಮಕಾರಿಯಾಗಿ ಹೇಳಿದ್ದಾನೆ. ಅಸಹಾಯಕರಾದ ಅಮೆರಿಕನ್ ಮೂಲ ನಿವಾಸಿಗಳನ್ನು ಬರ್ಬರವಾಗಿ ಕೊಚ್ಚಿಹಾಕಿದ ಸಂದರ್ಭ ದಿಂದಲೇ ಭಯೋತ್ಪಾದನೆಯ ಬೀಜಗಳು ಮೊಳಕೆ ಯೊಡೆಯಲು ಪ್ರಾರಂಭಿಸಿದುವು.

೧೯೯೫ರ ಜನವರಿಯಲ್ಲಿ ನೋಮ್ ಚೊಮ್‌ಸ್ಕಿ ಆಸ್ಟ್ರೇಲಿಯಾಕ್ಕೆ ಹೋಗಿದ್ದರು. ಅಲ್ಲಿ ನಡೆಯುತ್ತಿರುವ ಹಿಂಸೆಯೂ ಸೇರಿದಂತೆ ಹಲವಾರು ವಿಷಯಗಳ ಬಗ್ಗೆ ಅವರು ಭಾಷಣ ಮಾಡಿದರು. ಈಸ್ಟ್ ತೈಮೋರ್‌ನಲ್ಲಿ ನಡೆದ ಹಿಂಸೆಯ ಚಿತ್ರಗಳನ್ನವರು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಅವರ ಈ ಕುರಿತ ಭಾಷಣಗಳು ಪುಸ್ತಕ ರೂಪದಲ್ಲಿ ಪ್ರಕಟವಾಗಿವೆ. ಅವರು ಹೇಳುತ್ತಾರೆ :

''ಅಮೆರಿಕ, ಕಳೆದ ೨೫ ವರ್ಷಗಳಿಂದ ಇಂಡೋ ಚೀನಾದಲ್ಲಿ ಮತ್ತು ಇವತ್ತು ಜಗತ್ತಿನ ಅನೇಕ ಕಡೆಗಳಲ್ಲಿ ನಡೆಸುತ್ತಿರುವ ಕ್ರಿಮಿನಲ್ ಕೃತ್ಯಗಳ ಸಮರ್ಥನೆಗೆ ಕೆಲವು ಅತ್ಯಾಚಾರಗಳನ್ನು ನೆಪಮಾಡಿಕೊಳ್ಳುತ್ತದೆ. ಅಮೆರಿಕ ಒಳ್ಳೆಯ ಉದ್ದೇಶಗಳ ಸಾಧನೆಗೆ ಮಾತ್ರ ಹಿಂಸೆಯ ಮಾರ್ಗವನ್ನು ತುಳಿಯುತ್ತದೆನ್ನುವ ನಂಬಿಕೆಯನ್ನು ಗಟ್ಟಿಗೊಳಿಸುವ ಸಲುವಾಗಿ ಹಾಗೂ ಮತ್ತಷ್ಟು ಅತ್ಯಾಚಾರಗಳನ್ನು ನಡೆಸುವುದಕ್ಕೆ ತಯಾರಿಯಾಗಿ, ಖೆಮರ್ ರೂಜ್ ಅತ್ಯಾಚಾರಗಳನ್ನು ತುಂಬ ಜಾಣತನದಿಂದ ಬಳಸಿಕೊಳ್ಳಲಾಗುತ್ತಿದೆ.''

*(ನೋಡಿ : ಪವರ್ ಅ್ಯಂಡ್ ಪ್ರಾಸ್ಪೆಕ್ಟ್ಸ್, ಮಾಧ್ಯಮ್, ನವದೆಹಲಿ, ೧೯೯೬)*

ಈಸ್ಟ್ ತೈಮೋರ್‌ನ ಜನಸಂಖ್ಯೆಯನ್ನು ನೋಡಿದರೆ, ನಾಜಿ ನರಮೇಧದ ನಂತರ ಇಡೀ ಜಗತ್ತಿನಲ್ಲಿ ಇಂತಹ ಹೀನ ಅತ್ಯಾಚಾರಗಳು ಜರುಗಿರಲಿಲ್ಲ. ಅಮೆರಿಕದ ತೆರಿಗೆ ದಾರರ ದುಡ್ಡಿನ ಸಹಾಯದಿಂದ ಈ ಅತ್ಯಾಚಾರಗಳನ್ನು ನಡೆಸಲಾಗಿತ್ತೆಂದು ತಿಳಿದುಬರುತ್ತದೆ. ಸತತ ಮೂರು ವರ್ಷ ತೀವ್ರವಾದ ಹಿಂಸೆ ನಡೆದ ನಂತರವೂ ಅಮೆರಿಕದ ಮಾಧ್ಯಮಗಳಲ್ಲಿ ಈ ವಿಷಯ ಚರ್ಚೆಯಾಗಲಿಲ್ಲವೆಂಬುದು ಖೇದದ ಸಂಗತಿಯಾಗಿದೆ. ಇಂತಹ ಅನೇಕ ನರಮೇಧ ಗಳಿಗೆ, ಹಿಂಸಾಕಾಂಡಗಳಿಗೆ ಅಮೆರಿಕದಂತಹ ಸಾಮ್ರಾಜ್ಯ ಶಾಹಿ ರಾಷ್ಟ್ರಗಳು ಹೇಗೆ ಕಾರಣವಾಗಿವೆಯೆಂಬುದನ್ನು ಚೋಮ್‌ಸ್ಕಿ ವಿವರಿಸಿದ್ದಾರೆ.

ಭಯೋತ್ಪಾದನೆಗೆ ಕೋಮುವಾದ ಕೂಡ ಕಾರಣ ವಾಗಿದೆ. ಭಾರತದ ಸಂದರ್ಭದಲ್ಲಿ ಹೇಳುವುದಾದರೆ, ಈ ಕೋಮುವಾದ ಕೇವಲ ಇಸ್ಲಾಂ ಸಂಘಟನೆಗಳಿಂದ ಮಾತ್ರ ವಲ್ಲದೆ ಹಿಂದೂ ಸಂಘಟನೆಗಳಿಂದಲೂ ಹುಟ್ಟಿಕೊಂಡಿದೆ. ಭಾರತೀಯ ಕೋಮುವಾದಕ್ಕೆ ಹಿಂದೂ ಹಾಗೂ ಮುಸ್ಲಿಂ ಸಂಘಟನೆಗಳು ಕಾರಣವಾಗಿವೆ. ಇಲ್ಲಿ ಯಾವುದೇ ಸಂಘಟನೆ ಅಥವಾ ವ್ಯಕ್ತಿಯ ಹೆಸರನ್ನು ಉಲ್ಲೇಖಿಸುವ ಅಗತ್ಯವಿಲ್ಲ. ಜನಸಾಮಾನ್ಯರಿಗೂ ಈ ವಿಷಯ ತಿಳಿದದ್ದೇ ಆಗಿದೆ.

ವೇದಗಳನ್ನು ಓದಿದವರು, ಪೌರೋಹಿತ್ಯವನ್ನು ಮಾಡಿ ದವರು ಹಾಗೂ ಪಂಡಿತರೆಂದು ಕರೆಸಿಕೊಂಡವರಲ್ಲನೇಕರು ಕೋಮುವಾದದ ಹುಟ್ಟಿಗೆ ಕಾರಣರಾಗಿದ್ದಾರೆ. ಧರ್ಮ ವೆಂದರೆ ಸತ್ಯದ ಅನ್ವೇಷಣೆಯೇ ಹೊರತು ಸತ್ಯದ ಸಿದ್ಧಾಂತ ವಲ್ಲವೆಂದು ಋಗ್ವೇದ ಸ್ಪಷ್ಟಪಡಿಸುತ್ತದೆ. ಆದರೆ ಈ ವೇದಾಂತಿ ಗಳು ವೇದಗಳನ್ನು ಪೂಜೆ ಮಾಡುತ್ತಾರೆಯೇ ಹೊರತು ಅದರಲ್ಲಿರುವ ಸಂಗತಿಗಳನ್ನು ಅರ್ಥಮಾಡಿಕೊಳ್ಳುವುದಿಲ್ಲ.

ಎಲ್ಲ ಪುರೋಹಿತಶಾಹಿ ಮನಸ್ಸುಗಳು ಕೂಡಿಕೊಂಡು ಪ್ರಚಾರ ಮಾಡಿದ ಒಂದು ದೊಡ್ಡ ಸುಳ್ಳೆಂದರೆ 'ಹಿಂದೂ ಧರ್ಮ' ಎಂಬ ವ್ಯಾಖ್ಯಾನ. 'ಹಿಂದೂ' ಎಂಬುದು ಒಂದು ದೇಶದ ಹೆಸರೇ ಹೊರತು ಅದೊಂದು ಧರ್ಮವಲ್ಲ. ಹಿಂದೂ ದೇಶದಲ್ಲಿ ಅನೇಕ ಧರ್ಮಗಳಿವೆ. ಸಿಂಧೂ ನದಿಯ ತೀರದಲ್ಲಿ ಭಾರತದ ಮೂಲನಿವಾಸಿಗಳು ವಾಸಿಸು ತ್ತಿದ್ದುದರಿಂದ ಅವರನ್ನು 'ಹಿಂದು' ಎಂದು ಕರೆಯಲಾಯಿತು. ಮೂಲನಿವಾಸಿಗಳಿದ್ದ ಆ ತಾಣದಲ್ಲಿ ಆರ್ಯರು ಬಂದು ಸೇರಿಕೊಂಡರು. ಅದೊಂದು ದೇಶವಾಗಿ ಬೆಳೆದ ನಂತರ ಭಾರತದಲ್ಲಿ ಇಂದು ಹಲವಾರು ಧರ್ಮೀಯರು, ಹಲವು ಬೇರೆ ಬೇರೆ ದೇಶದವರು ಬಂದು ಸೇರಿಕೊಂಡು ಶತಮಾನಗಳಿಂದ ಜೀವನ ಸಾಗಿಸುತ್ತಿದ್ದಾರೆ. ಆದರೆ ಈ ದೇಶದ ಹಿಂದು ಮತೀಯವಾದಿಗಳು, ಈ ದೇಶದಲ್ಲಿ ವಾಸಿಸುತ್ತಿರುವ ಪರಕೀಯರನ್ನು ವೈರಿಗಳಂತೆ ಕಾಣತೊಡ ಗಿದರು. ''ಪರಸ್ಪರ ವಿರೋಧೀ ಆಚಾರ-ವಿಚಾರಗಳುಳ್ಳ ಸಮಾಜಗಳನ್ನು ಸೇರಿಸಿ ರಾಷ್ಟ್ರವೆಂದು ಕರೆಯುವುದು ಬುದ್ಧಿಯ ದಿವಾಳಿತನದ ಲಕ್ಷಣ'', ಎಂದು ಹಿಂದೂ ಸಂಘಟನೆಯ ಸಂಸ್ಥಾಪಕರು ಸ್ಪಷ್ಟವಾಗಿ ಹೇಳಿದ್ದಾರೆ. ಹಲವಾರು ಆಚಾರ-ವಿಚಾರಗಳನ್ನಿಟ್ಟುಕೊಂಡು, ಪರಸ್ಪರ ಸೌಹಾರ್ದಯುತವಾಗಿ ಬಾಳುತ್ತಿದ್ದ ಹಿಂದೂ-ಮುಸ್ಲಿಂ ಜನಸಮುದಾಯಗಳ ನಡುವೆ ಈ ಹಿಂದೂ ಸಂಘಟನೆಗಳ ನಾಯಕರು ವಿಷಬೀಜಗಳನ್ನು ಬಿತ್ತಿದರು; ಅಲ್ಲಿಂದ ಹಿಂದೂ ಕೋಮುವಾದ ದಳ್ಳುರಿಯಾಗಿ ಕಾಣಿಸಿಕೊಂಡಿತು. ಹಿಂದೂ ಹೆಸರಿನಲ್ಲಿ ಮತ ಪಡೆಯುವ ಹುನ್ನಾರ ದಿಂದ ಇಂತಹ ಸಂಘಟನೆಗಳು ಹುಟ್ಟಿಕೊಂಡಿವೆಯೇ ಹೊರತು, ಇಂಥವರಿಗೆ ಹಿಂದೂ ಸಂಸ್ಕೃತಿಯ ನಿಜವಾದ ಅರ್ಥವೇ ತಿಳಿದಿಲ್ಲ.

ಇನ್ನು ಮುಸ್ಲಿಂ ಕೋಮುವಾದವೇನೂ ಕಡಿಮೆಯದಲ್ಲ. ಅಲ್ಲಿರುವ ಮುಲ್ಲಾಗಳು ಷರೀಯತ್‌ಅನ್ನು ತಪ್ಪಾಗಿ ಅರ್ಥೈಸಿ ಕೆಲವು ಮತೀಯ ಮುಸ್ಲಿಮರಿಗೆ ನಿಶೆ ಏರಿಸಿದರು. ಆಗ ಅನೇಕ ಮತೀಯ ಸಂಘಟನೆಗಳು ಹುಟ್ಟಿಕೊಂಡವು. ಅವುಗಳಲ್ಲಿ ಕೆಲವು ರಾಜಕೀಯ ಪಕ್ಷಗಳಾಗಿಯೂ ಬೆಳೆದುನಿಂತವು. ಇಂದು ಜಾಗತಿಕ-ಭಯೋತ್ಪಾದನೆಯಲ್ಲಿ ಈ ಮತೀಯ ಮುಸ್ಲಿಂ ನಾಯಕರ ಪಾತ್ರ ಪ್ರಧಾನವಾಗಿದೆ. ಇಸ್ಲಾಂ ಬಗೆಗೆ ಮತ್ತು ಷರೀಯತ್ ಕುರಿತಂತೆ ಜೀಯಾವುದ್ದೀನ್ ಸರದಾರ್ ತಮ್ಮ ಲೇಖನ ವೊಂದರಲ್ಲಿ ಮಹತ್ವದ ಮಾತುಗಳನ್ನು ಹೇಳಿದ್ದಾರೆ :

''ಇಸ್ಲಾಂ ಎಂಬುದು ನಿಜವಾಗಿ ಒಂದು ಧರ್ಮವೇ ಅಲ್ಲ; ಅದು ಹಲವು ದೃಷ್ಟಿಕೋನಗಳನ್ನು ಸಂಶ್ಲೇಷಿಸಿ ಕೊಂಡ ಒಂದು ಲೋಕಗ್ರಹಿಕೆ. ಮನುಷ್ಯಕುಲ ಎದುರಿಸುವ ಎಲ್ಲ ಸಮಸ್ಯೆಗಳಿಗೂ ಸಿದ್ಧವಾದ ಉತ್ತರಗಳು ಇಸ್ಲಾಂನಲ್ಲಿಲ್ಲ... ಹಾಗೆ ತಿಳಿಯದೆ ನಾವು ಷರೀಯತ್ ಅನ್ನೇ ದೈವಿಕವೆಂದೂ ಎಲ್ಲ ಕಾನೂನುಗಳೂ ಅದರಲ್ಲೇ ಅಡಕವಾಗಿವೆಯೆಂದೂ ಭಾವಿಸಿಬಿಟ್ಟರೆ, ಆಗ ಇಸ್ಲಾಂ ಎಂಬುದು ಕೇವಲ ಸರ್ವಾಧಿಕಾರಿ ಸಿದ್ಧಾಂತವಾಗಿ ಬಿಡುತ್ತದೆ. ಇವತ್ತಿನ ಹಲವಾರು ಇಸ್ಲಾಮಿ ಚಳುವಳಿಗಳು ಮಾಡುತ್ತಿರುವುದು ಇದನ್ನೇ. ಪಾಕಿಸ್ತಾನ ಮತ್ತು ಭಾರತದ ಅನೇಕ ಮುಸ್ಲಿಂ ಸಂಘಟನೆಗಳು ಇದನ್ನೇ ಮಾಡ ತೊಡಗಿವೆ ಮತ್ತು ಆ ಮೂಲಕ ಇಸ್ಲಾಂಅನ್ನು ಒಂದು ಸರ್ವಾಧಿಕಾರಿ ಸಿದ್ಧಾಂತವಾಗಿ ಅಪಾರ್ಥಗೊಳಿಸಿವೆ.''

ಜಿಯಾವುದ್ದೀನ್ ಅವರು ತಮ್ಮ 'ಇಸ್ಲಾಂನ ಮರು ಚಿಂತನೆ' ಎಂಬ ಲೇಖನದಲ್ಲಿ ಈ ಬಗೆಗೆ ವಿವರವಾಗಿ ಹೇಳಿದ್ದಾರೆ. (ಈ ಲೇಖನವನ್ನು ಕೆ. ವಿ. ಅಕ್ಷರ ಅವರು ಕನ್ನಡಕ್ಕೆ ಅನುವಾದಿಸಿದ್ದಾರೆ). ಹಿಂದೂ ಎಂಬುದು ಒಂದು ಧರ್ಮವಲ್ಲವೆಂದು ನಾನು ನನ್ನ ಅನೇಕ ಲೇಖನಗಳಲ್ಲಿ ಸ್ಪಷ್ಟಪಡಿಸಿದ್ದೇನೆ. ಅದೇ ರೀತಿ ಜಿಯಾವುದ್ದೀನ್ ಅವರು ಇಸ್ಲಾಂ ಎಂಬುದು ಒಂದು ಧರ್ಮವಲ್ಲ, ಅದು ಮನುಷ್ಯ ಬದುಕಿನ ಬಗೆಗೆ ಒಂದು ನೈತಿಕ ಅಭಿಪ್ರಾಯ ಹಾಕುವ ಒಂದು ಗ್ರಹಿಕೆಯೆಂದು ಹೇಳಿದ್ದಾರೆ. ಜಿಹಾದ್ ಬಗೆಗೂ ಕೂಡ ಅವರು ಮಹತ್ವದ ಮಾತುಗಳನ್ನಾಡಿದ್ದಾರೆ :

''ಜಿಹಾದ್ ಎಂಬ ಶಬ್ದವು ಇವತ್ತು ತೀರ ಸರಳೀಕರಣ ಗೊಂಡು ಧರ್ಮಯುದ್ಧವೆಂಬ ಏಕೈಕ ಅರ್ಥಕ್ಕೆ ವಾಹಕ ವಾಗಿಬಿಟ್ಟಿದೆ. ಈ ವ್ಯಾಖ್ಯಾನ ಅತ್ಯಂತ ವಿಕೃತವಾದದ್ದು. ಇವತ್ತು ಜಿಹಾದ್ ಅಂದರೆ, ಭಯೋತ್ಪಾದನೆಯೂ ಸೇರಿದಂತೆ ಯೇನಕೇನ ಪ್ರಕರಣಗಳಲ್ಲಿ ನಡೆಸುವ ಯಾವುದೇ ಯುದ್ಧವೂ ಆಗಬಹುದಾಗಿದೆ. ಹಾಗಾಗಿ ಇವತ್ತು ಯಾರ ಮೇಲೆ ಯಾರು ಬೇಕಿದ್ದರೂ ಜಿಹಾದ್‌ನ್ನು ಸಾರಬಲ್ಲವರಾಗಿದ್ದಾರೆ. ಅದಕ್ಕೆ ಯಾವ ನೈತಿಕ-ತಾರ್ಕಿಕ ನಿರ್ಬಂಧವೂ ಇಲ್ಲದಂತಾಗಿದೆ.''

ಜಿಯಾವುದ್ದೀನ್ ಅವರ ಈ ಮಾತುಗಳು ಜಿಹಾದ್ ಬಗೆಗೆ ಸ್ಪಷ್ಟ ಕಲ್ಪನೆಗಳನ್ನು ಮೂಡಿಸುತ್ತವೆ. ತಾಲಿಬಾನ್ ಬೆಂಬಲಿಗರು ತಮ್ಮ ಕೃತ್ಯವನ್ನು ಸಮರ್ಥಿಸಿಕೊಳ್ಳಲಿಕ್ಕೆ ಕುರಾನಿನ ಈ ಉಕ್ತಿಯನ್ನು ಉಲ್ಲೇಖಿಸಿದರು : ''ನಾವು ಧರ್ಮವನ್ನು ನಂಬದಿರುವ ಜನಗಳ ಹೃದಯದಲ್ಲಿ ಭಯವನ್ನು ಹುಟ್ಟಿಸುತ್ತೇವೆ. ಅವರು ಧರ್ಮದ ಸಮ್ಮತಿ ಇಲ್ಲದ ಬೇರೆ ದೇವರುಗಳನ್ನು ನಂಬುವಂಥವ ರಾದ್ದರಿಂದ ಅವರ ಮನೆಗಳು ನರಕಸದೃಶವಾಗುವಂತ ಮಾಡುತ್ತೇವೆ.'' (೩.೧೫೧) ತಾಲಿಬಾನ್ ಉಗ್ರರು ಆರೋಪಿಸಿದ ಈ ಅರ್ಥಕ್ಕೂ, ಕುರಾನಿನ ನಿಜವಾದ ಅರ್ಥಕ್ಕೂ ಅಜಗಜಾಂತರ ವ್ಯತ್ಯಾಸವಿದೆಯೆಂಬುದನ್ನು ಜಿಯಾವುದ್ದೀನ್ ಸ್ಪಷ್ಟಪಡಿಸಿದ್ದಾರೆ.

ಹೀಗೆ ವೇದಗಳನ್ನು - ಕುರಾನನ್ನು ತಪ್ಪಾಗಿ ಅರ್ಥೈಸುವುದು ಹಿಂದೂ ಹಾಗೂ ಮುಸ್ಲಿಂ ಮತಾಂಧ ಶಕ್ತಿಗಳ ಚಟವಾಗಿದೆ. ಇವರ ಚಟ ಮತ್ತು ಹಠದಿಂದ ಅನೇಕ ಅಮಾಯಕರು ಇಂದು ಬಲಿಯಾಗುತ್ತಿದ್ದಾರೆ. ಇವರ ಹೇಯ ಕೃತ್ಯಗಳಿಗೆ ಅನೇಕ ಪ್ರಸಂಗಗಳನ್ನು ಉದಾಹರಿಸಬಹುದಾಗಿದೆ. ಇತ್ತೀಚೆಗೆ ನಡೆದ ಗುಜರಾತ್‌ನ ಗೋಧ್ರಾ ಘಟನೆಯನ್ನು ತೆಗೆದುಕೊಂಡರೆ ಈ ನನ್ನ ಮಾತುಗಳ ಅರ್ಥ ಸ್ಪಷ್ಟವಾಗುತ್ತದೆ. ಗೋಧ್ರಾ ಒಂದು ಪೂರ್ವ ನಿಯೋಜಿತ ಭಯೋತ್ಪಾದಕ ಕೃತ್ಯವೆಂಬುದಕ್ಕೆ ಪೊಲೀಸರ ಚಾರ್ಜ್‌ಶೀಟ್‌ನಲ್ಲಿ ಯವುದೇ ಪುರಾವೆ ಗಳಿಲ್ಲ. ಆದರೆ ಗುಜರಾತ್‌ನ ಹತ್ಯಾಕಾಂಡವು ಅತ್ಯಂತ ವ್ಯವಸ್ಥಿತವಾಗಿ ನಡೆದಿದೆ. ನಮ್ಮ ಶಹಪುರದವರಾದ ಕೌಸರ್‌ಬಾನು ನರೋಡ, ಪಾಟಿಯಾ ಪ್ರದೇಶದಲ್ಲಿ ವಾಸ ವಾಗಿದ್ದರು. ಆಕೆಯ ಇಬ್ಬರು ಮಕ್ಕಳಾದ ಐದು ವರ್ಷದ ಆಸಿಫ್ ಮತ್ತು ಮೂರು ವರ್ಷದ ರಫಿಕ್ ಎಂಬುವ ವರನ್ನು ಆಕೆಯ ಕಣ್ಣೆದುರೇ ಸುಟ್ಟು ಕರಕಲು ಮಾಡಿದ್ದಾರೆ.

ಇದೇ ರೀತಿ ಮತೀಯ ಮುಸ್ಲಿಂ ಸಂಘಟನೆಗಳು ಕೋರ್ಟ್-ಕಚೇರಿ-ಸಾರ್ವಜನಿಕ ಸ್ಥಳಗಳಲ್ಲಿ ಬಾಂಬ್ ಇಟ್ಟು ಅಮಾಯಕರು ಸಾಯುವಂತೆ ಮಾಡಿದ್ದಾರೆ.

ಕೋಮುವಾದದಿಂದ ಉಂಟಾದ ಸಾವು-ನೋವುಗಳಿಗೆ ನಮ್ಮಲ್ಲಿ ಲೆಕ್ಕವಿಲ್ಲದಂತಾಗಿದೆ. ಇವೆಲ್ಲ ಸಹಜವೆಂಬಂತೆ ನಮ್ಮ ಕಣ್ಣಮುಂದೆ ದಿನನಿತ್ಯ ನಡೆಯುತ್ತವೆ.

ಭಯೋತ್ಪಾದನೆಯ ಬಗೆಗೆ ಚರ್ಚಿಸುವಾಗ ನಕ್ಸಲ್ ವಾದದ ಬಗ್ಗೆಯೂ ಪ್ರಸ್ತಾಪಿಸಬೇಕಾಗುತ್ತದೆ. ಮೂಲಭೂತ ವಾದಿಗಳಂತೆ, ಕೋಮುವಾದಿಗಳಂತೆ ನಕ್ಸಲ್‌ವಾದಿಗಳು ಭಯೋತ್ಪಾದಕರಲ್ಲ. ೧೯೬೭ರಲ್ಲಿ ಸಿ.ಪಿ.ಐ.(ಎಂ) ಪಕ್ಷದಿಂದ ಹೊರಹೋದ ನಕ್ಸಲೀಯರು ತಮ್ಮದೇ ಆದ ಸಿದ್ಧಾಂತಗಳನ್ನು ರೂಪಿಸಿಕೊಂಡರು. ಭಾರತದ ಆಳುವ ವರ್ಗವು ಸಾಮ್ರಾಜ್ಯಶಾಹಿಗಳ ಕೈಗೊಂಬೆಯಾಗಿದೆಯೆಂದು ನಂಬಿದ ಅವರು ಇಲ್ಲಿರುವ ಮಾಮೂಲು ಸಂಸದೀಯ ಹಕ್ಕುಗಳನ್ನು ನಿರಾಕರಿಸಿದರು. ಹೀಗಾಗಿ ಅವರಿಗೆ ಸಶಸ್ತ್ರ ಸಮರವೇ ಮುಂದಿನ ಹೋರಾಟದ ಹಾದಿಯಾಗಿ ಕಾಣಿಸಿತು. ಆದುದರಿಂದಲೇ ಅವರು ಚುನಾವಣೆಗಳನ್ನು ಬಹಿಷ್ಕರಿಸಿದರು. ಚುನಾವಣೆಯ ದಾರಿ ಕಳ್ಳರ ದಾರಿಯೆಂದು ಘೋಷಿಸಿದರು. ಆದರೆ ೧೯೭೭ರ ಹೊತ್ತಿಗೆ ಅವರು ಕೆಲವು ಚುನಾವಣೆಗಳಲ್ಲಿ ಭಾಗವಹಿಸಿದರು. ನಕ್ಸಲೀಯ ಗುಂಪಿನ ಕೆಲವು ಅಭ್ಯರ್ಥಿಗಳು ವಿಧಾನಸಭಾ ಸದಸ್ಯರಾಗಿ ಆಯ್ಕೆಯಾಗಿ ಬಂದರು. ನಂತರದ ಸಂದರ್ಭದಲ್ಲಿ ಅವರು ಪ್ರತಿಗಾಮಿ ಶಕ್ತಿಗಳನ್ನು ಬೆಂಬಲಿಸಿದರು. ಚುನಾವಣೆಯನ್ನು ಬಹಿಷ್ಕರಿಸುವ ಕ್ರಾಂತಿಕಾರಕ ಧೋರಣೆಯಿಂದ ಪ್ರಾರಂಭ ವಾದ ನಕ್ಸಲವಾದ ಸಂದರ್ಭಸಾಧಕ ರಾಜಕೀಯ ಮೈತ್ರಿಯ ಮಟ್ಟಕ್ಕೆ ಬಂದಿತು. ಭಾರತದಲ್ಲಿ ನೈಜವಾದ ಕ್ರಾಂತಿಯ ಹರಿಕಾರರು ತಾವೇ ಎಂದು ಘೋಷಿಸಿದ ನಕ್ಸಲೀಯರು ಕೆಲವು ಕಡೆ ಎಡಪಂಥೀಯ ಪಕ್ಷದ ಅಭ್ಯರ್ಥಿಗಳನ್ನು ವಿರೋಧಿಸಿ, ಮತೀಯವಾದಿ ಪಕ್ಷದಿಂದ ಸ್ಪರ್ಧಿಸಿದ ಅಭ್ಯರ್ಥಿಗಳಿಗೆ ಬೆಂಬಲ ಕೊಟ್ಟರು. ೧೯೬೭ರಲ್ಲಿ ಪ್ರಾರಂಭವಾದ ಅವರ ಕ್ರಾಂತಿಕಾರಕ ಹುರುಪು, ೧೯೭೧ರ ಹೊತ್ತಿಗೆ ಕುಸಿದುಹೋಯಿತು. ನಂತರದ ವರ್ಷಗಳಲ್ಲಿ ನಕ್ಸಲೀಯರು ಹತ್ತು-ಹಲವು ಗುಂಪು ಗಳಾಗಿ ಛಿದ್ರಗೊಂಡರು. ಹೀಗೆ ಗುಂಪು ಗುಂಪುಗಳಾಗಿ ಅಗಲಿಹೋಗುವುದರಿಂದ ಸಾಮೂಹಿಕ ಚಳುವಳಿಯನ್ನು ಕಟ್ಟುವದಾಗುವುದಿಲ್ಲವೆಂಬ ಸತ್ಯವನ್ನು ನಕ್ಸಲೀಯರು ಗಮನಕ್ಕೆ ತಂದುಕೊಳ್ಳಲಿಲ್ಲ.

ಭಾರತದಂತಹ ದೇಶದ ಜನತೆಯ ಮನಸ್ಸನ್ನು ನಕ್ಸಲೀಯರು ಅರ್ಥಮಾಡಿಕೊಳ್ಳಲಿಲ್ಲ. ನೇರವಾಗಿ ಸಶಸ್ತ್ರ ಹೋರಾಟಕ್ಕೆ ಕರೆ ಕೊಟ್ಟರು. ಸಾಮಾನ್ಯ ಜನತೆಯನ್ನು ಸಂಘಟಿಸುವುದಾಗಲಿ, ಶಿಸ್ತುಬದ್ಧ ಪಕ್ಷವನ್ನು ಕಟ್ಟಿ ಬೆಳೆಸುವುದಾಗಲಿ ಅವರ ಉದ್ದೇಶವಾಗಿರಲಿಲ್ಲ. ಹೀಗಾಗಿ ಅವರ ಹೋರಾಟ ದುಸ್ಸಾಹಸವಾಗಿ ಪರಿಣಮಿಸಿತು. ಕೆಲವು ನಕ್ಸಲೀಯರು ಪೊಲೀಸ್ ಠಾಣೆಗಳಿಗೆ ಮುತ್ತಿಗೆ ಹಾಕಿದರು, ಇನ್ನು ಕೆಲವರು ಬಾಂಬ್ ಸಿಡಿಸಿದರು, ಕೆಲವು ಭೂಮಾಲೀಕರನ್ನು ಶ್ರೀಮಂತರನ್ನು ಕೊಲೆ ಮಾಡಿದರು. ಹೀಗಾಗಿ ನಕ್ಸಲೀಯರ ಕ್ರಾಂತಿ ನನಸಾಗಲಿಲ್ಲ, ಕೆಲವು ಕಡೆ ನಕ್ಸಲೀಯರು ಶಸ್ತ್ರ ತ್ಯಜಿಸಿ ಸರೆಂಡರ್ ಆದ ಉದಾಹರಣೆಗಳೂ ಇವೆ.

ಈ ಕುರಿತು ಜನಸಾಮಾನ್ಯರಲ್ಲಿ ಅನೇಕ ತಪ್ಪು ಕಲ್ಪನೆ ಗಳಿವೆ. ಅಂತಹ ತಪ್ಪು ಕಲ್ಪನೆಗಳನ್ನು ಮತೀಯ ಪಕ್ಷಗಳು ಹಾಗೂ ಆಳುವ ಸರಕಾರಗಳು ಬಿತ್ತುತ್ತಲೇ ಇರುತ್ತವೆ. ಅನೇಕರು ನಕ್ಸಲೀಯರನ್ನು ಭಯೋತ್ಪಾದಕರೆಂದೇ ನಂಬಿದ್ದಾರೆ. ಆದರೆ ಕೋಮುವಾದಿಗಳಂತೆ ನಕ್ಸಲೀಯರು ಭಯೋತ್ಪಾದಕರಲ್ಲ.

ಪ್ರಾರಂಭದಲ್ಲಿ ಭಯೋತ್ಪಾದನೆಯನ್ನು ಈ ಜಗತ್ತಿನಲ್ಲಿ ಹುಟ್ಟುಹಾಕಿದ ಮೊದಲನೇ ಜಗತ್ತಿನ ದೇಶಗಳು ಇಂದು ಅದೇ ಭಯೋತ್ಪಾದಕರಿಂದಾಗಿ ತತ್ತರಿಸುವಂತಾಗಿದೆ. ಪುರಾಣದಲ್ಲಿ ಬರುವ ಭಸ್ಮಾಸುರನ ಕಥೆಯನ್ನು ಇಲ್ಲಿ ಸ್ಮರಿಸಿ ಕೊಳ್ಳಬಹುದಾಗಿದೆ. ಭಯೋತ್ಪಾದನೆಯೆಂಬುದು ಗರಗಸ ದಂತೆ, ಅದು ಹೋಗುತ್ತಲೂ ಕೊರೆಯುವುದು, ಬರುತ್ತಲೂ ಕೊರೆಯುವುದು. ಒಂದುಸಲ ಹುಟ್ಟಿ ಹೆಮ್ಮರವಾಗಿ ಬೆಳೆಯಿ ತೆಂದರೆ, ಅದು ತನ್ನನ್ನು ಹುಟ್ಟಿಸಿದವರನ್ನೇ ಕೊಂದು ಹಾಕುತ್ತದೆ. ಜಾಗತಿಕ ಭಯೋತ್ಪಾದನೆ ಇಂದು ಶ್ರೀಮಂತ ದೇಶಗಳ ನಿದ್ದೆಗೆಡಿಸಿದೆ. 'ಸೂಳೆಯ ಪಾಪ ಸಂನ್ಯಾಸಿಗೆ' ಎಂಬ ಗಾದೆ ಮಾತಿನಂತೆ ಇಂದು ಭಯೋತ್ಪಾದನೆಯ ಪಾಶವೀಕೃತ್ಯಗಳಿಂದ ಎಲ್ಲರೂ ತಲ್ಲಣಗೊಂಡಿದ್ದಾರೆ.

ಭಯೋತ್ಪಾದಕರು ಇಂದು ದೈತ್ಯಶಕ್ತಿಗಳಾಗಿ ಬೆಳೆಯ ತೊಡಗಿದ್ದಾರೆ. ಅವರ ದೃಷ್ಟಿಯಲ್ಲಿ ಬಡವ-ಶ್ರೀಮಂತ ಎಂಬ ಭೇದವಿಲ್ಲ, ನಗರ-ಹಳ್ಳಿ ಎಂಬ ತಾರತಮ್ಯವಿಲ್ಲ. ಜಗತ್ತಿನಲ್ಲಿ ಭಯ ಹುಟ್ಟಿಸುವುದು, ಜನಸ್ತೋಮವಿದ್ದ ಕಡೆಯಲ್ಲೆಲ್ಲ ಬಾಂಬ್ ಸ್ಫೋಟಿಸುವುದು ಮಾತ್ರ ಅವರ ಉದ್ದೇಶ. ಭಯೋತ್ಪಾದನೆ ಎಷ್ಟೊಂದು ಅಪಾಯಕಾರಿ ಯೆಂದರೆ, ಅದು ಏಕಕಾಲಕ್ಕೆ ವರ್ಗ-ವರ್ಣ ಸಂಘರ್ಷ ಗಳನ್ನು ತಣ್ಣಗಾಗಿಸುತ್ತದೆ. ಮನುಷ್ಯನ ಆಲೋಚನಾ ಶಕ್ತಿಯನ್ನೇ ಕುಗ್ಗಿಸಿ, ಸದಾ ಭಯದ ನೆರಳಲ್ಲಿ ಬದುಕುವಂತೆ ಮಾಡುತ್ತದೆ. ಪುರಾಣದ ರಾಕ್ಷಸರಿಗೆ ಕೆಲವೊಮ್ಮೆ ಅನುಕಂಪ-ಕರುಣೆಯೆಂಬುದಿರುತ್ತಿತ್ತು. ಆದರೆ ಇಂದಿನ ಭಯೋತ್ಪಾದಕರಿಗೆ ಅಂತಹದ್ದಾವುದೂ ಇಲ್ಲ. ಹೀಗಾಗಿ ಇವರು ರಾಕ್ಷಸರಿಗಿಂತ ಭಯಾನಕರಾಗಿದ್ದಾರೆ. ಭಯೋ ತ್ಪಾದಕರ ಅನೇಕ ಬಾಂಬ್‌ಸ್ಫೋಟಗಳಲ್ಲಿ ಅಮಾಯಕರು-ಮಹಿಳೆಯರು-ಮಕ್ಕಳು ಸತ್ತಿದ್ದಾರೆ. ಹೀಗಾಗಿ ಜಗತ್ತಿನ ಬಹುದೊಡ್ಡ ಸಮಸ್ಯೆ ಇಂದು ಭಯೋತ್ಪಾದನೆಯಾಗಿದೆ.

ಭಯೋತ್ಪಾದನೆಯ ನಿರ್ಮೂಲನೆಗೆ ನಾವಿಂದು ಕೈಗೊಳ್ಳಬೇಕಾಗಿರುವ ಕಾರ್ಯಕ್ರಮಗಳೇನು ? ಜಗತ್ತು ಇಂದು ಕಾಣುತ್ತಿರುವ ಆರ್ಥಿಕ ಬದಲಾವಣೆ ಹಾಗೂ ತಂತ್ರಜ್ಞಾನದ ಪ್ರಗತಿಯನ್ನು ಗಮನಿಸಿದಾಗ, 'ಬಂಡವಾಳ ಶಾಹಿ', 'ಸಾಮ್ರಾಜ್ಯಶಾಹಿ' ಎಂಬಂತಹ ಮಾರ್ಕ್ಸಿಸ್ಟ್ ಪರಿಭಾಷೆಯಲ್ಲಿ ಇವುಗಳನ್ನು ಅರ್ಥೈಸಲು ಸಾಧ್ಯವಿದೆಯೆ ? ಸಾಮಾಜಿಕ ಬದಲಾವಣೆ ಮಾಡುತ್ತೇವೆಂದು ಸ್ವಾತಂತ್ರ್ಯ ಸಿಕ್ಕಾಗಿನಿಂದ ಹೇಳಿಕೊಂಡು ಬರುತ್ತಲೇ ಇದ್ದೇವೆ. ಹಾಗೆ ನಾವು ನಂಬಿದ್ದ ಎಷ್ಟೋ ಸಿದ್ಧಾಂತಗಳು ಇಂದು ನಿರುಪಯುಕ್ತವಾಗಿಲ್ಲವೇ ? – ಇಂತಹ ಪ್ರಶ್ನೆಗಳ ಕುರಿತು ಇಂದು ಗಂಭೀರವಾಗಿ ಚರ್ಚಿಸಬೇಕಾಗಿದೆ.

ಭಯೋತ್ಪಾದನೆಗೆ ಕಾರಣವಾದ ಕೋಮುವಾದದ ವಿವಿಧ ಮುಖಗಳನ್ನು ಕಾಣಬಹುದಾಗಿದೆ. ಕೋಮುವಾದಿ ಮನೋಧರ್ಮದ ರಾಜಕೀಯ ನಾಯಕರು ಹಾಗೂ ಕೋಮುವಾದಿ ನಾಯಕರು ಒಟ್ಟಿಗೆ ಸೇರಿದ್ದರಿಂದಲೇ ಭಯೋತ್ಪಾದನೆ ಇಂದು ತೀವ್ರಸ್ವರೂಪವನ್ನು ಪಡೆದಿದೆ. 'ನಾನು ನಿನಗಿಂತ ಶ್ರೇಷ್ಠ', 'ನನ್ನ ಧರ್ಮ ನಿನ್ನ ಧರ್ಮಕ್ಕಿಂತ ಮೇಲು' ಎಂಬಂತಹ ಅಹಂಭಾವಗಳು ಮನಸ್ಸಿನಲ್ಲಿ ಹುಟ್ಟಿಕೊಂಡಾಗಲೇ ಕೋಮುವಾದದ ಬೀಜಗಳು ಚಿಗುರೊಡೆಯಲು ಪ್ರಾರಂಭಿಸುತ್ತವೆ. ಕೋಮುವಾದ ವೆಂಬುದು ಇಂದು ಸಾಮಾಜಿಕ ಮನೋಧರ್ಮವಾಗಿ ಬೆಳೆಯಲು ಪ್ರಾರಂಭಿಸಿದೆ. ನಿಜಕ್ಕೂ ಇದೊಂದು ಅಪಾಯಕಾರಿ ಬೆಳವಣಿಗೆಯಾಗಿದೆ.

ಗಾಂಧಿ ಹುಟ್ಟಿದ ನೆಲದಲ್ಲೇ ಗೋಡ್ಸೆ ಹುಟ್ಟಿದ್ದಾನೆ. ಪೈಗಂಬರ ಮತ್ತು ಲಾಡೆನ್ ಒಂದೇ ಧರ್ಮಕ್ಕೆ ಸೇರಿದವರು. ಏಸುಕ್ರಿಸ್ತನ ಧರ್ಮದಲ್ಲಿಯೇ ಬುಷ್ ಇದ್ದಾನೆ. ಆದರೆ ವ್ಯತ್ಯಾಸ ಎಷ್ಟಿದೆಯೆಂದರೆ ಒಬ್ಬರಿಗೊಬ್ಬರು ಪೂರ್ವ-ಪಶ್ಚಿಮದಷ್ಟು ವಿರುದ್ಧ ದಿಕ್ಕಿನಲ್ಲಿದ್ದಾರೆ. ಶಾಂತಿ-ಅಹಿಂಸೆಯ ಮಂತ್ರ ಸಾರಿದ ಗಾಂಧಿಯೆಲ್ಲಿ? ಗಾಂಧಿಯನ್ನೇ ಕೊಂದ ಗೋಡ್ಸೆ ಎಲ್ಲಿ? ಶಾಂತಿದೂತನಾದ ಪೈಗಂಬರನೆಲ್ಲಿ? ಭಯೋತ್ಪಾದಕನಾಗಿದ್ದ ಲಾಡೆನ್ ಎಲ್ಲಿ? ದಯಾಮೂರ್ತಿ ಏಸು ಎಲ್ಲಿ? ಬಂಡವಾಳಶಾಹಿಯ ಬುಷ್ ಎಲ್ಲಿ? ಒಂದೇ ಧರ್ಮದಲ್ಲಿ - ಒಂದೇ ಜನಾಂಗದಲ್ಲಿ - ಒಂದೇ ನೆಲದಲ್ಲಿ ಎಷ್ಟೊಂದು ವೈರುಧ್ಯಗಳು !

ಭಯೋತ್ಪಾದನೆ-ಯುದ್ಧೋತ್ಪಾದನೆಗಳು ಇಂದು ಸಾಮ್ರಾಜ್ಯಶಾಹಿಗಳಿಗೆ ಉದ್ದಿಮೆಗಳಾಗಿವೆ. ಬಡರಾಷ್ಟ್ರಗಳೂ ಕೂಡ ತಮ್ಮ ದೇಶದ ಬಜೆಟ್‌ನಲ್ಲಿ ಅರ್ಧದಷ್ಟನ್ನು ಶಸ್ತ್ರಾಸ್ತ್ರ ಖರೀದಿಗೆ ಮೀಸಲಿಡುವ ಅನಿವಾರ್ಯತೆ ಬಂದಿದೆ. ಇಂತಹ ಭಯಾನಕ ವಾತಾವರಣದಲ್ಲಿ ನಮಗೆ ಬುದ್ಧ-ಬಸವ-ಗಾಂಧಿಯಂಥವರು ತುಂಬ ಪ್ರಸ್ತುತರಾಗುತ್ತಾರೆ. ಅಹಿಂಸೆ-ದಯೆ-ಅಂತಃಕರಣಗಳಿಂದ ಮಾತ್ರ ಜಾಗತಿಕ ಭಯೋತ್ಪಾದನೆಯನ್ನು ಎದುರಿಸಲು ಸಾಧ್ಯವಿದೆ.

**ಡಾ॥ ಬಸವರಾಜ ಸಬರದ**
ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ - ೫೮೫ ೧೦೬



# ಪಾರಂಪರಿಕ ಮತ್ತು ಕೌಟುಂಬಿಕ ಸ್ತನ ಕ್ಯಾನ್ಸರ್




ಕೌಟುಂಬಿಕ ವಲಯದಲ್ಲಿ ಅನೇಕ ರೀತಿಯ ಕ್ಯಾನ್ಸರ್ ರೋಗ ಹೆಚ್ಚುತ್ತಿರುವುದನ್ನು ನಾವು ಗಮನಿಸಬಹುದು. ಕೌಟುಂಬಿಕವಾಗಿ ಗೋಚರಿಸುವ ಕ್ಯಾನ್ಸರ್‌ಗಳ ಮೂಲ ಕೆದಕಿದರೆ, ಪ್ರಾಕೃತಿಕ ಅಂಶ, ಆಹಾರ ಪದ್ಧತಿ, ಜೀವನಶೈಲಿಯಲ್ಲಿ ಸಾಮ್ಯತೆ ಸೇರಿದಂತೆ ಅನೇಕ ಸಾಮಾನ್ಯ ಅಂಶಗಳು ಕಂಡುಬರುತ್ತವೆ. ಇವೆಲ್ಲದ್ದಕ್ಕಿಂತಲೂ ಹೆಚ್ಚಾಗಿ ಅತ್ಯಂತ ಪ್ರಮುಖ ಅಂಶ ಅಂದರೆ, ವಂಶವಾಹಿಗಳು. ಸಾಮಾನ್ಯವಾಗಿ ಕಂಡುಬರುವ ಪಾರಂಪರಿಕ ಅಥವಾ ವಂಶ ಪಾರಂಪರ್ಯವಾದ ಸ್ತನ ಕ್ಯಾನ್ಸರ್, ಕುಟುಂಬವೊಂದರಲ್ಲಿ ಪರಿವರ್ತಿತ ವಂಶವಾಹಿಯಿಂದ ಉಂಟಾಗುವ ಕ್ಯಾನ್ಸರ್ ಎನ್ನಬಹುದು.




ಸ್ತನ ಕ್ಯಾನ್ಸರ್ ಪ್ರಕರಣಗಳಲ್ಲಿ ಬಹುತೇಕ ವೈಯಕ್ತಿಕ ಪ್ರಕರಣಗಳನ್ನು ಗಮನಿಸಿದರೆ ಅವರಲ್ಲಿ ಕೌಟುಂಬಿಕ ಅಥವಾ ಪಾರಂಪರಿಕ ಕ್ಯಾನ್ಸರ್‌ನ ಇತಿಹಾಸ ಕಾಣಲ್ಲ. (ಅಂದರೆ, ಅವರ ಕ್ಯಾನ್ಸರ್ ಕೇವಲ ವಿರಳ ಪ್ರಕರಣ ಅಷ್ಟೇ) ಆದರೆ, ಹೆಚ್ಚು ಕಡಿಮೆ ಶೇ. ೧೦ರಷ್ಟು ಸ್ತನ ಕ್ಯಾನ್ಸರ್ ಪ್ರಕರಣಗಳಲ್ಲಿ ಪಾರಂಪರಿಕ ಇತಿಹಾಸ ಇದ್ದೇ ಇದೆ. ಇಂದು, ಸಂಶೋಧಕರ ಪ್ರಕಾರ, ಸ್ತನ ಕ್ಯಾನ್ಸರ್ ಎರಡು ಜೀನ್‌ಗಳ ರೂಪಾಂತರ (ಖಾಯಂ ಪರಿವರ್ತನೆ ಅಥವಾ ಬದಲಾವಣೆ) ಜೊತೆ ತಳಕು ಹಾಕಿಕೊಂಡಿದೆ. ಎರಡು ಜೀನ್‌ಗಳು ಎಂದರೆ, ಬಿಆರ್‌ಸಿಎ ೧ ಮತ್ತು ಬಿಆರ್‌ಸಿಎ ೨. ಈ ಎರಡು ವಂಶವಾಹಿಗಳಲ್ಲಿ ಉಂಟಾಗುವ ಬದಲಾವಣೆ ಶೇ. ೫೦ರಷ್ಟು ಸ್ತನ ಕ್ಯಾನ್ಸರ್‌ಗೆ ಕಾರಣ. ಆದರೂ, ವಿಜ್ಞಾನಿಗಳು ಸ್ತನ ಕ್ಯಾನ್ಸರ್‌ಗೆ ಕಾರಣವಾದ ಇತರೆ, ಅಂದರೆ ಪಿಇಟಿಎನ್, ಪಿ ೫೩ ಮೊದಲಾದ ವಂಶವಾಹಿಗಳ ಕುರಿತು ಕೂಡಾ ಅಧ್ಯಯನ ಮುಂದುವರೆಸಿದ್ದಾರೆ.



ಪಾರಂಪರಿಕ ಸ್ತನಕ್ಯಾನ್ಸರ್ ಹೊಂದಿರುವ ಯಾವುದೇ ಕುಟುಂಬದಲ್ಲಿ, ಪ್ರತಿ ಮಗುವಿನ ತಾಯಿ ವಂಶವಾಹಿಯಲ್ಲಿ ಸ್ತನ ಕ್ಯಾನ್ಸರ್‌ನ ವಂಶವಾಹಿ ಇದ್ದೇ ಇರುತ್ತದೆ. ಅದು ಕೂಡ ಶೇ. ೫೦ರಷ್ಟು ಆನುವಂಶಿಕ ಬದಲಾವಣೆಯ ಗುಣ ಹೊಂದಿದ್ದು, ಸ್ತನ ಕ್ಯಾನ್ಸರ್ ಪಸರಿಸುವ ಸಾಧ್ಯತೆ ಇದೆ. ಆನುವಂಶಿಕ ಬದಲಾವಣೆಯ ವಂಶವಾಹಿ ಹೊಂದಿರುವ ಒಬ್ಬ ವ್ಯಕ್ತಿಯಲ್ಲಿ ಇತರರಿಗಿಂತ ಬಹುಬೇಗ ಸ್ತನ ಕ್ಯಾನ್ಸರ್ ಉಂಟಾಗುವ ಸಾಧ್ಯತೆ ಹೆಚ್ಚು. ಸಾಮಾನ್ಯ ಮಹಿಳೆಯಲ್ಲಿ ಆಕೆಯ ಜೀವಿತಾವಧಿಯಲ್ಲಿ ಶೇ. ೧೨ರಷ್ಟು ಪ್ರಮಾಣದಲ್ಲಿ ಸ್ತನ ಕ್ಯಾನ್ಸರ್ ಸಂಭವಿಸುವ ಅಪಾಯ ಇದ್ದೇ ಇದೆ. ಅಂದರೆ, ಯಾವ ಮಹಿಳೆಯಲ್ಲಿ ಬಿಆರ್‌ಸಿಎ ೧ ಮತ್ತು ಬಿಆರ್‌ಸಿಎ ೨ ವಂಶವಾಹಿಗಳು ಇರುತ್ತವೆಯೋ, ಆಕೆಯ ಬದುಕಿನಲ್ಲಿ ಶೇ. ೫೦ರಿಂದ ೮೫ರಷ್ಟು ಸ್ತನ ಕ್ಯಾನ್ಸರ್‌ನ ಅಪಾಯ ಇದೆ. ಅದೇ ರೀತಿ, ಬದುಕಿನಲ್ಲಿ ಶೇ. ೧೦ರಿಂದ ೬೦ರಷ್ಟು ಅಂಡಾಶಯದ ಕ್ಯಾನ್ಸರ್ ಕಾಡುವ ಭೀತಿ ಇದೆ. ಇದು ಕೇವಲ ಮಹಿಳೆಯರಿಗೆ ಮಾತ್ರ ಸೀಮಿತ ಅಂದುಕೊಳ್ಳಬೇಡಿ.

ಪುರುಷರಲ್ಲಿ ಕೂಡ ಬಿಆರ್‌ಸಿಎ ೧ ಮತ್ತು ಬಿಆರ್‌ಸಿಎ ೨ ವಂಶವಾಹಿಗಳ ರೂಪಾಂತರದಿಂದ ಸ್ತನ ಕ್ಯಾನ್ಸರ್ ಸಾಧ್ಯತೆ ಹೆಚ್ಚಾಗಿದೆ. ಇದಲ್ಲದೇ, ಪುರುಷರಲ್ಲಿ ಮೇದೋಜೀರಕ ಗ್ರಂಥಿ, ಪ್ರೋಸ್ಟೇಟ್ ಕ್ಯಾನ್ಸರ್ ಕೂಡ ಕಾಡುವ ಸಾಧ್ಯತೆ ಇದೆ. ಸ್ತನ ಕ್ಯಾನ್ಸರ್ ಬಗ್ಗೆ ಸುಳಿವು ನೀಡುವ ಅಂಶಗಳಿವು.

ಪಾರಂಪರಿಕ ಸ್ತನ ಕ್ಯಾನ್ಸರ್‌ನ ಅತ್ಯಂತ ಪ್ರಮುಖ ಅಪಾಯಕಾರಿ ಅಂಶ ಕೌಟುಂಬಿಕ ಇತಿಹಾಸ. ತಮ್ಮ ಕೌಟುಂಬಿಕ ಇತಿಹಾಸ ಗಮನಿಸುವಾಗ, ತಂದೆ ಮತ್ತು ತಾಯಿಯ ಕೌಟುಂಬಿಕ ಇತಿಹಾಸ ಕೂಡ ಗಣನೆಗೆ ತೆಗೆದುಕೊಳ್ಳಬೇಕು. ರೂಪಾಂತರಗೊಳ್ಳುವ

ವಂಶವಾಹಿಗಳು ಯಾರ ಮೂಲಕ ಬೇಕಾದರೂ ಬರಬಹುದು. ಸ್ತನ ಕ್ಯಾನ್ಸರ್‌ಗೆ ಸಂಬಂಧಿಸಿದಂತೆ ಇರುವ ಎಲ್ಲ ರೀತಿಯ ಕ್ಯಾನ್ಸರ್‌ಗಳ ಮಾಹಿತಿಯನ್ನು ಸಂಗ್ರಹಿಸುವುದು. ಕೆಲವೊಂದು ''ರೆಡ್ ಫ್ಲ್ಯಾಗ್ಸ್'' ಅನುವಂಶಿಕ ಸ್ತನ ಕ್ಯಾನ್ಸರ್‌ನ ಹೆಚ್ಚಿದ ಅಪಾಯವನ್ನು ಸೂಚಿಸುತ್ತದೆ.

೫೦ ವರ್ಷ ವಯಸ್ಸಿನ ಮೊದಲು ಸ್ತನ ಕ್ಯಾನ್ಸರ್ ಡಯಾಗ್ನೋಸಿಸ್ ತಂದೆ ಅಥವಾ ತಾಯಿ ಕಡೆ ಸಂಬಂಧಿಕರಲ್ಲಿ ಅಂಡಾಶಯದ ಕ್ಯಾನ್ಸರ್ ಬೈಲಾಟರಲ್ ಬ್ರೆಸ್ಟ್ ಕ್ಯಾನ್ಸರ್ ಅಥವಾ ಎರಡೂ ಸ್ತನಗಳಲ್ಲಿ ಕ್ಯಾನ್ಸರ್ ಯಾವುದೇ ವಯಸ್ಸಿನಲ್ಲಿ ಅಂಡಾಶಯದ ಕ್ಯಾನ್ಸರ್ ಪುರುಷರಲ್ಲಿ ಸ್ತನ ಕ್ಯಾನ್ಸರ್ ಸ್ತನ ಅಥವಾ ಅಂಡಾಶಯದ ಕ್ಯಾನ್ಸರ್‌ಗೆ ಸಂಬಂಧಿಸಿದ ಯಹೂದಿ ಮನೆತನದ ಇತಿಹಾಸ.

ಬಿಆರ್‌ಸಿಎ ೧ ಮತ್ತು ಬಿಆರ್‌ಸಿಎ ೨ ವಂಶವಾಹಿಗಳ ಧನಾತ್ಮಕ ಅಂಶ ಹೊಂದಿರುವ ಸಂಬಂಧಿಯ ಪರೀಕ್ಷೆ ನೀವು ಏನು ಮಾಡಬಹುದು ? ಸ್ತನ ಕ್ಯಾನ್ಸರ್ ತಡೆಗೆ, ತಪಾಸಣೆ ವಂಶವಾಹಿ ಪರೀಕ್ಷೆ ಮತ್ತು ಸಮಾಲೋಚನೆಗಾಗಿ ನಿಮಗೆ ಆರೋಗ್ಯ ಸೇವೆ ಒದಗಿಸುವವರನ್ನು ಭೇಟಿ ಮಾಡಿ.

ನಿಮ್ಮ ಕುಟುಂಬದಲ್ಲಿ ಸ್ತನ ಕ್ಯಾನ್ಸರ್‌ನ ಇತಿಹಾಸ ಇದ್ದರೆ, ಪದೇಪದೇ ತಪಾಸಣೆ, ಪರೀಕ್ಷೆ ಅತಿ ಅಗತ್ಯ. ಇದರಲ್ಲಿ ಕ್ಲಿನಿಕಲ್ ಮತ್ತು ಸೆಲ್ಫ್ ಬ್ರೆಸ್ಟ್ ಎಕ್ಸಾಂ, ಮ್ಯಾಮ್ಮೋಗ್ರಾಮ್ಸ್ ಕೂಡ ಒಳಗೊಂಡಿದೆ. (ಸಾಮಾನ್ಯ ಜನರಿಗಿಂತ ಈ ಇತಿಹಾಸ ಹೊಂದಿದ ಕುಟುಂಬದಲ್ಲಿ ಜನಿಸುವ ಮಗುವಿಗೆ ಸಾಮಾನ್ಯವಾಗಿ ೫ರಿಂದ ೧೦ ವರ್ಷ ವಯಸ್ಸಿನೊಳಗೆ ಸ್ತನ ಮತ್ತು ಅಂಡಾಶಯದ ಕ್ಯಾನ್ಸರ್ ಕಾಣಿಸುವ ಸಾಧ್ಯತೆ ಇದೆ.) ಇದಲ್ಲದೇ ಕೆಲವೊಂದು ಮೆಡಿಕಲ್ ಮತ್ತು ಸರ್ಜಿಕಲ್ ವಿಧಾನದ ಮೂಲಕ ಸ್ತನ ಕ್ಯಾನ್ಸರ್ ಅಪಾಯವನ್ನು ಕಡಿಮೆ ಮಾಡಬಹುದು.

ಬಿಆರ್‌ಸಿಎ ೧ ಮತ್ತು ಬಿಆರ್‌ಸಿಎ ೨ ಪಿಟಿಇಎನ್ ಮತ್ತು ಪಿ ೫೩ ವಂಶವಾಹಿಗಳ ಬದಲಾವಣೆಗಳ ಕುರಿತ ವಂಶವಾಹಿ ಕೌನ್ಸೆಲಿಂಗ್ ಮತ್ತು ವಂಶವಾಹಿ ಪರೀಕ್ಷೆ ಕೂಡಾ ಇದೀಗ ಲಭ್ಯವಿದೆ. ವಂಶವಾಹಿ ಕೌನ್ಸೆಲರ್ಸ್ ಇದರ ಅಧ್ಯಯನ ನಡೆಸಿ ವಂಶವಾಹಿ ರೋಗಗಳು, ಅಪಾಯಗಳ ಬಗ್ಗೆ ವಿಶ್ಲೇಷಣೆ ನಡೆಸಿ ಅರಿವು ನೀಡುವಲ್ಲಿ ಸಹಕರಿಸುತ್ತಾರೆ. ಇದರಿಂದ ಅತಿ ಹೆಚ್ಚು ಅಪಾಯ ಹೊಂದಿರುವ ಕುಟುಂಬದ ಸದಸ್ಯರನ್ನು ಗುರುತಿಸುವುದರಿಂದ ಅವರಿಗೆ ಸೂಕ್ತ ಚಿಕಿತ್ಸೆ ನೀಡುವುದು ಸಾಧ್ಯ.



**Dr. Niti Raizada Narang**
MD, DNB, DM (Med. Onc), ECMO
Hematology & Stem Cell Transplant
Fellowship, Hammersmith, London
Gold Medalist, President of India Awardee
**Consultant Medical Oncologist**
vikram hospital, millers road, bengaluru
**appointment ☎: +91-99000-14824**

# ಅಲೆಮಾರಿ ಕಮ್ಮಾರರ ಬದುಕು ಮತ್ತು ತುತ್ತು ಅನ್ನಕ್ಕಾಗಿ ಅಲೆದಾಟ



ಅಕ್ಟೋಬರ್ ತಿಂಗಳು ಮುಗಿಯಿತೆಂದರೆ ರಾಷ್ಟ್ರೀಯ ಹೆದ್ದಾರಿ ಅಕ್ಕಪಕ್ಕ, ಗ್ರಾಮೀಣ ಪ್ರದೇಶಗಳಲ್ಲಿ ಅಲೆಮಾರಿ ಕಮ್ಮಾರರ ಕಲರವ ಹೆಚ್ಚಾಗಿರುತ್ತದೆ. ಹತ್ತಾರು ಅಲೆಮಾರಿ ಕುಟುಂಬಗಳು ಈ ಪ್ರದೇಶಗಳಲ್ಲಿ ವಾಸ್ತವ್ಯ ಹೂಡುತ್ತಾರೆ. ಸಾಮಾನ್ಯವಾಗಿ ಕೃಷಿ ಪ್ರದೇಶಗಳನ್ನು ಹುಡುಕುತ್ತಾ ವಲಸೆ ಬರುವ ಇವರು ರೈತರ, ಕೃಷಿ ಕಾರ್ಮಿಕರ ಸಲಕರಣೆಗಳನ್ನು ತಯಾರಿಸುವಲ್ಲಿ ನಿರತರಾಗುತ್ತಾರೆ. ಇವರು ಮಾಡಿದ ಕೃಷಿ ಸಲಕರಣೆ ಕೊಳ್ಳಲು ಅಕ್ಕಪಕ್ಕದ ಗ್ರಾಮದ ರೈತರು ಮುಗಿಬೀಳುತ್ತಾರೆ. ಒಂದು ರೀತಿಯಲ್ಲಿ ಇದು ಕೃಷಿ ಸಲಕರಣೆಗಳ ಮೇಳವಾಗಿರುತ್ತದೆ. ಕೆಲವರು ಹೊಸದನ್ನು ಕೊಂಡರೆ, ಕೆಲ ಜನ ಹಳೆ ಕಬ್ಬಿಣ ಕೊಟ್ಟು ತಮಗೆ ಬೇಕಾದ ಸಲಕರಣೆ ಮಾಡಿಸಿಕೊಳ್ಳುತ್ತಾರೆ.

ಹತ್ತಾರು ವರ್ಷಗಳ ಹಿಂದೆ ಗ್ರಾಮೀಣ ಹಾಗೂ ಪಟ್ಟಣ ಪ್ರದೇಶಗಳಲ್ಲಿ ಕಮ್ಮಾರಿಕೆ, ಬಡಿಗತನ, ಚಮ್ಮಾರಿಕೆ ಮುಂತಾದ ಉದ್ಯೋಗಗಳನ್ನೇ ನಂಬಿಕೊಂಡ ಜನರು ಸುಖಮಯ ಜೀವನ ಸಾಗಿಸುತ್ತಿದ್ದರು. ಅಲ್ಲದೆ ತಮ್ಮ ಮೂಲ ವಾಸಸ್ಥಳದಲ್ಲಿಯೇ ವಾಸವಾಗಿರುತ್ತಿದ್ದರು. ಈ ಕಸಬುಗಳನ್ನೇ ನಂಬಿಕೊಂಡು ಬದುಕುತ್ತಿದ್ದ ಜನರಿಗೆ ರೈತರು ತಾವು ಬೆಳೆದುದರಲ್ಲಿ ಸ್ವಲ್ಪ ಪಾಲು ನೀಡುತ್ತಿದ್ದರು. ಇದರಿಂದ ಈ ಜನಾಂಗ ನೆಮ್ಮದಿಯಿಂದ ಬದುಕುತ್ತಿದ್ದರು.

ಆದರೆ ಇಂದಿನ ಆಧುನಿಕ ಯಾಂತ್ರಿಕ ಬದುಕಿನಲ್ಲಿ ನಾವು ಪ್ರತಿಯೊಂದು ಕೆಲಸಕ್ಕೂ ಯಂತ್ರಗಳನ್ನೇ ಅವಲಂಬಿಸಿದ್ದೇವೆ. ಕಮ್ಮಾರಿಕೆಯಂತಹ ಕಸಬುಗಳನ್ನು ನಂಬಿಕೊಂಡು ಬದುಕುವ ಜನಾಂಗವು ಕೆಲಸವಿಲ್ಲದೆ ಬೇರೆ ಉದ್ಯೋಗ ಅರಸಿ ವಲಸೆ ಹೋಗುತ್ತಿದ್ದಾರೆ. ಇದರಿಂದ ರೈತರು ಕೃಷಿ ಸಲಕರಣೆ ಮಾಡಿಸಿಕೊಳ್ಳಲು ಹತ್ತಿರದ ಪಟ್ಟಣಕ್ಕೆ ಹೋಗಬೇಕು. ಇಂತಹ ಸಂದರ್ಭದಲ್ಲಿ ಕುದುರೆಗಳ ಗಾಡಿ, ಕತ್ತೆಗಳ ಮೇಲೆ ಗಾಳಿಯಂತ್ರ, ದೊಡ್ಡ-ದೊಡ್ಡ ಸುತ್ತಿಗೆಗಳು, ಪಾತ್ರೆ-ಪಗಡಗಳು, ಇತ್ಯಾದಿಗಳನ್ನು ಹೇರಿಕೊಂಡು ಊರಿಂದ ಊರಿಗೆ ಅಲೆಯುವ ಅಲೆಮಾರಿ ಕುಟುಂಬಗಳು ಕಮ್ಮಾರಿಕೆಯನ್ನೇ ನಂಬಿಕೊಂಡು ಕೆಲವು ದಿನ ನಗರ ಪ್ರದೇಶಗಳಲ್ಲಿ, ಕೆಲವು ದಿನ ಹಳ್ಳಿಗಳಲ್ಲಿ ಪ್ಲಾಸ್ಟಿಕ್ ಗುಡಿಸಲು ಹಾಕಿಕೊಂಡು ಸುಮಾರು ಹದಿನೈದರಿಂದ ಇಪ್ಪತ್ತು ದಿನಗಳವರೆಗೆ ಬೀಡುಬಿಟ್ಟು ಕೃಷಿಕರ ಬದುಕಿನ ಮೂಲ ಒಕ್ಕಲುತನಕ್ಕೆ ಅವಶ್ಯವಾಗಿರುವ ಗುದ್ದಲಿ, ಕುಂಟೆ, ರಂಟೆ, ಕೂರಿಗೆ, ಕೊಡಲಿ, ಕಂದಲಿ, ಕುರ್ಜಿಗಿ, ಅಲ್ಲದೆ ಚಕ್ಕಡಿ ಹಳಿ ಹಾಕುವುದರಿಂದ ಹಿಡಿದು ಇತರೆ ಸಲಕರಣೆಗಳನ್ನು ರೈತರಿಗೆ ತಯಾರಿಸಿಕೊಡುತ್ತಾರೆ.

ಈ ಅಲೆಮಾರಿ ಕುಟುಂಬದ ಪುರುಷರು ಕುಲುಮೆಯಲ್ಲಿ ಕಬ್ಬಿಣ ಹದಗೊಳಿಸಿದರೆ, ಮಹಿಳೆಯರು ಕಾಯಿಸಿ ಹದಗೊಳಿಸಿದ ಕಬ್ಬಿಣಕ್ಕೆ ದೊಡ್ಡ ಸುತ್ತಿಗೆಯಿಂದ ಏಟು ಹಾಕುತ್ತಾರೆ. ನೆತ್ತಿಯ ಮೇಲೆ ಸುಡು ಬಿಸಿಲು. ಜೊತೆಗೆ, ಆಗಾಗ ತುಂತುರು ಮಳೆ ಹನಿ, ಎದುರಿಗಿನ ಕುಲುಮೆಯಲ್ಲಿಯ ಬೆಂಕಿಯ ಜ್ವಾಲೆಯ ಚುರುಕು, ಪೆಟ್ಟು ಹಾಕುವ ಹೆಂಗಳೆಯರ ಮುಖದ ಗುಂಟ ಜಿನುಗುವ ಬೆವರು, ಕಬ್ಬಿಣ ಬಾಗಿದರೂ ಈ ಹೆಂಗಳೆಯರಿಗೆ ಬಳಲಿಕೆ ಎನ್ನುವುದೇ ಇರುವುದಿಲ್ಲ. ಮಕ್ಕಳಿಗೆ ಮನೆಮನೆ ತಿರುಗಿ ಇದ್ದಿಲು ತರುವ ಮತ್ತು ಗಾಳಿಯಂತ್ರ ತಿರುಗಿಸುವ ಕೆಲಸ. ಅಲ್ಲದೇ ಈ ಕಾಯಕದ ನೆರಳಲ್ಲಿ, ಕುಲುಮೆಯ ಬಿಸಿಯಲ್ಲಿ ಬೆಳೆಯುತ್ತಿರುವ ಹಸುಗೂಸುಗಳು. ಇದು ಈ ಅಲೆಮಾರಿ ಕುಟುಂಬಗಳ ದೈನಂದಿನ ಬದುಕಿನ ಚಿತ್ರ.

ಈ ಅಲೆಮಾರಿಗಳು ಮೂಲತಃ ಮಹಾರಾಷ್ಟ್ರದವರು. ಮರಾಠಿ ಜೊತೆ ಕನ್ನಡವನ್ನು ಚೆನ್ನಾಗಿ ಮಾತನಾಡುತ್ತಾರೆ. ಕಮ್ಮಾರಿಕೆಯನ್ನೆ ನಂಬಿಕೊಂಡು ಬದುಕು ಸಾಗಿಸುವ ಇವರು ದಿನವೊಂದಕ್ಕೆ ೨೦೦ರಿಂದ ೫೦೦ ರೂ. ಗಳಿಸುತ್ತಾರೆ. ಗಳಿಸಿದ ಹಣದಲ್ಲಿ ಸ್ವಲ್ಪ ಇದ್ದಿಲಿಗೆ ಖರ್ಚಾದರೆ, ಅರ್ಧಕ್ಕಿಂತಲೂ ಹೆಚ್ಚು ಹಣ ಸಾರಾಯಿಗೆ ಖರ್ಚಾಗುತ್ತದೆ ಎಂದು ಆ ಜನಾಂಗದ ಹಿರಿಯ ಮಹಿಳೆ ಹೇಳುತ್ತಾಳೆ.

ಶ್ರಮಕ್ಕೆ ತಕ್ಕ ಆದಾಯವೇನೋ ಬರುತ್ತೆ, ಆದರೆ ತಲೆಯ ಮೇಲಿನ ಹರಕು ಜೋಪಡಿ ಬಿಟ್ಟರೆ ನೆಲವೇ ಹಾಸಿಗೆ, ನಿಲ್ಲುವುದಕ್ಕೆ ಸರಿಯಾದ ನೆಲೆಯಿಲ್ಲದೆ ಮಳೆ, ಬಿಸಿಲು, ಚಳಿಯಲ್ಲಿ ಕಷ್ಟಪಡಬೇಕಾಗಿದೆ. ಕಮ್ಮಾರಿಕೆಯನ್ನೇ ನಂಬಿಕೊಂಡಿರುವ ಈ ಅಲೆಮಾರಿ ಜನಾಂಗ ಶಿಕ್ಷಣದಿಂದಲೂ ದೂರ ಉಳಿಯುವಂತಾಗಿದೆ.

''ಉದರ ಪೋಷಣೆಗಾಗಿ ಊರೂರು ಸುತ್ತುವ ನಮಗೆ ಯಾವಾಗ ಶಾಲೆಗೆ ಹೋಗಾಕ ಆಗತ್ತೇರಿ. ಒಂದೇ ಊರಾಗ ನೆಲೆ ನಿಂತಿದ್ರ ಮಕ್ಕಳನ್ನ ಶಾಲೆಗೆ ಕಳಿಸಬಹುದಾಗಿತ್ತು. ಊರೂರು ಅಲೆಯದಿದ್ರ ಬದುಕು ಸಾಗಿಸುವುದು ಅಸಾಧ್ಯ'' ಎನ್ನುತ್ತಾನೆ ಅಲೆಮಾರಿಗಳಲ್ಲೇ ಹಿರಿಯನಾದ ವೆಂಕೋಬ. ''ನಮ್ಮ ಹಿರೇರು ನಮಗೆ ಸಾಲಿ ಗೀಲಿ ಏನೂ ಕಲಿಸಿಲ್ರಿ, ಮೈಮುರಿದು ದುಡಿಯೋದನ್ನ ಮಾತ್ರ ಕಲಿಸ್ಯಾರ್ರಿ'' ಎಂದು ವಿಷಾದದ ನಗೆ ಬೀರುತ್ತಾ, ''ನಮಗೆ ಹೊಲ ಮನಿ ಯಾವುದು ಇಲ್ಲಾರಿ, ನಮ್ಮ ನೆಂಟರೆಲ್ಲಾ ಪಂಡರಾಪುರದಲ್ಲಿದ್ದಾರ್ರಿ. ಅಲ್ಲಿಂದ ಇಲ್ಲಿವರೆಗೆ ಊರೂರು ತಿರುಗುತ್ತಾ ಬಂದಿವ್ರಿ. ಈಗ ಇಲ್ಲಿಗೆ ಬಂದೇವ್ರಿ. ಮುಂದೆ ಪಕ್ಕದೂರಿಗೆ ಹೋಗ್ತೇವ್ರಿ'' ಎನ್ನುತ್ತಾನೆ ಅಲೆಮಾರಿ ಯುವಕ ಪಾಂಡು.

ಈ ಅಲೆಮಾರಿಗಳು ಈ ಉದ್ಯೋಗದೊಂದಿಗೆ ನಾಡ ತುಂಬಾ ಓಡಾಡುತ್ತಿದ್ದಾರೆ. ನಿಶ್ಚಿತವಾದ ನೆಲೆಯಿಲ್ಲದೆ, ಅಲೆಮಾರಿಗಳಾಗಿಯೇ ಜೀವನ ನಡೆಸುತ್ತಿದ್ದಾರೆ. ಹಗ್ಗ ಹಾಗೂ ಪ್ಲಾಸ್ಟಿಕ್ ಹಾಳೆಯ ಹೊದಿಕೆಯಿಂದ ನಿರ್ಮಿಸಿದ ಪುಟ್ಟದೊಂದು ಜೋಪಡಿಯೆ ಅವರ ಅರಮನೆ. ಇವರು ತಮ್ಮ ಕುಟುಂಬದ ಸದಸ್ಯರನ್ನು ಆಗಾಗ ಕಾಣುವುದೇ ಅಪರೂಪ, ಕಷ್ಟವೂ ಕೂಡ. ಹೀಗಾಗಿ ಅವರು ಕುಟುಂಬದ ಸದಸ್ಯರನ್ನು ಸೇರಬೇಕಾದರೆ ವರ್ಷಗಳೇ ಆಗುತ್ತದೆಯಂತೆ.

ಸ್ತ್ರೀ, ಪುರುಷ, ಮಕ್ಕಳೆನ್ನದೆ ದೈಹಿಕ ಶ್ರಮವನ್ನು ನೆಚ್ಚಿಕೊಂಡು ಬದುಕುತ್ತಿರುವ ಅಲೆಮಾರಿ ಕಮ್ಮಾರರು ಕೃಷಿಕರ ಒಡನಾಡಿಗಳು. ನಶಿಸುತ್ತಿರುವ ಕಮ್ಮಾರಿಕೆಯಿಂದ ಇವರ ಕುಲುಮೆಗಳಿಗೆ ಅಪಾರ ಬೇಡಿಕೆ ಇದ್ದರೂ ಒಂದೆಡೆ ನಿಂತು ಬದುಕುವಷ್ಟು ಆದಾಯವಿಲ್ಲ! ಪ್ಲಾಸ್ಟಿಕ್ ಟೆಂಟಲ್ಲಿ, ಮಿಣುಕು ದೀಪದಲ್ಲಿ ವಾಸಿಸುವ ಈ ಅಲೆಮಾರಿಗಳಿಗೆ ಗಟ್ಟಿಯಾದ ನೆಲೆಯೊದಗಿಸಬೇಕಾಗಿದೆ.




ಲೇಖನ / ಚಿತ್ರಗಳು : **ನಾಮದೇವ ಕಾಗದಗಾರ**

ಕಲಾವಿದ, 'ಶ್ರೀಹರಿ ನಿಲಯ', ೩ನೇ ಅಡ್ಡರಸ್ತೆ, ೧ನೇ ಮುಖ್ಯರಸ್ತೆ, ಅಶೋಕ ನಗರ, ರಾಣೆಬೆನ್ನೂರು - ೫೮೧ ೧೧೫



ಚರಿತ್ರೆಯಲ್ಲಿ ಎರಡು ಭಾಷೆಗಳಿವೆ. ಒಂದನೆಯದು 'ನೀಡುವವರ' ಭಾಷೆ. ಎರಡನೆಯದು 'ಬೇಡುವವರ' ಭಾಷೆ. ಇಲ್ಲಿ ನೀಡುವವರು ಎಂದರೆ ಅನುತ್ಪಾದಕರು, ಉತ್ಪಾದನೆ ಮಾಡದವರು. ಉತ್ಪಾದನಾ ಚಟುವಟಿಕೆಗಳಲ್ಲಿ ಭಾಗಿಯಾಗದೆ ಇರುವವರು. ಕಷ್ಟಪಡದೆ ಉತ್ಪಾದನೆಯ ಫಲವನ್ನು ಅನುಭವಿಸುವವರು. ಉತ್ಪಾದಿಸದೆ ಉತ್ಪಾದನೆಯ ಒಡೆಯರಾಗಿರುವವರು. ಅಂದರೆ ಭೂ ಮಾಲೀಕರು, ಬಂಡವಾಳಶಾಹಿಗಳು, ಉಳ್ಳವರು, ಅಧಿಕಾರ ಶಾಹಿಗಳು, ಬಹುರಾಷ್ಟ್ರೀಯ ಕಂಪನಿಗಳ ಮಾಲೀಕರು ಮತ್ತು ಆಳುವ ವರ್ಗಗಳು. 'ಬೇಡುವವರು' ಎಂದರೆ ಉತ್ಪಾದಕರು, ದೈಹಿಕಶ್ರಮದ ಮೂಲಕ ಉತ್ಪಾದನೆ ಮಾಡುವವರು. ಆಹಾರದಿಂದ ಮೊದಲುಗೊಂಡು ಎಲ್ಲ ಜೀವನಾವಶ್ಯಕ ವಸ್ತುಪರಿಕರಗಳನ್ನು ಉತ್ಪಾದಿಸುವಲ್ಲಿ ಅನಾದಿಕಾಲದಿಂದಲೂ ತೊಡಗಿಸಿಕೊಂಡವರು. ಅಂದರೆ ಕೂಲಿಗಾರರು, ಕೃಷಿ ಕೂಲಿ ಕಾರ್ಮಿಕರು, ರೈತರು, ಕೃಷಿ ಸಂಬಂಧಿ ಕಸುಬು ಮಾಡುವವರು. ಗ್ರಾಮೀಣರು. ಉತ್ಪಾದಕರು ಮತ್ತು ಅನುತ್ಪಾದಕರು ಎಂಬ ಈ ಎರಡು ವರ್ಗಗಳಲ್ಲಿ ಮಾನವ ಸಂಬಂಧದ ಕಂದಕ ಎಷ್ಟಿದೆಯೋ ಅವರಾಡುವ ಭಾಷೆಗಳಲ್ಲಿಯೂ ಅಷ್ಟೇ ಮೇಲು ಕೀಳಿನ ಕಂದಕವಿದೆ. ಅಂದರೆ ಭಾಷೆಗಳಲ್ಲಿ ಅಂತರವಿಲ್ಲ, ಇರುವುದು ವೈಶಿಷ್ಟ್ಯಗಳಷ್ಟೆ. ಆದರೆ ಅಂತರ ಇರುವುದು ಆ ಭಾಷೆಗಳನ್ನು ನೋಡುವ ದೃಷ್ಟಿಕೋನಗಳಲ್ಲಿ. ಅಲ್ಲಿ ತಾರತಮ್ಯ ಭೇದವಿದೆ. ಈ ಎರಡು ವರ್ಗಗಳಲ್ಲಿ ಆರ್ಥಿಕ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಶ್ರೇಣೀಕರಣಗಳು ಮತ್ತು ಪ್ರಧಾನ, ಅಧೀನತೆಗಳು ಅವರು ಬಳಸುತ್ತಿರುವ ಭಾಷೆಗಳಿಗೂ ಇವೆ. ಭಾಷೆಯು ಸಮುದಾಯಗಳ ಸಾಂಸ್ಕೃತಿಕ ಅಂತರವನ್ನು ಮಾತ್ರ ಸೂಚಿಸುವುದಲ್ಲದೆ ಆರ್ಥಿಕ, ರಾಜಕೀಯ ಮತ್ತು ಬೌದ್ಧಿಕ ಸ್ಥಾನಮಾನಗಳ ಅಂತರವನ್ನೂ ಸೂಚಿಸುತ್ತದೆ. ವ್ಯಕ್ತಿಯೊಬ್ಬ ಮಾತನಾಡುವ ಭಾಷೆಯೊಂದರಿಂದಲೇ ಅವನ ಜಾತಿ, ಧರ್ಮ, ಅಂತಸ್ತು, ನಗರ, ಪಟ್ಟಣ, ಗ್ರಾಮ, ಗಂಡು, ಹೆಣ್ಣು, ಧೀರ, ಪುಕ್ಕಲ, ವರ್ಗಗಳನ್ನು ಕಂಡುಹಿಡಿಯುವ ಸಮಾಜ ನಮ್ಮದು. ಭಾಷಾ ಅಭಿವ್ಯಕ್ತಿಯ ಸಂಕೇತಗಳನ್ನು ಸಂವಹನಕ್ಕಾಗಿ ಮಾನವ ಸಮುದಾಯಗಳು ಬಳಸಿಕೊಂಡವು. ನಂತರ ಭಾಷೆಯ ಯಾದೃಚ್ಛಿಕ ಧ್ವನಿ ಸಂಕೇತಗಳು ಆಳುವ ವರ್ಗ ಮತ್ತು ಮೇಲ್ಜಾತಿಯ ಸ್ವಭಾವಗಳ ಹಿತಾಸಕ್ತಿಗನುಗುಣವಾಗಿ ಅರ್ಥ ಸ್ಥಿತ್ಯಂತರಗೊಂಡವು. ಪ್ರಭುತ್ವದ ಆಜ್ಞೆಗಳು ಮತ್ತು ಮಾನವ ಸಮುದಾಯದ ಉತ್ಪಾದನಾ ಹಂತಗಳು ಬದಲಾದಂತೆ ಭಾಷೆಯ ಅಭಿವ್ಯಕ್ತಿ ಮತ್ತು ಅರ್ಥಗಳೂ ಬದಲಾಗಿರುವುದನ್ನು ಚರಿತ್ರೆಯಲ್ಲಿ ಕಾಣಬಹುದು. ಜನಪದ ಭಾಷೆಯೂ ಸಾಂಸ್ಕೃತಿಕ ಮತ್ತು ಆರ್ಥಿಕ ವೈರುಧ್ಯಗಳಿಂದಾಗಿ ಬದಲಾಗುತ್ತಲೇ ಬಂದಿದೆ.

ಈ ಬದಲಾವಣೆಗಳು ಏಕರೀತಿಯದಾಗಿರುವುದಿಲ್ಲ. ಭಾಷೆಯ ಅಭಿವ್ಯಕ್ತಿಯ ವಿಧಾನ, ಅರ್ಥ ಸಂಕುಚಿತತೆ, ಅರ್ಥವಿಸ್ತಾರ, ಅರ್ಥಪಲ್ಲಟ, ಹೊಸ ಪದಗಳ ಸೇರ್ಪಡೆ, ಬಳಕೆಯಲ್ಲಿದ್ದ ಕೆಲವು ಪದಗಳು ಬಿಟ್ಟುಹೋಗುವುದು ಮುಂತಾದ ಭಾಷಾ ಪರಿವರ್ತನೆಯ ಪ್ರಕ್ರಿಯೆಗಳು ಹಲವು ಬಗೆ. ಸ್ವಾತಂತ್ರ್ಯಾನಂತರ ಗ್ರಾಮ್ಯ ಮತ್ತು ಶಿಷ್ಟತೆಗಳ ನಡುವಿನ ಅಂತರ ದಿನದಿಂದ ದಿನಕ್ಕೆ ಗಾಢವಾಗುತ್ತಲೇ ಇದ್ದು, ಗ್ರಾಮ್ಯಭಾಷೆ ಶಿಷ್ಟವಾಗುವ ಕಡೆಗೆ ಒತ್ತಡ ಉಂಟಾಗುತ್ತಿರುವುದನ್ನು ಗಮನಿಸಬಹುದು. ಸಂಸ್ಕೃತಿ ಮತ್ತು ಅದರೊಂದಿಗೆ ಅದರ ಭಾಷೆಯೂ ಪರಿವರ್ತನೆಯಾಗುತ್ತದೆ. ಬದುಕನ್ನು, ಸಂಸ್ಕೃತಿಯನ್ನು ಭಾಷೆ ರೂಪಿಸುವುದಿಲ್ಲ, ಬದುಕು ಮತ್ತು ಸಂಸ್ಕೃತಿಗಳೇ ತಮ್ಮ ಅಭಿವ್ಯಕ್ತಿಗೆ ತಕ್ಕ ಭಾಷೆಯನ್ನು ರೂಪಿಸುತ್ತವೆ. ನಂತರ ಭಾಷೆಯು ಬದುಕು ಸಂಸ್ಕೃತಿಗಳ ಪ್ರತಿನಿಧೀಕರಣವಾಗಿರುತ್ತದೆ.

ಒಂದು ಸಮಾಜದಲ್ಲಿ ಕಾನೂನು, ನಿಯಮಗಳನ್ನು ರೂಪಿಸುವುದು ಉಳ್ಳವರ ಭಾಷೆಯೇ ಆಗಿರುತ್ತದೆ. ಆ ಕಾನೂನು ನಿಯಮಗಳಿಗೆ ಬೇಡುವ ಭಾಷೆಯವರ ಹಿತಾಸಕ್ತಿಯಿದೆ ಎಂದು ನಂಬಿಸಲಾಗುತ್ತದೆ. ಹಾಗೆ ರೂಪಿಸಿದ ಕಾನೂನು, ನಿಯಮಗಳು ಇಲ್ಲದವರಿಗೆ ಅರ್ಥವಾಗುವುದಿಲ್ಲ, ಅದು ಭಾಷಾ ರಾಜಕಾರಣ. ಪರಿಣಾಮಗಳನ್ನು ಮಾತ್ರ ಎಲ್ಲ ಕಾಲಕ್ಕೂ ಬೇಡುವವರೇ ಅನುಭವಿಸಬೇಕು. ಅಧಿಕಾರಾರೂಢರು ರೂಪಿಸಿದ ಕಾನೂನುಗಳನ್ನು ಅಧಿಕಾರ ವಂಚಿತರು ಒಪ್ಪಿಕೊಳ್ಳಲೇಬೇಕೆಂಬ ಒತ್ತಾಯದ ಪರಿಸರ ಇರುತ್ತದೆ. ಅದು ನೀಡುವವರ (ಶಿಷ್ಟ) ಭಾಷೆಯಲ್ಲಿ ಇರುವುದರಿಂದ ಅದಕ್ಕೆ ಶ್ರೇಷ್ಠತೆಯ ಕೋಡು ಮೂಡಿರುತ್ತದೆ. ಅದಕ್ಕೆ ಎಲ್ಲ ಶೋಷಕ ಶಕ್ತಿಗಳ ಬೆಂಬಲವಿರುತ್ತದೆ. ಆ ಭಾಷೆಗೆ ಜನರ ಉತ್ತರದಾಯಿತ್ವವನ್ನು ಆರೋಪಿಸಲಾಗಿರುತ್ತದೆ. ಮನುಷ್ಯನ ರಾಗ-ದ್ವೇಷಗಳು, ದೃಷ್ಟಿಕೋನಗಳು, ಶೋಷಣೆ ಮಾಡುವ ಯೋಚನೆಗಳು ರೂಪು ಪಡೆಯುವುದು ಭಾಷೆಯಲ್ಲಿಯೆ. ಆದ್ದರಿಂದ ಭಾಷೆಗೆ ಎರಡು ರೀತಿಯ ಶಕ್ತಿಗಳಿರುತ್ತವೆ; ಕೊಡುವ ಮತ್ತು ಕಸಿದುಕೊಳ್ಳುವ ಶಕ್ತಿ. ಅಂತಹ ಭಾಷೆಗೆ ಶಕ್ತಿ ಬರುವುದು ಆಕಾಶದಿಂದಲ್ಲ, ಹಿಂದಿನ ಜನ್ಮದಿಂದಲ್ಲ. ಅದು ಆಸ್ತಿ, ಅಧಿಕಾರ ಮತ್ತು ಆರ್ಥಿಕ ಬಲದಿಂದ. ಆಸ್ತಿ, ಅಧಿಕಾರ, ಆರ್ಥಿಕ ಸಂಪತ್ತಿನಿಂದ ಪ್ರಬಲವಾಗಿ ಬೆಳೆದ ಭಾಷೆಗಳು ಸಾಂವಿಧಾನಿಕ ಮತ್ತು ಅಸಾಂವಿಧಾನಿಕ ಅಧಿಕಾರಗಳನ್ನು ಪಡೆದಿರುತ್ತವೆ. ಈ ಭಾಷೆಗಳು ಆರ್ಥಿಕ ಸದೃಢತೆಯಿಲ್ಲದ ಇತರ ಭಾಷೆಗಳನ್ನು ನುಂಗಿ ನೀರು ಕುಡಿದಿರುವುದನ್ನು ಚರಿತ್ರೆಯಲ್ಲಿ ಕಾಣಬಹುದು. ಕೇವಲ ಸಾಂಸ್ಕೃತಿಕ ಅನನ್ಯತೆಯೊಂದೇ ಭಾಷೆಯನ್ನು ಸದಾಕಾಲ



# ಭಾಷೆ: ಬಳಕೆ ಮತ್ತು ಸವಾಲು

ಡಿ. ಅಂಜಿನಪ್ಪ

ಜನಪದ ಭಾಷೆಯನ್ನಾಗಿ ಜೀವಂತವಾಗಿಡಲಾರದು. ಹಾಗಾದರೆ ಶಿಷ್ಟ ಭಾಷೆಯ ಪ್ರಭಾವ, ಅಬ್ಬರ, ಆಳ್ವಿಕೆಗಳು ಇದ್ದರೂ ಸಾವಿರಾರು ವರ್ಷಗಳಿಂದ ಜನಪದ ಭಾಷೆ ಜೀವಂತವಾಗಿದೆಯಲ್ಲಾ! ಈ ಪ್ರಶ್ನೆ ಹಲವು ವರ್ಷಗಳಿಂದ ಕನ್ನಡ ಸಾರಸ್ವತ ಲೋಕದಲ್ಲಿ ಕೇಳಿಬರುತ್ತಿದೆ. ಆದರೆ ಸಮಕಾಲೀನ ಶಿಷ್ಟ ಭಾಷೆಯ ಆಕ್ರಮಣಕಾರಿ ವೇಗವನ್ನು ಗಮನಿಸಿದರೆ ಜನಪದ ಭಾಷೆಯ ಉಳಿವಿನ ಬಗ್ಗೆ ಸಂದೇಹ ಮೂಡದಿರಲು ಸಾಧ್ಯವಿಲ್ಲ. ತಂತ್ರಜ್ಞಾನವೂ ಶಿಷ್ಟ ಭಾಷೆಯನ್ನು ಅಳವಡಿಸಿಕೊಳ್ಳುತ್ತಿದೆಯೇ ಹೊರತು ಜನಪದರ ಭಾಷೆಯನ್ನಲ್ಲ. ಐವತ್ತು ವರ್ಷಗಳ ಹಿಂದೆ ಶಿಷ್ಟ ಭಾಷೆಯ ಪ್ರವೇಶ ಕೆಲವೇ ವಲಯಗಳಿಗೆ ಸೀಮಿತವಾಗಿತ್ತು. ಅದಕ್ಕೆ ಸೂಕ್ಷ್ಮತೆಯ ನಡಿಗೆಯಿತ್ತು. ನೈಜತೆಯ ಸಂಭಾವ್ಯತೆಯ ಬಗ್ಗೆ ಕನಿಷ್ಠ ಇತರ ಕಾಳಜಿಗಳಿದ್ದವು. ಇಂದು ಸಾಮಾಜಿಕ, ರಾಜಕೀಯ, ಆರ್ಥಿಕ, ಸಮೂಹ ಮಾಧ್ಯಮ ಮುಂತಾದ ಎಲ್ಲ ವಲಯಗಳಲ್ಲೂ ಅದು ಗೂಳಿಯಂತೆ ನುಗ್ಗುತ್ತಿದೆ. ಆದಕ್ಕೆ ಪ್ರಭುತ್ವದ, ಉಳ್ಳವರ, ಮೇಲ್ಜಾತಿಯವರ ಹಿತಾಸಕ್ತಿಗಳ ಆರೈಕೆಯಿದೆ. ಅಭಿವೃದ್ಧಿ ಮಂತ್ರದ ರಕ್ಷಣೆ ಇದೆ. ಜನಪದ ಭಾಷೆಯನ್ನು ಉಳಿಸಲು ಯಾವ ಶಕ್ತಿಗಳಿವೆ ? ಜನಪದ ಭಾಷೆಯ ಲಹರಿಗಳು ಸಿಡಿಗಳಲ್ಲಿ, ಕ್ಯಾಸೆಟ್ಟುಗಳಲ್ಲಿ ಮಾತ್ರ ಇದ್ದರೆ ಸಾಕೆ ? ಅದು ಜನರ ಬದುಕಿನಲ್ಲಿ ಶಕ್ತಿ ಇರುವವರೆಗೆ ಮಾತ್ರ ಉಳಿಯಬಲ್ಲುದು. ಜನಪದರಿಗೆ ಅನ್ನ ದೊರಕುವವರೆಗೆ ಇರಬಲ್ಲುದು. ಅಂತಃಶಕ್ತಿಯನ್ನು, ಸ್ವಾಭಿಮಾನವನ್ನು ಮಾತ್ರ ಕೊಟ್ಟರೆ ಸಾಲದು, ಆ ಭಾಷೆಯನ್ನು ಬಳಸುವವರಿಗೆ ಅನ್ನ ಪಡೆಯುವ ಶಕ್ತಿ ಬರಬೇಕು. ಒಂದು ಕಾಲದಲ್ಲಿ ಜನಪದ ಭಾಷೆ ಅನ್ನ ಕೊಡುವ ಭಾಷೆಯೇ ಆಗಿತ್ತು. ಇಂದು ಆ ಶಕ್ತಿಯನ್ನು ಶಿಷ್ಟ ಭಾಷೆ ಕಸಿದುಕೊಳ್ಳುತ್ತಿದೆ. ಅನ್ನದ ತಟ್ಟೆಯನ್ನು ಕಸಿದುಕೊಳ್ಳುವ ನೀಡುವವರ ಭಾಷೆಯೇ ಅಧಿಕೃತವಾಗಲು, ಸಾರ್ವತ್ರಿಕ ಭಾಷೆಯಾಗಲು ಹವಣಿಸುತ್ತದೆ.

ಭಾಷೆ ಎನ್ನುವುದು ಕೇವಲ ನುಡಿಯಲ್ಲ, ಮಾತಲ್ಲ, ಅದು ಮಾನವ ನಡೆಯ ಜೊತೆಗೆ ಸಂಬಂಧವನ್ನು ಹೊಂದಿರುತ್ತದೆ. ಜೀವನದ ನಡೆ ಮತ್ತು ನುಡಿಗಳಿಗೆ ಸೌಹಾರ್ದ ಸಂಬಂಧವಿದ್ದಾಗ, ಸಾವಯವ ಕ್ರಿಯಾಶೀಲತೆಯಿದ್ದಾಗ, ಮಾನವ ಕಾಳಜಿಗಳಿದ್ದಾಗ ಭಾಷೆ ಒಂದು ಮೌಲಿಕ ರೂಪ ಪಡೆಯುತ್ತದೆ. ಅದು ಬರೀ ವ್ಯಾಪಾರಿ ಗುಣಧರ್ಮವನ್ನು, ಮಾರುಕಟ್ಟೆಯ ಸ್ವಭಾವವನ್ನು ಒಳಗೊಂಡಿದ್ದಾಗ ವಿಶ್ವಾತ್ಮಕತೆಯ ಭ್ರಮೆಗಳನ್ನಷ್ಟೆ ಮೈಗೂಡಿಸಿಕೊಂಡ ಶೋಷಣೆಯ ಸಾಧನವಾಗುತ್ತದೆ. ಇಂಗ್ಲಿಷ್ ಈ ನೆಲೆಯಲ್ಲಿ ಸಾಗುತ್ತಿದೆ. ಅದಕ್ಕೆ ಜ್ಞಾನದ ಶಕ್ತಿಯಿದೆಯೆಂಬ ಸೊಕ್ಕಿದೆ. 'ಮಾಯಾಮೃಗ'ವೆಂಬ ಆಸೆಯ ಬಲೆಯಿದೆ. ಹಾಗೆಯೇ ಹಣ ಕೂಡಿಹಾಕಬಹುದೆಂಬ ದುರಾಸೆಯಿದೆ. ಅವು ಯಾವುವೂ ಸಾಂಸ್ಕೃತಿಕ ಜೀವ ಸಂಚಯನಗಳ ಜೀವಶಕ್ತಿಯಲ್ಲ. ಇಂತಹ ಜನಪದ ಭಾಷೆಯ ಸಾರಸತ್ವವನ್ನು, ಆ ಜನರ ಬದುಕುಗಳನ್ನು ಗಾಢವಾಗಿ ಇಂಗ್ಲಿಷ್ ಪ್ರಭಾವಿಸುತ್ತಿದೆ. ಜನಪದ ಭಾಷೆಗೆ ಇಂಗ್ಲಿಷ್ ಎಂಬುದು ಹಗಲು ಕಂಡ ಬಾವಿಯಿದ್ದಂತೆ. ಜನಪದರು ತಮ್ಮ ಭಾಷೆಗೆ ಅಂಟಿಕೊಂಡಂತೆಲ್ಲಾ ಅವರು ಅಸ್ಪೃಶ್ಯರಾಗಿ ಉಳಿಯುವ ಭಯವಿದೆ. ಅವರ ಮಕ್ಕಳು ಪ್ರಮಾಣ ಭಾಷೆಯ ಶಿಕ್ಷಣ ಪಡೆದಂತೆಲ್ಲಾ ಅವರ ಮನೆಯಲ್ಲೇ ಭಾಷೆಯ ಸಂವಹನದ ಕಂದರಗಳು ಆರಂಭವಾಗುತ್ತವೆ. ಶಿಕ್ಷಣ ಕಲಿತ, ಉದ್ಯೋಗಸ್ಥ ಮಗನ, ಮಗಳ ಮಾತುಗಳನ್ನು ಜನಪದ ತಾಯಿಯೊಬ್ಬಳು ಅರ್ಥ ಗ್ರಹಿಸಲಾರದೆ ಬೆರಗಿನಿಂದ ಆಲಿಸುತ್ತಾಳೆ. ಕಲಿತ ಮಗನ ಶಿಷ್ಟ ಭಾಷೆಯು ಅಷ್ಟೊತ್ತಿಗೆ ತಾಯ ಸೆರಗಿನ ನೆಲದ ಸೊಗಡನ್ನು ಮರೆತಿರುತ್ತದೆ.



ಕಾಡಿನ, ಊರಿನ, ಹಳ್ಳಿಯ ಜನರನ್ನು ನಾಡಿಗೆ, ನಗರದ ಬೀದಿಗಳಿಗೆ ಒಕ್ಕಲೆಬ್ಬಿಸುವ ಪ್ರಕ್ರಿಯೆ ಭಾಷಾ ಸಂಕರದ ಪರಿಸರವನ್ನು ಸೃಷ್ಟಿಸುತ್ತದೆ. ಸಮಾಜದ ಮುಖ್ಯವಾಹಿನಿಗೆ ಕಾಡಿನ ಜನರನ್ನು ತರುತ್ತೇವೆ ಎಂದರೆ ಅವರ ಜನಪದ ಭಾಷೆಯನ್ನು ನಾಶಮಾಡುತ್ತೇವೆ ಎಂದೇ ಅರ್ಥ. ಅಭಿವೃದ್ಧಿ ಎಂದರೆ ಭಾಷೆಯೂ ಸೇರಿದಂತೆ ಸಾಂಪ್ರದಾಯಿಕ ಆರ್ಥಿಕ ಮೂಲಗಳನ್ನು ನಾಶಮಾಡುವುದು. ಜನಪದ ಭಾಷೆ ರೂಪಿಸಿದ್ದ ಬದುಕನ್ನು, ಸಾಂಸ್ಕೃತಿಕ ಅನನ್ಯತೆಯನ್ನು ನಾಶಮಾಡುವುದು. ಕಾಡು ಜನಪದ ಭಾಷೆಯ ತವರುಮನೆಯಿದ್ದಂತೆ. ತವರುಮನೆ ಮತ್ತು ಗಂಡನಮನೆ ಎರಡೂ ಜನಪದರಿಗೆ ಕಾಡು ಮತ್ತು ಹಳ್ಳಿಗಳೇ ಆಗಿದ್ದವು. ಹಳ್ಳಿಗಳು ತವರುಮನೆಯಿಂದ ಹೋದ ಮಗಳ ಮನೆಯಿದ್ದಂತೆ. ಬರಿದು; ತವರುಮನೆ ಇಲ್ಲದ ಮಗಳ ಪರಿಸ್ಥಿತಿ ಜನಪದ ಭಾಷೆಯದ್ದಾಗಿದೆ. ಪ್ರೀತಿ, ಅಭಿಮಾನ, ಬಾಲ್ಯದ ಸುಂದರ ನೆನಪುಗಳು, ಗಂಡನನ್ನು ಹೊರತುಪಡಿಸಿ ಅಗತ್ಯಬಿದ್ದಾಗ ತಾತ್ಕಾಲಿಕ ಭದ್ರತೆಯ ಸಂಕೇತಗಳಾಗಿ ತವರುಮನೆಯಿತ್ತು. ತವರುಮನೆಯಿಂದ ಮದುವೆಯಾದ ಮಗಳು ಮಾತ್ರ ಹೊರಹೋಗಬೇಕೆಂದು ಜನಪದರು ಹಾಡು ಕಟ್ಟಿ ಹಾಡುತ್ತಿದ್ದರು. ಕಥನ, ಕಾವ್ಯ ರಚಿಸುತ್ತಿದ್ದರು. ಮೌಲ್ಯದ ನಿವೇದನೆ ಮಾಡುತ್ತಿದ್ದರು. ಸಾಮಾಜಿಕ ನೀತಿ ನಿರೂಪಣೆ ಮಾಡುತ್ತಿದ್ದರು. ಆದರೆ ಇಂದು ಪ್ರಭುತ್ವದ ನೀತಿ ನಿರೂಪಣೆಗಳು ಇಡೀ ಕಾಡಿನ ಸಮುದಾಯಗಳನ್ನು ಒಕ್ಕಲೆಬ್ಬಿಸುತ್ತಿವೆ. ಹಳ್ಳಿಗಳಿಗೆ ಜಾಹಿರಾತು ಮತ್ತು ಮಾರುಕಟ್ಟೆಯ ಭಾಷೆ ದಾಳಿಯಿಡುತ್ತಿದೆ. ಹಳ್ಳಿಯ ಶೆಟ್ಟರ ಅಂಗಡಿಯ ಅಂಗಳವನ್ನು ತಿರಸ್ಕರಿಸಿ ನಗರದ ಮಾಲ್ ಸಂಸ್ಕೃತಿಗೆ ಜೋತುಬೀಳುವಂತೆ ಮಾಡಲಾಗುತ್ತಿದೆ. ಆ ಮೂಲಕ ಜನಪದ ಭಾಷೆಯ ಅಳಿವಿನ ಮೊದಲ ಹರಕೆ ಆರಂಭಗೊಂಡಿದೆ... ಜನಪದ ಭಾಷೆಯು ನೆಲದ ಭಾಷೆ. ನೆಲಕ್ಕೂ ಅದಕ್ಕೂ ಹೊಕ್ಕುಳ ಸಂಬಂಧ ಇರುತ್ತದೆ. ಜನಪದರನ್ನು ಅವರ ನೆಲದಿಂದ ಒಕ್ಕಲೆಬ್ಬಿಸಿದರೆ ಮತ್ತೆ ಅವರು ಜನಪದರಾಗಿ ಉಳಿಯುವುದಿಲ್ಲ. ಹೊಸ ನೆಲದಲ್ಲಿ ಜನಪದ ಭಾಷೆ ಅರಳುವುದಿಲ್ಲ. ಯಾಕೆಂದರೆ, ಆ ನೆಲ ನೀಡಿದ ನೆಲವಾಗಿರುತ್ತದೆ. ದಾನದ ನೆಲವಾಗಿರುತ್ತದೆ. ಆ ನೆಲದೊಂದಿಗೆ ಪಡೆದ ಋಣಕ್ಕಾಗಿ ನೀಡಿದವರ ಭಾಷೆಯೇ ಅವರನ್ನು ಆವರಿಸಿಕೊಳ್ಳುತ್ತದೆ. ಆ ಭಾಷೆ ಪ್ರಭುತ್ವ ಮತ್ತು ಯಜಮಾನರ ಭಾಷೆಯಾಗಿರುತ್ತದೆ. ಯಜಮಾನರ ಭಾಷೆ, ಆಳುವವರ ಭಾಷೆ ಎಂದಾದರೂ ಜನಪದ ಭಾಷೆಯಾಗಲು ಸಾಧ್ಯವೇ ? ಜನಪದರು ಜನಪದ ರೂಪವನ್ನು ಕಳೆದುಕೊಳ್ಳುತ್ತಾರೆ. ''ನಾಗರೀಕ''ರಾಗಿಬಿಡುತ್ತಾರೆ.

ಭಾಷೆ ಸಮುದಾಯದ ಉತ್ಪನ್ನ. ಭಾಷೆ ಹುಟ್ಟುವುದು ಜನರಿಂದ, ಬೆಳೆಯುವುದೂ ಜನರಿಂದ. ಆದರೆ ಭಾಷೆಯ ಹಕ್ಕು ಮಾತ್ರ ಜನರದ್ದಾಗಿರುವುದಿಲ್ಲ. ವರ್ಗ ಮತ್ತು ಜಾತಿ ಭೇದಗಳು ಬೆಳೆದಂತೆಲ್ಲಾ ಒಂದು ಭಾಷೆಯ ಉತ್ತರದಾಯಿತ್ವ ಪ್ರಭುತ್ವದ, ಅಧಿಕಾರದ, ಆಸ್ತಿಯ, ಬಂಡವಾಳದ, ಒಡೆಯರ ಉತ್ತರದಾಯಿತ್ವವಾಗುತ್ತದೆ. ವರ್ಗ ಮತ್ತು ಜಾತಿ ಸಂಬಂಧಗಳ ಅಂತರಗಳು ಹೆಚ್ಚಾದಂತೆಲ್ಲಾ ಭಾಷಾ ಬಳಕೆಯ ವ್ಯತ್ಯಾಸಗಳು ಹೆಚ್ಚಾಗುತ್ತಾ ಹೋಗುತ್ತವೆ. ಜನರ ಭಾಷೆ ಆಳುವವರ ಭಾಷೆಯಾಗುತ್ತದೆ. ಆ ಭಾಷೆಗೆ ಶಿಷ್ಟತೆಯ ಪೊರೆ ಅಂಟಿಕೊಂಡುಬಿಡುತ್ತದೆ. ವರ್ಗ ಮತ್ತು ಜಾತಿ ತಾರತಮ್ಯದ ಅಂತರಗಳನ್ನು ಆಡುವ ಭಾಷೆಯು ವ್ಯಕ್ತಪಡಿಸುತ್ತಾ ಹೋಗುತ್ತದೆ. ಆಗ ಸಹಜವಾಗಿ ಉಳ್ಳವರ ಭಾಷೆಯು ಅಧಿಕೃತ ಭಾಷೆಯಾಗುತ್ತದೆ. ಇಲ್ಲದವರು ಉಳ್ಳವರ ಭಾಷೆಯನ್ನು ಅನುಸರಿಸಲು ಹೆಣಗಾಡ ಬೇಕಾಗುತ್ತದೆ. ಇದು ನಮ್ಮ ಭಾಷೆ, ನಮ್ಮ ಜೀವವನ್ನು ಪೊರೆದ ಭಾಷೆ ಎಂದು ಎಷ್ಟೇ ಅಭಿಮಾನವಿಟ್ಟುಕೊಂಡರೂ ಕಾಲದ ಏರಿಳಿತಗಳಲ್ಲಿ ಮಿಳಿತವಾಗಲೇ ಆದ್ದರಿಂದ ಎಷ್ಟೋ ಭಾಷೆಗಳು ಇಂದು ಅಳಿವಿನಂಚಿನಲ್ಲಿವೆಯೆಂದು ಭಾಷಾಶಾಸ್ತ್ರಜ್ಞರೇ ಹೇಳುತ್ತಿದ್ದಾರೆ.

ಭಾಷೆ ಎಂದರೆ ಕೇವಲ ಜನರಾಡುವ ಮಾತಲ್ಲ, ಆದೊಂದು ರಾಜಕೀಯ ಶಕ್ತಿ, ಸಾಂಸ್ಕೃತಿಕ ಶಕ್ತಿ, ಆರ್ಥಿಕ ಶಕ್ತಿ ಎಂಬ ಮಾತೊಂದಿದೆ. ಇಂದು ಜನಪದ ಭಾಷೆಗೆ ಸಾಹಿತ್ಯಕ ಶಕ್ತಿ ಇದೆ. ಉಳಿದಂತೆ ರಾಜಕೀಯ ಅಧಿಕಾರವಾಗಲೀ, ಆರ್ಥಿಕ ಅಧಿಕಾರವಾಗಲೀ ಇಲ್ಲ. ಜನಪದ ಭಾಷೆಯ ಸಾಂಸ್ಕೃತಿಕ ಶಕ್ತಿಯೊಂದೇ ಆ ಭಾಷೆಯನ್ನು ಉಳಿಸುತ್ತದೆಂಬುದನ್ನು ನಂಬುವುದು ಕಷ್ಟ. ಯಾಕೆಂದರೆ ಒಂದು ಸಮಾಜದ ಬದುಕನ್ನು ವಿಕಾಸಗೊಳಿಸುವ ಶಕ್ತಿ ಸಾಂಸ್ಕೃತಿಕ ಶಕ್ತಿಗಿದ್ದರೆ, ರಾಜಕೀಯ ಮತ್ತು ಆರ್ಥಿಕ ಶಕ್ತಿಗೆ ಸಮಾಜದ ಸಂರಚನೆಯನ್ನೆ ಬದಲಾಯಿಸುವ ಶಕ್ತಿಯಿರುತ್ತದೆ. ಜನರ ಮನೋಧರ್ಮ, ಅಭಿರುಚಿಗಳನ್ನೇ ಬದಲಾಯಿಸುವ ಶಕ್ತಿಯಿರುತ್ತದೆ. ರಾಜಕೀಯ ಮತ್ತು ಆರ್ಥಿಕ ಶಕ್ತಿಗಳು ತಮ್ಮದೇ ಮೌಲ್ಯಗಳನ್ನುಳ್ಳ ಭಾಷೆಯನ್ನು ಹೇರುವ, ಒಪ್ಪಿಕೊಳ್ಳುವ ಪರಿಸರವನ್ನು ಸೃಷ್ಟಿಸುತ್ತವೆ. ಅವು ಒಂದು ಸಮಾಜದ ಭೌತಿಕ ಮತ್ತು ಬೌದ್ಧಿಕ ಪರಿಸರವನ್ನೇ ಬದಲಿಸಿಬಿಡಬಲ್ಲವು. ಆಳುವ ವರ್ಗಗಳು ಜನರ ಭಾಷೆಯನ್ನು ಆಡಳಿತದಲ್ಲಿ ಬಳಸಿದ ಅನೇಕ ಉದಾಹರಣೆಗಳು

ಸಿಗುತ್ತವೆ. ಆಗಲೂ ಅಲ್ಲಿ ಜನರ ಭಾಷೆಯ ಬಗೆಗಿನ ಹಿತಾಸಕ್ತಿಯಿಂದ ಬಳಸಿದ್ದಲ್ಲ, ಆಡಳಿತದ ದೃಷ್ಟಿಕೋನದಿಂದ ಬಳಸಲಾಗಿದೆ. ಆದ್ದರಿಂದ ಪ್ರಭುತ್ವದ ದೃಷ್ಟಿಯಲ್ಲಿ ಭಾಷೆಯೆಂದರೆ ಶಿಷ್ಟ ಭಾಷೆಯೆಂದೇ ಅರ್ಥ. ಜನರ ಭಾಷೆಯನ್ನು ಅಲ್ಲಲ್ಲಿ ಬಳಸಿಕೊಂಡಿರಬಹುದು. ಬಳಸಿಕೊಳ್ಳುವುದು ಬೇರೆ, ಬಳಸುವುದು ಬೇರೆ. ಜನಪದ ಭಾಷೆ ಬಳಸಿಕೊಳ್ಳುವ ಭಾಷೆಯಾಗದೇ ಬಳಸುವ ಭಾಷೆಯಾದಾಗ ಮಾತ್ರ ಅದು ಅಳಿವಿನಿಂದ ಪಾರಾಗಬಹುದು.



ಜನಪದ ಭಾಷೆ ಆಯಾ ನಾಡಿನ ತಾಯಿಭಾಷೆ. ಅದು ನೆಲದ ಭಾಷೆ. ಜನಸಮುದಾಯಗಳ ಸಾಂಸ್ಕೃತಿಕ ಭಾಷೆ. ಅದು ಜನರ ಕನಸುಗಳು, ಕಲ್ಪನೆಗಳು, ಪುರಾಣಗಳು, ಆಶಯಗಳನ್ನು ಕಟ್ಟಿಕೊಡುವ ಭಾಷೆ. ಮಾನವನ ನೈತಿಕತೆಯನ್ನು ಅಸಾಂಪ್ರದಾಯಿಕ ಶಿಕ್ಷಣದ ಮೂಲಕ ಕಲಿಸುವ ಭಾಷೆ, ಅದು ದುಡಿವ ವರ್ಗದ ಬೆವರಿನ ಭಾಷೆ. ಇದನ್ನು ಗ್ರಾಮ್ಯ, ದೇಶಿ ಅಥವಾ ಆಡುಭಾಷೆ ಎಂದು ಕರೆಯುತ್ತೇವೆ. ಇಲ್ಲಿ ಬದುಕಿಗೂ ಭಾಷೆಗೂ ಅಂತರ್‌ಸಂಬಂಧವಿರುತ್ತದೆ. ಕೃತಕತೆಯ ವೇಷವಿರುವುದಿಲ್ಲ. ಜನಪದ ಭಾಷೆಯೆಂದರೆ ಭಾವನೆಗೆ ತಕ್ಕ ಭಾಷೆಯಿರುತ್ತದೆ. ಇಲ್ಲಿ ಭಾಷೆಯೇ ಪ್ರಮಾಣ, ಪ್ರಮಾಣವೇ ಭಾಷೆ. ಇದಕ್ಕೆ ಲಿಪಿಯ ಆಧಾರವಿರುವುದಿಲ್ಲ. ಅವರಾಡುವ ಮಾತಿನ ನಡೆ-ನುಡಿಯೇ ಆಧಾರ. ಜನಪದ ಭಾಷೆಯು ಔಪಚಾರಿಕವಾಗಿ ಬೆಳೆದದ್ದಲ್ಲ. ಅಕ್ಷರ ಕಲಿಕೆಯ ಮೂಲಕ ಕಲಿತದ್ದಲ್ಲ. ಆದರೆ ಅದು ಅಕ್ಷರಲೋಕದಲ್ಲಿ ಸ್ಥಾನ ಪಡೆಯದಿದ್ದರೆ ಅಳಿವು-ಉಳಿವಿನ ಪ್ರಶ್ನೆ ಕಾಡುವುದು ಖಂಡಿತ. ಜನಪದ ಸಾಹಿತ್ಯವನ್ನು ಅಕ್ಷರಗಳಲ್ಲಿ ದಾಖಲಿಸಿದರೆ ಸಾಲದು. ಜನಪದ ಸಾಹಿತ್ಯವನ್ನು, ಭಾಷೆಯನ್ನು ಅಧ್ಯಯನ ಮಾಡುವುದು ಬೇರೆ. ಜನಪದ ಭಾಷೆಯಲ್ಲಿ ಅಧ್ಯಯನ ಮಾಡುವುದು ಬೇರೆ. ಅಷ್ಟಕ್ಕೇ ಜನಪದ ಭಾಷೆಯ ಉಳಿವು-ಅಳಿವಿನ ಪ್ರಶ್ನೆ ಬಗೆಹರಿಯತ್ತದೆ ಎಂದಲ್ಲ. ಆದರೆ ಅಂಥ ಪ್ರಯತ್ನಗಳು ನಡೆದಿಲ್ಲ. ಜನಪದ ಸಾಹಿತ್ಯವನ್ನು ಅಧ್ಯಯನ ಮಾಡುವುದು ಬೇರೆ. ಜನಪದ ಭಾಷೆಯನ್ನು ಕಲಿಕೆಯ ವಿಷಯವನ್ನಾಗಿ ಮಾಡುವುದು ಬೇರೆ, ಬಳಸುವುದೇ ಬೇರೆ.

ಜನಪದರ ಗಾದೆ, ಒಗಟು, ಕತೆ, ಲಾವಣಿ, ಸೋಬಾನೆ ಪದಗಳು, ಲಾಲಿ ಹಾಡುಗಳು, ಗರತಿ ಹಾಡುಗಳನ್ನು ಹೇಳುವವರು, ಹಾಡುವವರು ಕಡಿಮೆಯಾಗುತ್ತಿರುವುದು ಎಲ್ಲರಿಗೂ ತಿಳಿದ ಸಂಗತಿ. 'ಗರತಿ' ಎಂಬ ಪದದ ಅರ್ಥವೇ ಸಾಂಸ್ಕೃತಿಕವಾಗಿ ಸಂಕುಚಿತಗೊಳ್ಳುತ್ತಾ ಇದೆ. 'ಸೂಳೆ' ಎಂಬ ಪದವನ್ನು 'ಲೈಂಗಿಕ ಕಾರ್ಯಕರ್ತೆ' ಎಂದು ಬದಲಾಯಿಸಿದರೂ ವೃತ್ತಿ ಮಾತ್ರ ಬೇರೆಯಲ್ಲ. ಜಾನಪದ ಸಂವಹನಗಳು ಇಲ್ಲವಾಗುತ್ತಿವೆ. ಹಳೆಯ ಅಳತೆ ಮಾಪನಗಳ ಹೆಸರುಗಳು ಮಾಸಿಹೋಗುತ್ತಿವೆ. ಮರಗಳ, ಹೂವುಗಳ, ಗಿಡ ಗೆಂಟೆಗಳ, ಔಷಧೀಯ ಗಿಡಮೂಲಿಕೆಗಳ ಹೆಸರುಗಳು ನೆನಪಿನಿಂದ ಮರೆಯಾಗುತ್ತಿವೆ. ಜನಪದದಲ್ಲಿನ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಸಂಬಂಧಗಳ ಕಣ್ಣೀರಿನ ವ್ಯಥೆಗಳು ಇನ್ನೂ ದಾಖಲಾಗಬೇಕಿದೆ. ವೃತ್ತಿಪರ ಗಾಯಕರು, ಕಲಾವಿದರು ಸರ್ಕಾರದ ಮಾಸಾಶನಕ್ಕೆ ಕೈಯೊಡ್ಡುವ ಪರಿಸ್ಥಿತಿ ಉಂಟಾಗಿದೆ. ಅದರಿಂದ ಬದುಕು ಸಾಗದು. ಬದುಕು ಸಾಗುವುದಿಲ್ಲವೆಂದರೆ ಅವರಾಡುವ ಭಾಷೆ ಉಳಿಯುವುದಾದರೂ ಹೇಗೆ? ಬದುಕುಗಳು ಉಳಿದರೆ ಮಾತ್ರ ಅವರಾಡುವ ಭಾಷೆ ಉಳಿಯಲು ಸಾಧ್ಯ. ಜನಪದ ಭಾಷೆ ಆ ಜನರ ಬದುಕಿನಿಂದ ರೂಪುಗೊಂಡದ್ದು. ಜನಪದರ ಎಲ್ಲ ಕಲಾಪ್ರಕಾರಗಳು ಅವರ ಜೀವನದಿಂದ ಬಸಿದು ಕಟ್ಟಿಕೊಂಡದ್ದು. ಅವುಗಳು ಕೇವಲ ಕಲಾಪ್ರಕಾರಗಳಲ್ಲ. ಕೇವಲ ಮನರಂಜನೆಗಾಗಿ ಹುಟ್ಟಿಕೊಂಡವುಗಳಲ್ಲ. ಅವು ಶ್ರಮದ, ಸ್ವ-ಜೀವನಾನುಭವದ ಅಭಿವ್ಯಕ್ತಿಗಳು. ಆದ್ದರಿಂದಲೇ ಅವರ ಜಾನಪದ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ಜೀವನದ ಸೊಗಡಿದೆ.

ನಮ್ಮಲ್ಲಿ ಜನಪದ ಭಾಷೆಯ ಅಳಿವಿನ ಬಗ್ಗೆ ಆತಂಕಗಳಿವೆ. ಆದರೆ ಆ ಭಾಷೆಯನ್ನು ಉಳಿಸುವ ಬಗ್ಗೆ ಯೋಜನೆಗಳಿಲ್ಲ. ಕಳೆದ ಐವತ್ತು ವರ್ಷಗಳಲ್ಲಿ ಕನ್ನಡ ಭಾಷೆಯ ಉಳಿವಿನ ಬಗ್ಗೆ ಇರುವ ಕ್ರಿಯಾ ಯೋಜನೆಗಳ ಗತಿ ಏನಾಗಿದೆ ಎಂಬುದು ಕನ್ನಡ ವಿದ್ವಾಂಸರಿಗೆ ಗೊತ್ತು. ಜನಪದ ಭಾಷೆಯ ಉಳಿವಿನ ಬಗ್ಗೆ ಜಾನಪದ ವಿದ್ವಾಂಸರಲ್ಲಿ ಚಿಂತನೆಗಳಿವೆ. ಆದರೆ ಆ ಚಿಂತನೆಗಳಿಗೆ ಪ್ರಾಮಾಣಿಕವಾದ ರಾಜಕೀಯ ಇಚ್ಛಾಶಕ್ತಿ ಬೇಕಾಗಿದೆ. ಆದರೆ ಜನಪದರು ಓಟಿನ ಲೆಕ್ಕದಲ್ಲಿ ಸಿಕ್ಕಿ ರಾಜಕಾರಣದ ಮತ್ತು ಅಧಿಕಾರದ ಪರಿಧಿಯಲ್ಲಿ ನರಳುತ್ತಿದ್ದಾರೆ. ಜಾನಪದ ಬದುಕಿಗೆ, ಜನಪದರಿಗೆ ಆರ್ಥಿಕ ಸದೃಢತೆಯನ್ನು ರೂಪಿಸುವ ಮೂಲಕ ಅವರ ಸಾಂಸ್ಕೃತಿಕ ಜಗತ್ತನ್ನು ರಕ್ಷಿಸಬೇಕಾಗಿದೆ. ಆದರೆ ಜನಪದರ ಮೇಲೆ ಎರಡು ರೀತಿಯ ದಾಳಿಗಳು ಪ್ರಬಲವಾಗಿ ಆರಂಭವಾಗಿವೆ. ಒಂದು, ಆರ್ಥಿಕ ದಾಳಿ, ಎರಡು, ಸಾಂಸ್ಕೃತಿಕ ದಾಳಿ. ಜನಪದರಿಗೆ ಆಯ್ಕೆಗಳಿಲ್ಲ. ಮನರಂಜನೆಯನ್ನು ಸರಕೀಕರಣಗೊಳಿಸುತ್ತಿರುವ ಸಮೂಹ ಮಾಧ್ಯಮಗಳೂ ಅದೇ ಕೆಲಸ ಮಾಡುತ್ತಿವೆ. ಆಧುನಿಕತೆ ಜನಪದರಿಗೆ ಶಾಪವಾಗುತ್ತಿದೆ. ಬದುಕಿಗಾಗಿ ಜನಪದರು ಭಿಕ್ಷೆ ಬೇಡುತ್ತಲೇ, ಎರಡೆಕರೆಯ ಬರಡು ಭೂಮಿಯನ್ನು ಉಳುತ್ತಲೇ, ಅದೇ ಹಳ್ಳಿಗಾಡಿನ ಭಾಷೆ ಆಡುತ್ತಲೇ ಇರಲು ಅವರಿಗೆ ಸಾಧ್ಯವಾಗುತ್ತಿಲ್ಲ. ಮೊದಲಿನ ಹಾಗೇ ಇರೋಣವೆಂದರೆ ಮೊದಲಿನ ಸಾಂಸ್ಕೃತಿಕ, ಮತ್ತು ಮಾನವ ಸಂಬಂಧಗಳು ಸಡಿಲವಾಗುತ್ತಿವೆ. ಹಾಗಾಗಿ ಆಧುನಿಕತೆ ಎಂಬುದು ಬದುಕಿನ ಆಯ್ಕೆಯಲ್ಲ, ಅದು ಅವರ ಕರ್ಮ (ಕರ್ಮವೆಂದರೆ ಪೂರ್ವಜನ್ಮದ್ದಲ್ಲ). ಪರಿಣಾಮವಾಗಿ ಅವರ ಭಾಷೆಯೂ ಆಧುನಿಕತೆಯ ಸ್ಪರ್ಶ ಪಡೆದುಕೊಳ್ಳಲೇಬೇಕಾಗುತ್ತದೆ. ಹೊಟ್ಟೆಪಾಡಿಗಾಗಿ ನಗರಗಳಿಗೆ ವಲಸೆ, ಗುಳೆ ಹೋಗುವ ಮೂಲಕ ಜನಪದ ಭಾಷೆಯ ಪ್ರಾದೇಶಿಕತೆ ಪಲ್ಲಟವಾಗುತ್ತಿದೆ. ಜನಪದ ಭಾಷೆಯೆಂಬುದೇ ಪ್ರಾದೇಶಿಕತೆಯ ಸೊಗಡಿನ ವಿಲಕ್ಷಣಗಳಿಂದ ಕೂಡಿರುವುದಾಗಿದೆ. ಅದು ಪಲ್ಲಟವಾಗುವ ಮೂಲಕ ಭಾಷೆಯು ತನ್ನ ಮೂಲ ತಾಜಾತನವನ್ನು ಅತ್ಯಂತ ಸೂಕ್ಷ್ಮವಾಗಿ ಕಳೆದುಕೊಳ್ಳುತ್ತಾ ಹೋಗುತ್ತಿದೆ.

ಜನಪದರ ಭಾಷೆ ನಿಂತಿರುವುದೇ ತಾಯಿ, ಅತ್ತೆ, ಅತ್ತಿಗೆ, ನಾದಿನಿ, ಸೊಸೆ, ಮಾವ, ಅಣ್ಣ, ತಮ್ಮ, ಗಂಡ, ಹೆಂಡತಿ ಎಂಬ ಸಂಬಂಧಗಳ ಆಯಾಮಗಳಲ್ಲಿ ಹಾಗೂ ಕೃಷಿ ಸಂಬಂಧಿತ ಚಟುವಟಿಕೆಗಳಲ್ಲಿ, ಗೃಹಕೈಗಾರಿಕೆಗಳಲ್ಲಿ, ಕರಕುಶಲತೆಯಲ್ಲಿ. ಈ ಸಂಬಂಧಗಳು ನಿಂತಿರುವುದು ಅವರ ಅವಲಂಬನೆಯ ದುಡಿಮೆಯ ಸ್ವರೂಪದಲ್ಲಿ, ಹಂಚಿ ತಿನ್ನಬೇಕೆಂಬ ಸಹಭಾಗಿತ್ವದಲ್ಲಿ. ಆದರೆ ಆಧುನಿಕ ಶಿಕ್ಷಣದ ಭಾಷೆ ಅನಾಥಾಲಯ ಮತ್ತು ವೃದ್ಧಾಶ್ರಮಗಳನ್ನು ಹೆಚ್ಚಿಸಲು ಪ್ರಯತ್ನಿಸುತ್ತಿದೆ. ಮಾನವ ಸಂಬಂಧಗಳಿಗಿಂತ ಹಣ ಮುಖ್ಯವಾಗುತ್ತಿದೆ. ಹಣ ಪ್ರಪಂಚ ಜನಪದ ಭಾಷೆಗೆ ಇದ್ದ ಪ್ರಮಾಣವನ್ನು, ಪ್ರಾಮಾಣಿಕತೆಯ ಆ ನೈತಿಕ ಪಾತಳಿಯ ನೆಲೆಗಟ್ಟನ್ನು ಸಡಿಲಗೊಳಿಸುತ್ತಿದೆ. ಇವನ್ನು ಬಿಟ್ಟರೆ ನಗರೀಕರಣ ಮತ್ತು ಜಾಗತೀಕರಣದ ಸಡಿಲ ಸಂಬಂಧಗಳು ಜನಪದರ ಮೇಲೆ ಬೀರುವ ಪರಿಣಾಮದಿಂದಾಗಿ ಅವಿಭಕ್ತ ಕುಟುಂಬಗಳು ಇಂದು ವಿರಳವಾಗುತ್ತಿವೆ. ಅವಿಭಕ್ತ ಕುಟುಂಬದ ವಿಭಜನೆಯೆಂದರೆ ಅದು ಭಾಷೆಯ ಸ್ಥಿತ್ಯಂತರವೆಂದೇ ಅರ್ಥ. ಯಾಕೆಂದರೆ ಜನಪದ ಬದುಕಿನ ಪ್ರಮುಖ ಲಕ್ಷಣಗಳಲ್ಲಿ ಅವಿಭಕ್ತ ಕುಟುಂಬವೂ ಒಂದು. ಅವಿಭಕ್ತ ಕುಟುಂಬ ತನ್ನ ಹಳ್ಳಿಯ ಪಾರಂಪರಿಕ ಕಸುಬು, ಉದ್ಯೋಗ, ಮನರಂಜನೆ ಸೇರಿದಂತೆ ಕೆಲವು ಜ್ಞಾನಪರಂಪರೆಗಳನ್ನು ಉಳಿಸಿಕೊಂಡಿರುತ್ತದೆ. ಅವುಗಳಲ್ಲಿ ಭಾಷೆಯೂ ಒಂದು. ಆದರೆ ಇಂದು ಕುಟುಂಬದ ಸ್ವರೂಪ ಮತ್ತು ಅರ್ಥ ಸಂಕುಚಿತಗೊಳ್ಳುತ್ತಿವೆ. ಅವಿಭಕ್ತ ಕುಟುಂಬಗಳು ವಿಭಕ್ತ ಕುಟುಂಬಗಳಾಗುವ ಮೂಲಕ ಜನಪದದಿಂದ ಆಧುನಿಕತೆ ಮತ್ತು ನಗರೀಕರಣಕ್ಕೆ ಒಳಗಾಗುತ್ತಿವೆ. ಅವಿಭಕ್ತ ಕುಟುಂಬದಿಂದ ಹೊರಬಂದ ಕೆಲವು ವಿಭಕ್ತ ಕುಟುಂಬಗಳು ಗ್ರಾಮೀಣ ಪ್ರದೇಶದಲ್ಲೇ ನೆಲಸಿದ್ದರೂ ತಮ್ಮ ಮೂಲ ಸ್ವರೂಪವನ್ನು ಕಳೆದುಕೊಂಡಿವೆ.

ಬದಲಾವಣೆ, ರೂಪಾಂತರ ಭಾಷೆಯ ಲಕ್ಷಣ ಎಂದು ಭಾಷಾ ವಿಜ್ಞಾನಿಗಳು ಹೇಳುತ್ತಾರೆ. ಆ ಬದಲಾವಣೆ ಎನ್ನುವುದು ಗುಣಕ್ಕೆ ಸಂಬಂಧಿಸಿದ್ದು; ಕೊಡು-ಕೊಳ್ಳುವ ಪ್ರಕ್ರಿಯೆಗೆ ಸಂಬಂಧಿಸಿದ್ದು, ಜನಪದ ಭಾಷೆಯೂ ಇದಕ್ಕೆ ಹೊರತಲ್ಲ. ಆದರೆ ಜನಪದ ಭಾಷೆಯ ಸಮಸ್ಯೆ ಬದಲಾವಣೆಗೆ ಮಾತ್ರ ಸಂಬಂಧಿಸಿದ್ದಲ್ಲ; ಅದರ ಅಳಿವು-ಉಳಿವಿಗೆ ಸಂಬಂಧಿಸಿದ್ದು, ಅಂದರೆ ಜನಪದರ ಅಳಿವು-ಉಳಿವಿಗೆ ಸಂಬಂಧಿಸಿದ್ದಾಗಿದೆ. ಭಾಷೆ ಎಂಬುದೇ ಒಂದು ಕೌಶಲ. ಜನಪದ ಭಾಷೆಯೂ ಸಂವಹನದ ಕೌಶಲಗಳನ್ನು ಹೊಂದಿದೆ. ಆದರೆ ಅದು ಶಿಷ್ಟ ಭಾಷೆಯ ಕೌಶಲಗಳ ಎದುರು ಸೊರಗುತ್ತಿದೆ. ಇದಕ್ಕೆ

ಕಾರಣ ಶಿಷ್ಟಗಳಿಗೆ ಇರುವ ಅಧಿಕಾರದ ಗದ್ದುಗೆ ಇದಕ್ಕೆ ಇಲ್ಲದಿರುವುದು. ಶಿಷ್ಟ ಭಾಷೆಯನ್ನು ಸಾಂಪ್ರದಾಯಿಕ ತರಬೇತಿಗಳ ಮೂಲಕ ಎರಕ ಹೊಯ್ದಂತಹ ಕೌಶಲಗಳನ್ನು ಆಧುನಿಕ ಸಮಾಜದಲ್ಲಿ ತಯಾರು ಮಾಡಲಾಗುತ್ತಿದೆ. ಆ ಭಾಷೆಗೆ ಡಿಗ್ರಿಗಳಿವೆ, ಪದವಿ ಸ್ಥಾನಗಳಿವೆ, ಉದ್ಯೋಗಗಳಿವೆ. ನೆರೆಹೊರೆಯ ಸಂಪರ್ಕದ ಶಿಕ್ಷಣ ಮತ್ತು ವ್ಯಾವಹಾರಿಕ ಸಂಪರ್ಕಗಳಿವೆ.

ಹೆಣ್ಣಿನ ಭಾಷೆಯನ್ನು ಕುರಿತು ಇತ್ತೀಚೆಗೆ ಭಾಷಾಶಾಸ್ತ್ರದಲ್ಲಿ ಚಿಂತನೆಗಳು ನಡೆಯುತ್ತಿವೆ. ಹೆಣ್ಣಿನ ಭಾಷೆ ಸ್ವಾತಂತ್ರ್ಯವಿಲ್ಲದ ಪರಿಶಿಷ್ಟರಂತೆ, ಹೆಣ್ಣಿನ ಭಾಷೆ ಗಂಡಿನ ಮುಖ್ಯವಾಹಿನಿಗೆ ಸೇರದ ಬಂಧನದ ಭಾಷೆ ಎಂಬಂತಹ ಚರ್ಚೆಗಳು ನಡೆಯುತ್ತಿವೆ. ಆಕೆ ಬಳಸುವ ಪದಗಳು, ವಾಕ್ಯಗಳು, ನುಡಿಗಟ್ಟುಗಳು, ನುಂಗಿ ನುಂಗಿ ಹೊರಬರುವ ಮಾತಿಗೆ ಅನುಗುಣವಾದ ಆಂಗಿಕ ಚಲನವಲನಗಳು ಜಾನಪದ ಅಭಿವ್ಯಕ್ತಿಯನ್ನು ನೆನಪಿಸುವುದಿಲ್ಲವೇ? ಹೆಣ್ಣಿನ ಭಾಷೆಯನ್ನು ಯಾಕೆ ಜನಪದ ಭಾಷೆಯೆಂದು ಕರೆಯಬಾರದು? ಆಕೆಯ ಗರತಿಯ ಹಾಡುಗಳಲ್ಲಿನ ಮಾನವ ಸಂಬಂಧಗಳ ಭಾವನೆಗಳಿಗೆ ಸೂತಕ ಹಿಡಿಯಿತೇ? ತಂದೆ ಮಾತನಾಡುವುದು ಶಿಷ್ಟ ಭಾಷೆಯಾದರೆ ತಾಯಿಯ ಮಾತು ಜನಪದವಲ್ಲವೇ? ಅಧಿಕಾರದ ಮಾತು ಯಾವಾಗಲೂ ಗಂಡಿನ ಆದೇಶ, ಆಜ್ಞೆಯ ಶಿಷ್ಟ ರೂಪದಲ್ಲಿರುತ್ತದೆ. ನೀಡುತ್ತಿದ್ದೇನೆಂಬ ಭಾವನೆಯ ಗಂಡಿನ ಭಾಷೆ ಶಿಷ್ಟವಾಗಿರುತ್ತದೆ. ಕೊಡುವ ಮತ್ತು ಕೊಳ್ಳುವ ಭಾವನೆಗಳು, ಸ್ವಭಾವಗಳು ಭಾಷೆಯಲ್ಲಿನ ಯಜಮಾನಿಕೆ ಮತ್ತು ಪರಾಧೀನತೆಯ ಅಭಿವ್ಯಕ್ತಿಗಳಾಗಿರುತ್ತವೆ.

ಜನಪದ ಭಾಷೆಯೆಂದರೆ ಅದು ಒರಟು, ಭಾವಾವೇಶ, ಉತ್ಕಟತೆಗಳ ಅಭಿವ್ಯಕ್ತಿ, ಇದ್ದದ್ದನ್ನು ಇದ್ದಹಾಗೆ ಹೇಳುವ ನೇರ ಕ್ರಿಯೆ ಹಾಗೂ ಪ್ರತಿಕ್ರಿಯಾತ್ಮಕ ಸಂಭಾಷಣೆಯಾಗಿದೆ. ಆಧುನಿಕ ನಾಗರಿಕತೆ ಮತ್ತು ಸಾಮ್ರಾಜ್ಯಶಾಹಿಯ ನೀತಿ ನಿರೂಪಣೆಗಳು ಅವುಗಳ ಉದ್ದೇಶ, ಆಶಯಗಳು ಬಳಸುದಾರಿಯ ತಂತ್ರವನ್ನು ಅನುಸರಿಸುತ್ತವೆ. ಸಾಮ್ರಾಜ್ಯಶಾಹಿಗಳು ನೇರವಾಗಿ ಹಿಂದುಳಿದ ಮತ್ತು ಮುಂದುವರಿದ ದೇಶಗಳ ಸಂಸ್ಕೃತಿ ಮತ್ತು ಸಂಪತ್ತಿನ ಮೇಲೆ ಲಗ್ಗೆ ಹಾಕುವುದಿಲ್ಲ, ಅವು ಇತರ ದೇಶಗಳೊಂದಿಗೆ ಸಂಬಂಧವೇರ್ಪಡಿಸಿಕೊಳ್ಳುವ ಭಾಷಿಕ ರೂಪದ (ಲಿಖಿತ) ಒಪ್ಪಂದದಲ್ಲಿಯೇ ನಯಗಾರಿಕೆಯ, ಅಭಿವೃದ್ಧಿಯ, ಸಂಬಂಧವೃದ್ಧಿಯ, ಬೇಕಾದ ಹಾಗೆ ತಿರುಚಬಹುದಾದ ದುರಾಸೆಯಿಂದ ಕೂಡಿದ ಭಾಷೆಯಲ್ಲಿ ಇರುತ್ತದೆ. ಜನಪದ ಭಾಷೆ ಇಂದು ಶಿಷ್ಟ ಕನ್ನಡದ ಪ್ರಭಾವಳಿಯಿಂದ ಮಾತ್ರ ಮಸುಕಾಗುತ್ತಿಲ್ಲ. ಅದಕ್ಕೆ ಎದುರಾಗಿರುವ ದೊಡ್ಡ ಶತ್ರು ಎಂದರೆ ಸಾಮ್ರಾಜ್ಯಶಾಹಿ ಭಾಷೆ. ದೇಶೀಯ, ಜನಪದ ಭಾಷೆಯು ತನ್ನನ್ನು ತಾನು ಕಾಪಾಡಿಕೊಳ್ಳಲು ಇದುವರೆಗೂ ಹೂಡಿದ ತಂತ್ರಗಳು, ಉಪಾಯಗಳನ್ನು ತನ್ನದೇ ದೇಶದ ರಾಷ್ಟ್ರೀಯ ಭಾಷೆಗಳೆಂಬ ಶಿಷ್ಟ ಭಾಷೆಗಳ ಆಕ್ರಮಣವನ್ನು ಎದುರಿಸಲು ಬಳಸಿತು. ಆದರೆ ನೆಲ, ಜಲ, ಅರಣ್ಯಗಳೊಂದಿಗೆ ಇಲ್ಲಿನ ಬದುಕು ಮತ್ತು ಸಂಸ್ಕೃತಿಯನ್ನು ಸ್ವಾಹಾಮಾಡಲು ಸಿದ್ಧವಿರುವ ದೈತ್ಯ ಸಾಮ್ರಾಜ್ಯಶಾಹಿ ಭಾಷೆಯನ್ನು ಎದುರಿಸಿ ಉಳಿಯಲು ಜನಪದಕ್ಕೆ ತನ್ನ ಬತ್ತಳಿಕೆಯಲ್ಲಿ ಯಾವ ಬಾಣಗಳಿವೆ ತಿಳಿಯದು. ಯಾಕೆಂದರೆ ಇದು ಬಿಲ್ಲು ಬಾಣಗಳ ಕಾಲವಲ್ಲವಲ್ಲ, ಜನಪದರಂತೆ ಮುಖಾಮುಖಿ ಸಂಘರ್ಷಕ್ಕಿಳಿಯುವ, ತಪ್ಪಿದ್ದರೆ, ಅನ್ಯಾಯವೆಸಗಿದ್ದರೆ, ಕೊಲೆ, ಅತ್ಯಾಚಾರ ಮಾಡಿದ್ದರೆ ಕೆಲವೇ ದಿನಗಳಲ್ಲಿ ಪಂಚಾಯತಿ ಮಾಡಿ ಶಿಕ್ಷೆ ಕೊಡುವ, ಮಾಡಿದ ತಪ್ಪಿಗಾಗಿ ಶಿಕ್ಷೆ ಅನುಭವಿಸಿ ಪಶ್ಚಾತ್ತಾಪಪಡುವ ಕಾಲ ಸಂದರ್ಭಗಳೂ ಅಲ್ಲವಲ್ಲ. ಅಲ್ಲಿ ಭಾಷೆಗೆ ಮೌಲ್ಯವಿತ್ತು. ಸುಳ್ಳು ಹೇಳಲಿ, ನಿಜ ಹೇಳಲಿ ಅಲ್ಲಿ ಒಂದೇ ನಾಲಗೆಯಿತ್ತು. ಆದರೆ ದೇಶೀಯ ಭಾಷೆಗಳ ಮೇಲೆ ಆಕ್ರಮಣ ಮಾಡುತ್ತಿರುವ ಸಾಮ್ರಾಜ್ಯಶಾಹಿ ಭಾಷೆಗೆ ನಾಲಗೆಯೇ ಇಲ್ಲ, ತನ್ನ ಭೌತಿಕ ಚಹರೆಯನ್ನು ಕಳೆದುಕೊಂಡ ವಾಣಿಜ್ಯ ವೇಷದ ಭಾಷೆ, ಸಾಮ್ರಾಜ್ಯಶಾಹಿ ಭಾಷೆಗಳು ರೂಪಿಸುತ್ತಿರುವ ನೀತಿ ನಿರೂಪಣೆ, ಕಾನೂನುಗಳ 'ಧ್ವನಿ'ಗಳನ್ನು ಅರ್ಥ ಮಾಡಿಕೊಳ್ಳುವ ಶಕ್ತಿ ಜನಪದರಿಗಾಗಲೀ, ಜನಪದ ಭಾಷೆಗಾಗಲೀ ಇರಲು ಸಾಧ್ಯವೇ?




ಡಿ. ಅಂಜಿನಪ್ಪ
ಉಪನ್ಯಾಸಕರು, ಮೊದಲ ತಿರುವು, ಎಡಭಾಗ
ಜೆ.ಸಿ.ಆರ್. ಬಡಾವಣೆ, ಚಿತ್ರದುರ್ಗ





ನನ್ನ ಹಳ್ಳಿಯಲಿ
ಶಾಂತಿ ಅನ್ನುವುದು
ಕಣ್ಣಿಗೆ ಕಾಣದೊಂದು ಜೀವಸ್ಮುಖಿ ಅಲೆ
ತಮ್ಮ ಪಾಡಿಗೆ ತಾವಿರುತ್ತಲೇ ಒಂದಾಗಿ ನಡೆವ ಕಲೆ
ಕವಲುಗಳೆಷ್ಟು ಒಡೆದರೂ
ಎಲ್ಲರನೂ ಎಲ್ಲವನೂ ಹಿಡಿದಿಡುವ ತಾಯಿಬೇರು!
ಯಾರು ಯಾರಿಗೂ ರಕ್ತ ಸಂಬಂಧವಲ್ಲದಿದ್ದರೂ
ಅತ್ತೆ - ಮಾಮ
ಚಿಕ್ಕಪ್ಪ - ಚಿಕ್ಕಮ್ಮ ಎಂದು ಕರೆಯುವ ಬಂಧ
ಯಾರದೋ ಮನೆಯ ಹುಟ್ಟಿಗೆ
ಯಾರ್‍ಯಾರೋ ಪಡುವ ಆನಂದ
ಯಾರದೋ ಸಾವಿಗೆ ಇನ್ಯಾರೋ
ಸದ್ದಿರದೆ ಬಿಕ್ಕುವ ವಿಷಾದ!
ನನ್ನ ಹಳ್ಳಿ ಎಂದರೆ --


ಕು. ಸ. ಮಧುಸೂದನ
ವಿಜಯಾ ಬ್ಯಾಂಕ್ ಮಹಡಿ, ರಂಗೇನಹಳ್ಳಿ - ೫೭೭೧೧೬
ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ

# ಮಣ್ಣು ಮಾತನಾಡಿದಾಗ



ನಾನು ನಿಮಗೆಲ್ಲಾ ಚಿರಪರಿಚಿತ. ನೀವು ಹುಟ್ಟಿದಾಗಿನಿಂದ ಸಾಯುವವರೆಗೂ ಪ್ರತಿದಿನವೂ ನನ್ನನ್ನು ನೋಡುತ್ತಲೇ ಇರುತ್ತೀರಿ. ಆದರೂ ನನ್ನನ್ನು ಸರಿಯಾಗಿ ಅರಿತವರು ವಿರಳ. ಹೆಚ್ಚು ಜನ ನನ್ನನ್ನು ನಿರ್ಜೀವಿ ಎಂದು ಭಾವಿಸಿದ್ದಾರೆ. ಆದರೆ ನಾನು ಸದಾ ಜೀವಂತ. ನನಗೆ ಜೀವ ಇಲ್ಲವೆಂದು ತಪ್ಪು ತಿಳಿದಿರುವುದೊಂದೇ ಅಲ್ಲ, ''ನಿನಗೇನು ಗೊತ್ತು ಮಣ್ಣು, ಮಣ್ಣಂಗಟ್ಟಿ, ಮಣ್ಣು ಮುಕ್ಕು'', ಹೀಗೆಂದು ಯಾರನ್ನಾದರೂ ಹೀಯಾಳಿಸುವಾಗ ನನ್ನ ಹೆಸರನ್ನು ಬಳಸಿಕೊಳ್ಳುವರು. ನನಗೆ ಜೀವವಿಲ್ಲವೆಂದು ಭಾವಿಸಿ ನನ್ನನ್ನು ತುಳಿಯುವರು, ಅಪ್ಪಳಿಸುವರು, ಅಗೆಯುವರು, ಕೊಚ್ಚುವರು, ಚುಚ್ಚುವರು, ಉಜ್ಜುವರು, ಜಜ್ಜಿ ನುಜ್ಜುನೂರು ಮಾಡುವರು, ಸುಡುವರು, ನೀರಿಗೆ ಹಾಕಿ ಜಾಲಾಡಿಸುವರು, ಇಟ್ಟಿಗೆ ಮಾಡಿ ಮನೆ ಕಟ್ಟುವಾಗ ನನ್ನನ್ನು ಬಂಧಿಸಿ ಹತ್ತಾರು, ನೂರಾರು ವರ್ಷ ಒಂದೆಡೆ ಕಟ್ಟಿಹಾಕಿ ಬಿಡುವರು, ಏನೆಲ್ಲಾ ಮಾಡುವರು ಆದರೂ ನನಗೆ ಸಾವಿಲ್ಲ. ನಾನು ಜೀವಂತವಾಗಿಯೇ ಇದ್ದೇನೆ. ಕಟ್ಟಿಹಾಕಿ ದಶಕ-ಶತಕಗಳಾಗಿದ್ದರೂ ಬಿಡುಗಡೆಯಾದ ನಂತರ ನನಗೆ ಜೀವ ಬಂದುಬಿಡುವುದು. ನನ್ನ ಸ್ನೇಹಿತರು ಮತ್ತು ಬಂಧುಗಳು ನನ್ನನ್ನು ಸಾಯಲು ಬಿಡುವುದಿಲ್ಲ! ಇವರಾರು ಸ್ನೇಹಿತರು ಬಂಧುಗಳು ಎಂದು ಆಶ್ಚರ್ಯವೆ? ಅವರನ್ನು ಪರಿಚಯಿಸಲು ನನಗೆ ಒದಗಿಬಂದ ಸುಸಂದರ್ಭವಿದು.

ನನ್ನ ನಿಕಟ ಸಂಬಂಧಿಗಳೆಂದರೆ ಸೂರ್ಯ, ಚಂದ್ರ, ಗಾಳಿ, ನೀರು, ಸಾವಯವಾಂಶ, ಮತ್ತು ಸಕಲ ಜೀವರಾಶಿ. ಕೊನೆಯದರಲ್ಲಿ (ಜೀವರಾಶಿ) ಮನುಷ್ಯನೂ ಸೇರಿದ್ದಾನೆ. ಜೀವರಾಶಿಗಳ ಪೈಕಿ ಮನುಷ್ಯರನ್ನು ಹೊರತುಪಡಿಸಿದರೆ, ಮಿಕ್ಕವರೆಲ್ಲಾ ನಿಸ್ವಾರ್ಥಿಗಳು. ನನ್ನಿಂದ ಏನನ್ನೂ ಬಯಸದೆ, ನನಗೆ ಬೇಕಾದುದನ್ನೆಲ್ಲಾ ಕೊಡುವರು. ಸಂಕ್ಷಿಪ್ತ ಅಥವಾ ಸೂಕ್ತವಾಗಿ ಹೇಳುವುದಾದರೆ, ಮನುಷ್ಯನು ನನಗೆ ಕೊಡುವ ಹಿಂಸೆಗೆಲ್ಲಾ ಅವರೇ (ಮಾನವೇತರ ಜೀವಿಗಳು) ಔಷಧಿ. ನನ್ನ ಉಳಿವು, ಅಭಿವೃದ್ಧಿ, ನನ್ನ ಸ್ನೇಹಿತರ ಉತ್ಕೃಷ್ಟ ಬೆಳವಣಿಗೆ, ಸಂಖ್ಯಾಭಿವೃದ್ಧಿ ಹೀಗೆ ನನ್ನ ಹಿತಚಿಂತಕರಿಗೆ ಸಹಾಯವಾಗುವ ಸಾವಯವಾಂಶವನ್ನು ಮನುಷ್ಯ, ತಿಳಿದೋ ತಿಳಿಯದೆಯೋ ಕಬಳಿಸುವ ಹಾದಿ ಹಿಡಿದಾಗ ನಾನೂ ಬಡವಾಗುತ್ತೇನೆ. ಅವನೂ ಬಡವಾಗುತ್ತಾನೆ. ಜಾನುವಾರುಗಳೂ ಬಡವಾಗುತ್ತವೆ. ಜೀವರಾಶಿಗೆ ಸೇರಿದವರೆಲ್ಲಾ ಪರಸ್ಪರ ಅನ್ಯೋನ್ಯವಾಗಿ 'ಕೊಡು - ತರುವುದು', ಪ್ರತಿಯೊಬ್ಬರ ಬೇಡಿಕೆಗಳನ್ನು ಆತ್ಮೀಯತೆಯಿಂದ ಪೂರೈಸುವುದು, ಜೀವಿಗಳು ಪೃಥ್ವಿಯ ಮೇಲೆ ಉದ್ಭವವಾದಾಗಿನಿಂದಲೂ ನಡೆದುಬಂದಿರುವ ಸಂಪ್ರದಾಯ. ಈ ಸಂಪ್ರದಾಯದಿಂದ ಹೊರಬಂದಿರುವ ಏಕೈಕ ಜೀವಿ ಮನುಷ್ಯ. ಮನುಷ್ಯನ ವಿಷಯ ಇಷ್ಟಕ್ಕಿರಲಿ. ಏಕೆಂದರೆ ನನ್ನ ಸ್ನೇಹಿತರನ್ನು ಪರಿಚಯಿಸಲು ನನಗೆ ಆತುರ.

**ಸೂರ್ಯ**

ನನ್ನ ಸೃಷ್ಟಿ, ಉಳಿವು, ಬೆಳವಣಿಗೆ ನನ್ನ ಜೀವರಾಶಿಗಳ ಸಮೂಹದ ಸಂತಾನಾಭಿವೃದ್ಧಿ ಬೆಳವಣಿಗೆಗೆ ಬೇಕಾದ ಸಮತೋಲನವಾದ ಉಷ್ಣಾಂಶ, ಅಲ್ಲದೆ ವಿಶೇಷ ಜೀವಿಗಳಿಗೆ ಬೇಕಾದ ಮಟ್ಟದಲ್ಲಿ ಅತಿ ಹೆಚ್ಚು, ಕಡಿಮೆ ಉಷ್ಣಾಂಶ, ಹೀಗೆ ತನ್ನ ಸೂರ್ಯರಶ್ಮಿ ಮತ್ತು ಬೆಳಕನ್ನು ಒದಗಿಸುವ ನನಗಿಂತಲೂ ಹೆಚ್ಚು ವಯಸ್ಸಾಗಿರುವ, ಕತ್ತಲಲ್ಲಿರುವ ಜಗತ್ತಿಗೆ ಬೆಳಕನ್ನು ಚೆಲ್ಲುವ, ಪೂಜಿಸಲು ಅತ್ಯಂತ ಯೋಗ್ಯವಾದ ನಕ್ಷತ್ರ ಸೂರ್ಯ. ಹಗಲಾಗಲಿ, ರಾತ್ರಿಯಾಗಲಿ ಒಂದೇ ಸಮನೆ ಇದ್ದರೆ ಅಪಾಯಕಾರಿ ಎಂಬುದನ್ನು ಅರಿತು ಅರ್ಧ ದಿವಸ ಮರೆಯಾಗುತ್ತಾನೆ; ಮತ್ತೆ ಉದಯಿಸುತ್ತಾನೆ. ಇದೇನು ಸೂರ್ಯ ಮೂಡುತ್ತಾನೆ, ಮುಳುಗುತ್ತಾನೆ, ಈ ದಿನಚರಿಯಿಂದ ಅವನಿಗೆ ಬೇಸರ ಇಲ್ಲವೇ ಎಂದು ಕೇಳುವುದನ್ನು ತಪ್ಪಿಸಲು ಮಾರ್ಗಗಳನ್ನು ಹುಡುಕಿದ್ದಾನೆ. ಮೋಡಗಳ ಸಹಾಯದಿಂದ ಆಗಾಗ ಮರೆಯಾಗುತ್ತಾನೆ, ಆಗಾಗ ತನಗೂ ಪೃಥ್ವಿಗೂ ಮಧ್ಯೆ ಚಂದ್ರನನ್ನು ಬರಮಾಡಿಕೊಂಡು ಜನರು 'ಗ್ರಹಣ' ಎಂದು ಕರೆಯುವ ರಮ್ಯನೋಟಕ್ಕೆ ಅವಕಾಶ ಮಾಡಿಕೊಡುತ್ತಾನೆ. ಗ್ರಹಣವು ವಿವಿಧ ಭಂಗಿಗಳಲ್ಲಿ ಕಾಣಿಸಿ ಜನರ ಕಣ್ಣಿಗೆ ಹಬ್ಬ ಉಂಟಾಗುವಂತೆ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ರೀತಿ ಕಾಣಿಸಿಕೊಂಡು, ಮನಸ್ಸಿಗೆ ಆನಂದ ಉಂಟುಮಾಡಿ ಬೇಸರವನ್ನು ಹೋಗಲಾಡಿಸುತ್ತಾನೆ. ಅಲ್ಲದೆ ಬುದ್ಧಿಜೀವಿಗಳಲ್ಲಿ ಕುತೂಹಲ ಉಂಟುಮಾಡಿ ವೈಜ್ಞಾನಿಕ ಬೆಳವಣಿಗೆಗೆ ಕಾರಣನಾಗುತ್ತಾನೆ. ತನ್ನ ಶಕ್ತಿ ಮತ್ತು ಸಮುದ್ರವೇ ಅಲ್ಲದೆ ಎಲ್ಲೆಡೆ ಇರುವ ನೀರಿನ ಸಹಯೋಗದೊಡನೆ ಮೋಡಗಳನ್ನು ಸೃಷ್ಟಿಸಿ, ಆಗಾಗ ಭೂಮಿಯ ಮೇಲಿರುವ ಜೀವಿಗಳಿಗೆ ನೆರಳು ಸಿಗುವಂತೆ ಮಾಡುವುದಲ್ಲದೆ, ಎಲ್ಲೆಡೆ ಮಳೆ ಬರಿಸಿ ಭೂಮಿಯನ್ನು ಜಲಭರಿತ ಮಾಡಿ, ಫಲವತ್ತತೆಯನ್ನು ಹೆಚ್ಚಿಸಿ, ಸಕಲ ಜೀವಿಗಳ ಉಳಿವು ಅಭಿವೃದ್ಧಿಗೆ ನೆರವು ನೀಡುತ್ತಾನೆ. ಅವನ ಇನ್ನೊಂದು ವೈಶಿಷ್ಟ್ಯವೆಂದರೆ, ರಾತ್ರಿಯೆಲ್ಲಾ ಸಂಪೂರ್ಣ ಕತ್ತಲಿದ್ದು, ಅದು ಪ್ರತಿದಿನದ ಪ್ರಕ್ರಿಯೆಯಾಗಿ ಬೇಸರ ತರುವುದು ಬೇಡ ಬಿಸಿಲಿನ ತಾಪವಿಲ್ಲದ ಬೆಳಕನ್ನು ಕೊಡಬಾರದೇಕೆ ಎಂದು ಯೋಚಿಸಿ ಪ್ರವಾಸಿಗಳಿಗೆ, ಮದುಮಕ್ಕಳಿಗೆ ಒಂದು ವಿಶೇಷ ವಾತಾವರಣ ನಿರ್ಮಿಸಬೇಕೆಂದು ತನ್ನ ಸ್ನೇಹಿತ ಚಂದ್ರನೊಡನೆ ಒಪ್ಪಂದ ಮಾಡಿಕೊಂಡು ಅವನ ಮೂಲಕ ತನ್ನದೇ ಬೆಳಕಿನ ಮೂಲದ ಬೆಳದಿಂಗಳ ತಂಪನ್ನು ನೀಡುತ್ತಾನೆ. ಬೆಳದಿಂಗಳು ಒಂದೇ ಸಮನಿದ್ದರೆ ಅದರ ಮಹತ್ವ ಕಳೆದುಕೊಳ್ಳುತ್ತದೆ ಎಂದು ಅರಿತು ಬೆಳದಿಂಗಳ ಮಹತ್ವದ ಬಗ್ಗೆ ಅವರಿಗೆ ತಿಳುವಳಿಕೆ ಉಂಟುಮಾಡಲು ಮೋಡಗಳ ಮರೆಯಲ್ಲಿ ಅವಿತುಕೊಳ್ಳಲು ಮೋಡಗಳ ಸಹಾಯ ಪಡೆಯುತ್ತಾನೆ.

**ಚಂದ್ರ ಮತ್ತು ನಕ್ಷತ್ರಗಳು**

ನನ್ನ ಮತ್ತೊಬ್ಬ ಸ್ನೇಹಿತ ಚಂದ್ರನ ಬಗ್ಗೆ ಆಗಲೇ ಸ್ವಲ್ಪ ತಿಳಿಸಿದ್ದೇನೆ. ಒಂಟಿಯಾಗಿ ಮಾಡಲಾಗದ್ದನ್ನು ಸಹಭಾಗಿತ್ವದಲ್ಲಿ ಮಾಡಬಹುದು ಎಂಬುದನ್ನು ಸೂರ್ಯ-ಚಂದ್ರರು ಜೀವಕೋಟಿಗೆ ತಿಳಿಸಿಕೊಟ್ಟಿದ್ದಾರೆ.

ನಮ್ಮಿಬ್ಬರ ಸಂಬಂಧವನ್ನು ಮೆಚ್ಚಿ ನಕ್ಷತ್ರಗಳು ನಾವೂ ನಿಮ್ಮೊಡನಿದ್ದೇವೆ ಎಂದು ಮಿರುಮಿರು ಮಿನುಗುತ್ತಾ, ಹೊಳೆಯುತ್ತಾ ಜೀವಕೋಟಿಯ ಕಣ್ಣುಗಳಿಗೆ ಮನಸ್ಸಿಗೆ ತಂಪೆರೆಯುತ್ತವೆ. ಒಮ್ಮೊಮ್ಮೆ

ಡಾ|| ಎಮ್. ಮಹದೇವಪ್ಪ





ಭೂಮಿಗೆ ಬಿದ್ದು ಮನುಷ್ಯನನ್ನು ಅಥವಾ ಅವನ ಆಸ್ತಿಪಾಸ್ತಿಯನ್ನು ಸುಟ್ಟು ಬಿಡುವುದೇನೋ ಎನ್ನುವ ಭಯ ಉಂಟುಮಾಡಿ, ಆದರೆ ಹಾಗೆ ಮಾಡದೆ ಮಾಯವಾಗಿಬಿಡುತ್ತವೆ. ಇದಕ್ಕೆ ಯಾರೂ ''ಟಿಕೆಟ್ ತೆಗೆದುಕೊಳ್ಳಿ'' ಎಂದು ಕೇಳುವುದಿಲ್ಲ. ನಕ್ಷತ್ರಗಳು ಒಂದೇ ಸಮನೆ ಕಾಣಿಸಿಕೊಂಡರೆ ಮಹತ್ವ ಕಡಿಮೆಯಾಗುತ್ತದೆ ಅಲ್ಲವೇ? ಆದ್ದರಿಂದಲೇ ಆಗಾಗ ಅವು ಮೋಡಕ್ಕೆ ಮೊರೆಹೋಗಿ ಕಣ್ಣಿಗೆ ಕಾಣಿಸದಂತೆ ಇರುತ್ತವೆ. ಅಷ್ಟೊಂದು ಸಂಖ್ಯೆಯಲ್ಲಿದ್ದರೂ ಅವು ಜಗಳ ಮಾಡುವುದಿಲ್ಲ ಮತ್ತು ಸ್ಥಳ ಬದಲಾಯಿಸುವುದಿಲ್ಲ – ರಾಜಕಾರಣಿಗಳಂತೆ! ''ಧ್ರುವ'' ತಾರೆಯೊಡಗೂಡಿ ಮನುಷ್ಯನಿಗೆ ದಿಕ್ಕು ತೋರಿಸುವ ಅವಿರತ ಮಾರ್ಗದರ್ಶಿಗಳಾಗಿವೆ.

**ಗಾಳಿ**

ಗಾಳಿಯೇ ಎಲ್ಲಾ ಜೀವಿಗಳಿಗೂ ಪ್ರಾಣ. ಗಾಳಿ ಇಲ್ಲದಿದ್ದರೆ, ಅಲ್ಲಲ್ಲಿ ಉದ್ಭವಿಸಿದ ತ್ಯಾಜ್ಯ, ಕೊಳೆ, ಇತ್ಯಾದಿ ಬೇಡವಾದ ಹಾಗೂ ಬೇಕಾದ ವಸ್ತುಗಳು ಒಂದೆಡೆಯೇ ಇದ್ದು ಮಾರಕವಾಗುತ್ತವೆ. ಗಾಳಿಯು ಉಷ್ಣಾಂಶವನ್ನು ಒಂದು ಹದಕ್ಕೆ ತರುತ್ತದೆ. ಸಕಲ ಜೀವಿಗಳ ಚಲನೆಗೂ ವಾಹನವಾಗುತ್ತದೆ. ಸಕಲ ಜೀವಿಗಳ ಉಸಿರು ಗಾಳಿ, ಅಂದರೆ ಪ್ರಾಣ. ಗಾಳಿಯ ಅತ್ಯಂತ ಮಹತ್ವದ ಕಾರ್ಯ ಮತ್ತೊಂದಿದೆ. ಅದೆಂದರೆ ಪರಾಗಸ್ಪರ್ಶ ಕ್ರಿಯೆಗೆ ನೆರವಾಗುವುದು, ಬೀಜ ಪ್ರಸಾರಕ್ಕೆ ನೆರವಾಗುವುದು, ವಾತಾವರಣದ ಉಷ್ಣಾಂಶ ಮತ್ತು ತೇವಾಂಶಗಳ ಸಮತೋಲನೆಯನ್ನು ಕಾಪಾಡುವುದು, ಪರಿಸರವನ್ನು ಸ್ವಚ್ಛವಾಗಿಡುವುದು... ಹೀಗೆ ಅನೇಕ.

**ನೀರು**

ನನ್ನ ಸ್ನೇಹಿತ ನೀರಿಲ್ಲದಿದ್ದರೆ ಯಾರೂ ಜೀವಿಸಲು ಸಾಧ್ಯವಿಲ್ಲ. ನಾನೂ ಸಹ ನೀರಿಲ್ಲದಿದ್ದರೆ ಬಂಜೆಯಾಗಿ ಬಿಡುತ್ತೇನೆ. ನನಗೆ ಗಂಗೆ ಎಲ್ಲದಕ್ಕಿಂತ ಹತ್ತಿರದವಳು.



ಅವಳನ್ನು ನಾನು ಶೇಖರಿಸಿ ಸಮುದ್ರ, ಸಾಗರ, ಕೊಲ್ಲಿಗಳನ್ನು ಮಾಡುತ್ತೇನೆ. ಕೆರೆ, ಕಟ್ಟೆ, ಬಾವಿಗಳಂತಹ ಎಲ್ಲಾ ತರಹದ ಸಣ್ಣ ಪ್ರಮಾಣದ ನೀರಿನ ಉಗ್ರಾಣಗಳನ್ನೂ ಸಹ ಸೃಷ್ಟಿಸುತ್ತೇನೆ. ಗಂಗೆಯ ಜೊತೆ ಸೇರಿ ನಾನು ಯಾವ ಅವತಾರವನ್ನಾದರೂ ತಾಳಬಲ್ಲೆ. ನನ್ನನ್ನು ಉಪಯೋಗಿಸಿ ಎಲ್ಲ ರೂಪದ ದೇವತೆಗಳನ್ನು ಮೂಡಿಸುತ್ತಾರೆ. ಎಲ್ಲ ಬೆಳೆಗಳನ್ನು ಬೆಳೆಯುತ್ತಾರೆ. ನನ್ನನ್ನು ಕಾಯಿಸಿ ಎಲ್ಲ ಕೆಲಸಗಳಿಗೂ ಉಪಯೋಗಿಸುತ್ತಾರೆ. (ಮಡಕೆ ಮಾಡುವವನಿಗೆ ಮಣ್ಣೇ ಮೊದಲು). ಮನುಷ್ಯ, ಪ್ರಾಣಿಗಳು, ಸಸ್ಯಗಳು, ಸೂಕ್ಷ್ಮ ಜೀವಾಣುಗಳು ಇವರೆಲ್ಲಾ ನನ್ನ ಮಕ್ಕಳು. ನನ್ನ ಮಕ್ಕಳಾದ ಮನುಷ್ಯರು ಅತ್ಯಂತ ಸ್ವಾರ್ಥಿಗಳು. ಆದರೇನಂತೆ, ಮಕ್ಕಳು ಮಕ್ಕಳೇ ಅಲ್ಲವೇ! ಅವರಿಗೆ ಬೇಕಾದದ್ದನ್ನೆಲ್ಲಾ ಒದಗಿಸುವ ಸೌಕರ್ಯ - ಸೌಲಭ್ಯಗಳ ಕೊರತೆ ಉಂಟುಮಾಡಿಲ್ಲ. ಆದರೆ ಅವರಲ್ಲಿ ಕೆಲವರು ತಮ್ಮ ಸ್ವಾರ್ಥಕ್ಕಾಗಿ ನಾನು ಒದಗಿಸುವ ಸೌಲಭ್ಯಗಳನ್ನು ಕಬಳಿಸಿ, ಗೌಪ್ಯವಾಗಿಟ್ಟು, ಇತರೆ ನನ್ನ ಮುಗ್ಧ ಮಕ್ಕಳಿಗೆ ತೊಂದರೆ ಉಂಟು ಮಾಡುತ್ತಾರೆ. ಎಲ್ಲರೂ ನನ್ನನ್ನು ಕಾಪಾಡುತ್ತಾರೆ. ಪರಸ್ಪರ ಸಹಕಾರದಿಂದ ಜೀವಿಸುತ್ತಾರೆ, ಮಾನವನನ್ನು ಹೊರತು ಪಡಿಸಿ! ಅಂತರ್ಜಲವಾಗಿ ಗಂಗೆ ಹರಿಯದೆ ಏನೂ ನಡೆಯದು. ಯಾವುದೇ ಜೀವಿ ಜೀವಂತವಾಗಿರಲಾರದು. ಅವಳ ಮಹತ್ವವನ್ನು ಸರಿಯಾಗಿ ತಿಳಿಯದೆ ಅವಳನ್ನು ಪಾತಾಳಕ್ಕೆ ಕಳುಹಿಸಿರುವುದು ದುರ್ದೈವ. ಅವಳನ್ನು ವೈಜ್ಞಾನಿಕವಾಗಿ ಬುದ್ಧಿವಂತಿಕೆಯಿಂದ ಪಾತಾಳದಿಂದ ಮೇಲೆ ಬರಿಸಿಕೊಂಡರೆ ಜೀವನ ಸುಗಮವಾದೀತು.

**ಗರಿಕೆ**

ನನ್ನ ರಕ್ಷಾಕವಚ ಭೂಮಿಯ ಮೇಲಿನ ಅಸಂಖ್ಯಾತ ಸಸ್ಯಗಳು. ಅವುಗಳನ್ನು ಹೆಸರಿಸುವುದಾದರೆ, ಅವುಗಳ ಪೈಕಿ ಮೊದಲನೆಯದು ಗರಿಕೆ ಹುಲ್ಲು. ಬಹುನಾಮಾಂಕಿತ ಈ ಸಸ್ಯಕ್ಕೆ ಹರಿಯಾಲಿ, ದರ್ಭೆ ಹುಲ್ಲು ಹೀಗೆ ಹೆಸರುಗಳು ಅನೇಕ. ನನ್ನ ಕವಚವಾಗಿ ಅಷ್ಟೊಂದು ಸಸ್ಯಗಳಿಲ್ಲದಿದ್ದರೆ ಮಳೆ ಬಿದ್ದಕೂಡಲೇ ನಾನು ಕೊಚ್ಚಿಹೋಗಿಬಿಡುತ್ತೇನೆ. ನನ್ನ ಸವಕಳಿ ತಪ್ಪಿಸುವುದರಲ್ಲಿ ಹುಲ್ಲಿನ ಪಾತ್ರ ಬಹಳ ಮಹತ್ತರವಾದುದು. ಪರಿಸರ ಮತ್ತು ಫಲವತ್ತತೆ ಕಾಪಾಡುವಲ್ಲಿ ಹುಲ್ಲಿನ ಮಹತ್ವ ಅರಿತವರು ಅಪರೂಪ. ಪಟ್ಟಣಗಳಲ್ಲಿ ಪರಿಸರ ಶುದ್ಧೀಕರಿಸುವ ನೆಪದಲ್ಲಿ ರಸ್ತೆಯ ಆಸುಪಾಸುಗಳಲ್ಲಿರುವ ಹುಲ್ಲನ್ನು ಕೆತ್ತಿ ಬಿಸಾಡುವರು. ಇದರಿಂದ ನಾನು ನೀರಿನ ಜೊತೆ ಕೊಚ್ಚಿ ಹೋಗುವುದಲ್ಲದೆ ಗಾಳಿಯಲ್ಲಿ ತೂರಿಹೋಗುವೆ. ನನ್ನ ಫಲವತ್ತತೆ ಕುಗ್ಗುವುದು. ಹೀಗೆ ಮಾಡುವುದು ಅವೈಜ್ಞಾನಿಕ. ಬೇರೆ ಸಸ್ಯಗಳನ್ನು ತೆಗೆಯಬೇಕಾದರೂ ಹುಲ್ಲನ್ನು ಮುಟ್ಟಬಾರದು ಎನ್ನುವ ಅರಿವು ಮೂಡಿಸುವವರ ಕೊರತೆಯೇ ಇದಕ್ಕೆ ಕಾರಣ. ಇನ್ನು ಮೇಲಾದರೂ ಇದರ ಬಗ್ಗೆ, ಅಂದರೆ ಹುಲ್ಲಿನ ಮಹತ್ವದ ಬಗ್ಗೆ ತಿಳುವಳಿಕೆ ನೀಡುವ ಕಸರತ್ತು ನಡೆಸಿ ನನ್ನನ್ನು ಬೋಳುಮಾಡುವ ಕೆಲಸ ನಿಲ್ಲಿಸಿದರೆ ಸಾರ್ಥಕವಾದೀತು. ನನ್ನ ಮೇಲೆ ಹುಲ್ಲು ಬೆಳೆದು ಹಚ್ಚ ಹಸಿರು 'ಕಾರ್ಪೆಟ್' ತರಹ ಕಾಣಿಸುವುದು ಯಾರಿಗೆ ತಾನೆ ಇಷ್ಟವಾಗುವುದಿಲ್ಲ? ಅಷ್ಟೇ ಅಲ್ಲ, ಹುಲ್ಲು ಮತ್ತು ನಾನು ಇಬ್ಬರೂ ಔಷಧಿಗೂ ಸಲ್ಲುವೆವು ಮತ್ತು ಪೂಜೆಗೂ ಸಲ್ಲುವೆವು. ಇದನ್ನೆಲ್ಲ ಅರಿತು ಎಲ್ಲರೂ ಕೂಡಿ



ಬಾಳುವ ಸಂಸ್ಕೃತಿ ಬೆಳೆಸಿದರೆ ಸರ್ವರಿಗೂ ಆನಂದ, ನನಗೂ ಆನಂದ ಮತ್ತು ಹುಲ್ಲಿಗೂ ಆನಂದ.

**ಸಾವಯವಾಂಶ**

ನನ್ನ ಇನ್ನೊಬ್ಬ ಆಪ್ತ ಸ್ನೇಹಿತ ಸಾವಯವಾಂಶ. ಅವನ ಇಂಗ್ಲಿಷ್ ಹೆಸರು 'ಹ್ಯೂಮಸ್'. ಅವನ ಮಹತ್ವ ತಿಳಿದವರು ಅಪರೂಪ. ಅವನ ಪಾತ್ರ ಅರಿಯದವರು ಅವನನ್ನು ಸರಿಯಾಗಿ ಗಮನಿಸದೆ ಅವನಿಂದ ಪಡೆಯಬಹುದಾದ ಲಾಭವನ್ನು ಕಳೆದುಕೊಂಡು ನಷ್ಟ ಅನುಭವಿಸುವರು. ಅವನನ್ನು ಉಳಿಸಿ ಬೆಳೆಸುವುದು ಬಹಳ ಸುಲಭ. ಅವನೊಡನೆ ಸದಾ ಸಾವಿರಾರು ಸೂಕ್ಷ್ಮ ಜೀವಿಗಳು ಗುಂಪಾಗಿ ಒಟ್ಟಿಗೇ ಬೆಳೆದು ನನಗೆ ಫಲವತ್ತತೆಯನ್ನು ನೀಡುವರು; ಅಂದರೆ ನನ್ನನ್ನು ಸಂಪದ್ಭರಿತನನ್ನಾಗಿ ಮಾಡುವರು.

**ನನ್ನ ಸಂತಾನ**

ನಾನು ಸಂತಾನ ಪ್ರಿಯೆ. ನನ್ನ ಸಂತಾನ ಎಣಿಸಲಾಗದಷ್ಟಿದೆಯಲ್ಲದೆ, ವಿಸ್ಮಯಕಾರಿ ಎಂದು ಹೇಳುವಷ್ಟು ವೈವಿಧ್ಯಮಯ. ಕಣ್ಣಿಗೆ ಕಾಣಿಸದ ಸೂಕ್ಷ್ಮಾಣು ಜೀವಿಗಳಿಂದ ಹಿಡಿದು, ವೈರಸ್... ಹೀಗೆ ಆನೆಯಂತಹ ಗಾತ್ರವುಳ್ಳ ಪ್ರಾಣಿಗಳವರೆಗೂ, ಕಣ್ಣಿಗೆ ಕಾಣಿಸುವ ಹಾಗೂ ಕಾಣಿಸದ ಜೀವಿಗಳೆಲ್ಲಾ ನನ್ನ ಸಂತಾನವೇ! ನನ್ನ ಸಂತಾನ ಸಮೂಹದಲ್ಲಿ ಅಪಾಯಕಾರಿ ಜೀವಿಗಳೂ ಇದ್ದಾರೆ! ಅವುಗಳ ಪೈಕಿ ಮನುಷ್ಯನೇ ಮೊದಲನೆಯವನು. ಆ ನಂತರ ಕೆಲವು ಸಸ್ಯಗಳು - ಲಾಂಟಾನ, ಪ್ರೋಸೋಫಿಸ್, ಯುಪಟೋರಿಯಂ, ಅಜರೇಟಂ ಮುಂತಾದವು ಸುಮಾರು ವರ್ಷಗಳಿಂದ ಇವೆ. ಸುಮಾರು ೫ ದಶಕಗಳ ಹಿಂದೆ ಲ್ಯಾಟಿನ್ ಅಮೆರಿಕಾದಿಂದ ನಮ್ಮ ನಾಡಿಗೆ ಕಾಲಿಟ್ಟ ಅತಿ ಹೆಚ್ಚು ಆಕ್ರಮಣಕಾರಿ ಹಾಗೂ ಅಪಾಯಕಾರಿ ಕಳೆ ಪಾರ್ಥೇನಿಯಂ. ಒಂದೇ ಸಸ್ಯದಿಂದ ೧೫,೦೦೦ದವರೆಗೂ ಬೀಜ ಉತ್ಪಾದಿಸಬಲ್ಲ



ಈ ಕಳೆ ತನ್ನ ರಸವನ್ನು ಮಣ್ಣಿಗೆ ಸೇರಿಸಿ ಇತರೆ ಯಾವುದೇ ಸಸ್ಯವೂ ಮೊಳೆತು ಬೆಳೆಯದಂತೆ ಮಾಡಿ ತನ್ನದೇ ಪ್ರಭುತ್ವವನ್ನು ಸಾಧಿಸುವುದಲ್ಲದೆ, ಜನರಿಗೆ, ಜಾನುವಾರುಗಳಿಗೆ ಅಲರ್ಜಿ ಉಂಟುಮಾಡಿ, ವಿವಿಧ ವ್ಯಾಧಿಗಳಿಗೆ ಮೂಲವಾಗಿ, ವಿನಾಶಕಾರಿ 'ಕಾಂಗ್ರೆಸ್ ಹುಲ್ಲು' ಎಂದೇ ಹೆಸರುವಾಸಿಯಾಗಿದೆ. ಈ ಖದೀಮನನ್ನು ಹತೋಟಿಯಲ್ಲಿಡಬೇಕೆಂದೇ ಕೆಲವು ಶತ್ರು ಸಸ್ಯಗಳು ನನ್ನ ಸಂತಾನದ ಸಾಲಿನಲ್ಲಿರುವುದು ಸಮಾಧಾನ ಉಂಟುಮಾಡಿದೆ. ಆದರೇನಂತೆ, ಇದನ್ನು ತಿಳಿಯುವ ಗೋಜಿಗೆ ಹೋಗದೆ ಮನುಷ್ಯ ಇಂತಹ ಸಸ್ಯ ಶತ್ರುಗಳನ್ನು ನಿರ್ದಾಕ್ಷಿಣ್ಯವಾಗಿ ಕಿತ್ತು ಬಿಸಾಡಿ ಪಾರ್ಥೇನಿಯಂ ಅಭಿವೃದ್ಧಿಗೆ ಅವಕಾಶ ಕಲ್ಪಿಸುತ್ತಾ ಇದ್ದಾನೆ. ನನ್ನ ಮಕ್ಕಳೆಲ್ಲರೂ ಚೆನ್ನಾಗಿ ಬಾಳಿ ಬದುಕಬೇಕೆಂಬುದೇ ನನ್ನ ಮಹದಾಸೆ, ಎಲ್ಲ ತಾಯಿಯರಂತೆ.

**ನನ್ನ ಆರೋಗ್ಯ**

ನಾನು ಜೀವಂತ ಎಂದಮೇಲೆ ಎಲ್ಲರಂತೆ ನನಗೂ ಆರೋಗ್ಯ ಕೆಡುವುದು ಸಹಜವಲ್ಲವೆ ? ಮನುಷ್ಯನ ದುರಾಸೆ ಹಾಗೂ ಅವೈಜ್ಞಾನಿಕ ಪದ್ಧತಿಗಳಿಂದಾಗಿ ಮನುಷ್ಯನ ಮಿತಿಮೀರಿದ ರಸವಸ್ತುಗಳ ಬಳಕೆಯಿಂದ ಪೋಷಕಾಂಶಗಳ ಸಾರ ಮತ್ತು ಕೊರತೆ ಎರಡೂ ನನ್ನನ್ನು ಕಾಡಿಸುವಷ್ಟು ಸನ್ನಿವೇಶಗಳು ಇತ್ತೀಚೆಗಷ್ಟೇ ಸೃಷ್ಟಿಯಾಗಿರುವುದು ನನಗೆ ಆತಂಕ ಉಂಟುಮಾಡಿದೆ. ಇದೀಗ ಅಲ್ಲಲ್ಲಿ ನನ್ನ ಸ್ಥಿತಿಯನ್ನು ಅರಿತು ನನ್ನನ್ನು ಪರೀಕ್ಷಿಸುವ ಪದ್ಧತಿ ಅನುಕರಣೆಯಾಗುತ್ತಿರುವುದು ನನಗೆ ಸಂತಸ ಉಂಟುಮಾಡಿದೆ. ನನ್ನನ್ನು ಪ್ರಯೋಗಾಲಯಗಳಲ್ಲಿ ಪರೀಕ್ಷೆಗೊಳಪಡಿಸಿ, ನನ್ನಲ್ಲಿರುವ ಕೊರತೆ, ದೋಷ ಮುಂತಾದುವುಗಳನ್ನರಿತು ಪೋಷಿಸಲಾಗುತ್ತಿರುವುದು ಸಮಾಧಾನ ತಂದಿದೆ. ಸದ್ಯಕ್ಕೆ ಅಂತಹವರ ಸಂಖ್ಯೆ ಬೆರಳೆಣಿಸುವಷ್ಟು. ನನ್ನ ಆರೋಗ್ಯ ಸುಧಾರಣೆಗೆ ೧೬ ಪೋಷಕಾಂಶಗಳು ಅವಶ್ಯಕ. ನನ್ನ ವಿವಿಧ ಸಂತಾನಗಳಿಗೆ ಬೇಕಾಗಿರುವ ಪ್ರಮಾಣ ಬೇರೆ ಬೇರೆಯಾದ್ದರಿಂದ ಪೋಷಕಾಂಶಗಳನ್ನು ವೈಜ್ಞಾನಿಕವಾಗಿ ಪೂರೈಸುವುದು ಬಹಳ ಮುಖ್ಯ. ನನ್ನ ಆತ್ಮ ಸ್ನೇಹಿತ ಸಾವಯವಾಂಶದ ಮಹತ್ವದ ಬಗ್ಗೆ ಈಗಾಗಲೇ ಪರಿಚಯಿಸಿದ್ದೇನೆ. ನನ್ನಲ್ಲಿರುವ ಕೊರತೆಯನ್ನು ನನ್ನ ಸಂತಾನಗಳ ಮೈಬಣ್ಣ ಮತ್ತು ಬೆಳವಣಿಗೆಯ ವೇಗದಿಂದ ಸುಲಭವಾಗಿ ಗುರುತಿಸಬಹುದು. ನನ್ನ ಆರೋಗ್ಯದ ಕಡೆ ಗಮನವಿಟ್ಟು ನನ್ನನ್ನು ಸದೃಢವಾಗಿರುವಂತೆ ನೋಡಿಕೊಂಡವರಿಗೆ ನಾನು ತೃಪ್ತಿಕರವಾದ ಇಳುವರಿ ಪಡೆದು ಲಾಭದಾಯಕ ಫಸಲು ತೆಗೆಯಲು ನೆರವಾಗುತ್ತೇನೆ. ನನ್ನ ಖಾಯಿಲೆಯನ್ನು ತಿಳಿಯಬಲ್ಲ ಪ್ರಯೋಗಾಲಯಗಳು ಕೃಷಿ ವಿಜ್ಞಾನ ಕೇಂದ್ರಗಳ, ಕೃಷಿ ವಿಶ್ವದ್ಯಾಲಯಗಳ ಹಾಗೂ ಸರ್ಕಾರಿ ಕೃಷಿ ಇಲಾಖೆಗಳ ಆಶ್ರಯದಲ್ಲಿರುವುದನ್ನು ಗಮನಿಸಿ ನನ್ನನ್ನು ಪೋಷಿಸಲಿಚ್ಛಿಸುವವರು ನನ್ನ ಯೋಗಕ್ಷೇಮ ನೋಡಿಕೊಂಡರೆ ಹಾಗೂ ಪ್ರಸಾರ ಮಾಧ್ಯಮದವರು ನನ್ನ ಕಡೆ ಇನ್ನಷ್ಟು ಗಮನ ಹರಿಸಿ ಸಹಕರಿಸಿದರೆ ನಾನೇ ಧನ್ಯಳು.

**ನನ್ನದೊಂದು ಕೋರಿಕೆ**

ಬಹುಶಃ ನನ್ನ ಈ ಕೋರಿಕೆಯನ್ನು ನೀವು ಊಹಿಸಲಾರಿರಿ. ನನ್ನ ಬಗ್ಗೆ ತಿಳಿಯ ಬಯಸುವವರಿಗೆ ಸರಿಯಾದ ಪುಸ್ತಕಗಳಿಲ್ಲ. ಪ್ರಸಾರ ಮಾಧ್ಯಮಗಳು ನನ್ನನ್ನು ನಿರ್ಲಕ್ಷಿಸಿವೆ. ಮಕ್ಕಳೇ ಆಗಲಿ, ಯಾವ ವಯಸ್ಸಿನವರೇ ಆಗಲಿ, ಸಿನಿಮಾ ನಟನಟಿಯರ ಬಗ್ಗೆ, ಕ್ರಿಕೆಟ್ ಪಟುಗಳ ಬಗ್ಗೆ ತಿಳಿದುಕೊಂಡಿರುವಷ್ಟು ನನ್ನ ಬಗ್ಗೆ ತಿಳಿದುಕೊಂಡಿಲ್ಲ. ನಮ್ಮ ನಾಡಿನ ಪಠ್ಯಪುಸ್ತಕಗಳಲ್ಲಂತೂ ನಾನು ಕಾಣಿಸುವುದೇ ಅಪರೂಪ. ಇದು ನನ್ನ ಸ್ನೇಹಿತರಾದ ಪರಿಸರ ಮತ್ತು ಸಂತಾನದ ಬಗ್ಗೆಯೂ ಅಷ್ಟಾಗಿ ತಿಳುವಳಿಕೆ ನೀಡದ ನಮ್ಮ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳ ಪುಸ್ತಕ ಮತ್ತು ಪಠ್ಯ ಕ್ರಮಗಳ ವೈಫಲ್ಯತೆ ಎಂದು ಹೇಳಿದರೆ ತಪ್ಪಾಗಲಾರದು. ಅದಕ್ಕಾಗಿ ಸಾಕಷ್ಟು ಗಮನ ನೀಡದಿರುವ ಸರ್ಕಾರದ ಮೇಲೆ ನನಗೆ ತೀವ್ರ ಅತೃಪ್ತಿ ಮತ್ತು ಬೇಜಾರಿದೆ.

**ಡಾ|| ಎಮ್. ಮಹದೇವಪ್ಪ**
ನಂ. ೧೫೭೬, ೧ನೇ ಅಡ್ಡರಸ್ತೆ, ಚಂದ್ರಾ ಲೇಔಟ್
ಬೆಂಗಳೂರು - ೫೬೦ ೦೪೦




ನವಕರ್ನಾಟಕ ಮತ್ತು ಮಾ-ಲೆ ಪ್ರಕಾಶನದ ಸಹಯೋಗದಲ್ಲಿ ಭಾನುವಾರ ದಿನಾಂಕ ೧೩-೧೧-೨೦೧೧ರಂದು 'ಲೋಕಾಯತ' ಮತ್ತು 'ಚಿಂತಕರು ಮತ್ತು ಖಜಾಂಚಿಗಳು' ಕೃತಿಗಳ ಲೋಕಾರ್ಪಣೆ ಮತ್ತು ಡಾ|| ದೇವಿಪ್ರಸಾದ್ ಚಟ್ಟೋಪಾಧ್ಯಾಯ ಸ್ಮಾರಕ ಉಪನ್ಯಾಸ ಸಮಾರಂಭ ನಡೆಯಿತು. ಪ್ರೊ|| ಬರಗೂರು ರಾಮಚಂದ್ರಪ್ಪ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಪ್ರೊ|| ರೊದ್ದಂ ನರಸಿಂಹ ಕೃತಿಗಳ ಅನಾವರಣ ಮಾಡಿದರು. 'ದೇವಿಪ್ರಸಾದರ ಸಂಶೋಧನೆ-ವೈಚಾರಿಕತೆ-ಪ್ರಸ್ತುತತೆ ' ಕುರಿತು ಪ್ರೊ|| ಬಿ. ವಿ. ವೀರಭದ್ರಪ್ಪನವರು ಮತ್ತು 'ಲೋಕಾಯತ'ದಲ್ಲಿ ಕೃಷಿ ಸಂಬಂಧಿ ಆಚರಣೆಗಳು, ತಾಯಿ-ಹಕ್ಕು, ಮಹಿಳೆಯರ ಸ್ಥಾನಮಾನ – ಕುರಿತು ಪ್ರೊ|| ಶೈಲಜಾ ಉಪನ್ಯಾಸ ನೀಡಿದರು.

ಚಿತ್ರದಲ್ಲಿ (ಎಡದಿಂದ ಬಲಕ್ಕೆ) -- ಶ್ರೀ ಆರ್. ಎಸ್. ರಾಜಾರಾಮ್, ಪ್ರೊ|| ಬಿ. ವಿ. ವೀರಭದ್ರಪ್ಪ, ಪ್ರೊ|| ರೊದ್ದಂ ನರಸಿಂಹ, ಪ್ರೊ|| ಬರಗೂರು ರಾಮಚಂದ್ರಪ್ಪ, ಪ್ರೊ|| ಶೈಲಜಾ, ಕೃತಿಗಳ ಅನುವಾದಕರಾದ ಪ್ರೊ|| ಎಚ್. ಕೆ. ರಾಮಚಂದ್ರಮೂರ್ತಿ ಮತ್ತು ಡಾ|| ಜಿ. ರಾಮಕೃಷ್ಣ



# ನಮನ

## ಬಿ. ಟಿ. ಪಾರ್ಥಸಾರಥಿ (೧೯೨೫-೨೦೧೧)

**ಸು**ಪ್ರಸಿದ್ಧ ವಕೀಲರು, ಅಧ್ಯಾಪಕರು, ಕರ್ನಾಟಕ ಸರ್ಕಾರದ ಅಟಾರ್ನಿ ಜನರಲ್ ಆಗಿದ್ದ ಬಿ. ಟಿ. ಪಾರ್ಥಸಾರಥಿಯವರು ಅಕ್ಟೋಬರ್ ೧೬, ೨೦೧೧ರಂದು ಕಣ್ಮರೆಯಾದುದು ಅತೀವ ದುಃಖದ ಸಂಗತಿ. ಶ್ರೀಯುತರು ಶ್ರೀಮಂತ ಮನೆತನದ ಹಿನ್ನೆಲೆಯಿಂದ ಬಂದಿದ್ದರೂ ಹಿರಿಯ-ಕಿರಿಯರೆನ್ನದೆ ಎಲ್ಲರೊಡನೆ ಸದಾ ನಗುಮುಖದೊಂದಿಗೆ ಬೆರೆಯುತ್ತಿದ್ದ ವಿನಯಶೀಲರು.

ತಮ್ಮ ಯೌವನದ ದಿನಗಳಿಂದಲೂ ವಿವಿಧ ಪ್ರಗತಿಪರ ಸಂಘಟನೆಗಳು, ವಿದ್ಯಾರ್ಥಿ-ಯುವಜನ ಸಭಾ ಮುಂತಾದ ಸಂಘಟನೆಗಳು ಸಂಘಟಿಸುತ್ತಿದ್ದ ಕಾರ್ಯಕ್ರಮಗಳಲ್ಲಿ ಅತ್ಯುತ್ಸಾಹದಿಂದ ಭಾಗವಹಿಸುತ್ತಿದ್ದರು. ಅವರ ಅದಮ್ಯ ಕ್ರಿಯಾಶೀಲತೆ ಮತ್ತು ಬದ್ಧತೆಯನ್ನು ನಮ್ಮೊಡನಿರುವ ಹಲವು ಹಿರಿಯ ಕಾರ್ಯಕರ್ತರು ಇಂದಿಗೂ ಹೆಮ್ಮೆಯಿಂದ ನೆನೆಯುತ್ತಾರೆ.

೧೯೫೨ರಲ್ಲಿ ಜರುಗಿದ ಪ್ರಥಮ ಲೋಕಸಭಾ ಚುನಾವಣೆಯಲ್ಲಿ ಪ್ರಧಾನ ವಿರೋಧ ಪಕ್ಷವಾಗಿ ಭಾರತ ಕಮ್ಯೂನಿಸ್ಟ್ ಪಕ್ಷ ಗೆದ್ದುಬಂದಿತ್ತು. ಲೋಕಸಭೆಯಲ್ಲಿ ವಿರೋಧ ಪಕ್ಷದ ನಾಯಕರಾಗಿ ಎ. ಕೆ. ಗೋಪಾಲನ್ ಆಯ್ಕೆಯಾಗಿದ್ದರು. ಎ. ಕೆ. ಗೋಪಾಲನ್ ಅವರನ್ನು ಅಭಿನಂದಿಸುವ ಸಲುವಾಗಿ ಬೆಂಗಳೂರಿನ ಚಿಕ್ಕಲಾಲ್‌ಬಾಗ್‌ನಲ್ಲಿ ಬಹಿರಂಗ ಸಭೆ. ಅಂದಿನ ಕಾರ್ಯಕಲಾಪಗಳಲ್ಲಿ ಬಿ. ಟಿ. ಪಿ. ಅವರದು ಪ್ರಮುಖ ಪಾತ್ರ. ಅಂತೆಯೇ ೧೯೫೩ರಲ್ಲಿ ಬ್ರಿಟಿಷ್ ವಸಾಹತುಶಾಹಿಗಳ ವಿರುದ್ಧ ನಿರಂತರ ಸ್ವಾತಂತ್ರ್ಯ ಸಮರ ಹೂಡಿದ್ದ ಬ್ರಿಟಿಷ್ ಗಯಾನಾದ ಅಪ್ರತಿಮ ಹೋರಾಟಗಾರ ಚೆಡ್ಡಿ ಜಗನ್ ಬೆಂಗಳೂರಿಗೆ ಭೇಟಿ ನೀಡಿದ ಸಂದರ್ಭದಲ್ಲಿ ಆತನಿಗೆ ಅದ್ದೂರಿಯ ಸ್ವಾಗತ ಕೋರಲು ವಿಶೇಷ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಅದಕ್ಕಾಗಿಯೇ ರಚಿಸಲಾಗಿದ್ದ ಸ್ವಾಗತ ಸಮಿತಿಯು ಚಿಕ್ಕಲಾಲ್‌ಬಾಗಿನಲ್ಲಿ ಏರ್ಪಡಿಸಿದ್ದ ಸಭೆಯಲ್ಲಿ ಪಾರ್ಥಸಾರಥಿಯವರು ಮಾಡಿದ ಭಾಷಣ ಅಮೋಘವಾಗಿತ್ತು, ಸ್ಫೂರ್ತಿದಾಯಕವಾಗಿತ್ತು.

೧೯೫೭-೫೮ರ ಸುಮಾರಿಗೆ ಅಖಿಲಭಾರತ ಶಾಂತಿ ಮತ್ತು ಸೌಹಾರ್ದತಾ ಸಂಘಟನೆಯ ಸಭೆ ನಗರದ ಪುರಭವನದಲ್ಲಿ ಜರುಗಿತ್ತು. ಅದು ಸಂಘಟನೆಯ ಅಧ್ಯಕ್ಷರಾಗಿದ್ದ ಸುಂದರಲಾಲ್ ಬಹುಗುಣ ಅವರು ಬೆಂಗಳೂರಿಗೆ ಭೇಟಿ ನೀಡಿದ ಸಂದರ್ಭವೂ ಹೌದು. ಅಂದಿನ ಸಭೆಯ ಸಿದ್ಧತೆಯ ಎಲ್ಲ ಹಂತಗಳಲ್ಲಿಯೂ ಸಂಪೂರ್ಣವಾಗಿ ತೊಡಗಿಕೊಂಡಿದ್ದವರು ನಮ್ಮ ನೆಚ್ಚಿನ ಬಿ. ಟಿ. ಪಿ. ಅವರು. ಹೀಗೆ ಪ್ರಾರಂಭವಾದ ಶಾಂತಿ ಚಳುವಳಿಯೊಂದಿಗಿನ ಅವರ ಒಡನಾಟ ನಂತರದ ದಿನಗಳಲ್ಲಿ ಭಾರತ-ಸೋವಿಯತ್ ಸಾಂಸ್ಕೃತಿಕ ಸಂಘದ ಚಳುವಳಿಯಲ್ಲೂ ಪ್ರಮುಖ ಪಾತ್ರ ವಹಿಸುವಂತೆ ಪ್ರೇರೇಪಿಸಿದ್ದರಲ್ಲಿ ಆಶ್ಚರ್ಯವೇನಿಲ್ಲ. ಅಂತೆಯೇ ಭಾರತ ಜಿ.ಡಿ.ಆರ್. ಸಂಘಟನೆಯಲ್ಲೂ ಸಹ. ಅಂದಿನ ದಿನಗಳಲ್ಲಿ ಪಾರ್ಥಸಾರಥಿಯವರ ಜೊತೆಜೊತೆಗೆ ಎಲ್ಲ ಚಳುವಳಿಗಳಲ್ಲೂ ಅತೀವ ಬದ್ಧತೆಯಿಂದ ಸಕ್ರಿಯರಾಗಿ ಕೆಲಸ ಮಾಡಿದವರು ಖ್ಯಾತ ವಕೀಲ ಶ್ರೀ ಬಿ. ಎಲ್. ರಾಮನಾಥನ್.

ಸುಮಾರು ೧೯೬೮-೬೯ರ ಅವಧಿಯಲ್ಲಿ ಅಂತರರಾಷ್ಟ್ರೀಯ ಯುವಜನ ಮೇಳದ ಅಂಗವಾಗಿ ಬೆಂಗಳೂರಿನಲ್ಲಿ ವಿದ್ಯಾರ್ಥಿ ಯುವಜನ ಸಭಾ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಏರ್ಪಡಿಸಿದ್ದ ಜನತಾ ನ್ಯಾಯಾಲಯ (ಪೀಪಲ್ಸ್ ಕೋರ್ಟ್) ಎಂಬ ವಿನೂತನ ಕಾರ್ಯಕ್ರಮ ವಿಶಿಷ್ಟವಾಗಿತ್ತು. ನ್ಯಾಯಾಲಯದಲ್ಲಿ ವಿಚಾರಣೆ ಜರುಗಿ ಅಮೆರಿಕಾದ ಅಂದಿನ ಅಧ್ಯಕ್ಷನಾಗಿದ್ದ ಲಿಂಡನ್ ಜಾನ್ಸನ್‌ಗೆ ಮರಣದಂಡನೆ ವಿಧಿಸಬೇಕೆಂದು ತೀರ್ಮಾನಿಸಲಾಗಿತ್ತು. ಈ ನ್ಯಾಯಾಲಯದ ಕಾರ್ಯಕಲಾಪಗಳಲ್ಲಿ ಭಾಗಿಯಾಗಿದ್ದವರು ಎ. ಟಿ. ಶಾಮಾಚಾರ್, ಬಿ.ಟಿ.ಪಿ ಮತ್ತು ರಾಮನಾಥನ್ ಅವರು. ದಕ್ಷಿಣ ಆಫ್ರಿಕಾದ ವರ್ಣಭೇದ ನೀತಿ ವಿರುದ್ಧದ ಹೋರಾಟವಾಗಲಿ, ವಿಯತ್ನಾಂ ವಿಮೋಚನೆಗಾಗಿ ಬೆಂಬಲ ಸೂಚಿಸುವ ಹಲವಾರು ಪ್ರಚಾರ ಸಭೆಗಳಾಗಲಿ, ಪಾಲೆಸ್ತೈನ್ ವಿಮೋಚನಾ ಹೋರಾಟಕ್ಕೆ ಯಶಸ್ಸು ಕೋರುವ ಪ್ರತಿಭಟನಾ ಕಾರ್ಯಕ್ರಮಗಳಾಗಲಿ, ಇವೆಲ್ಲದರಲ್ಲೂ ಪಾರ್ಥಸಾರಥಿಯವರು ಸದಾ ಮುಂಚೂಣಿಯಲ್ಲಿರುತ್ತಿದ್ದರು.

೧೯೮೨ರಲ್ಲಿ ಅಖಿಲ ಭಾರತ ಶಾಂತಿ ಸಂಘಟನೆಯ ಆಶ್ರಯದಲ್ಲಿ ಬೆಂಗಳೂರಿನಲ್ಲಿ ಜರುಗಿದ ಅಖಿಲಭಾರತ ವಕೀಲರ ಸಮ್ಮೇಳನದ ಯಶಸ್ಸಿಗೆ ಪಾರ್ಥಸಾರಥಿ ಮತ್ತು ರಾಮನಾಥನ್ ಅವರ ಕೊಡುಗೆ ಅವಿಸ್ಮರಣೀಯ. ಅಂತೆಯೇ ೧೯೮೬ರಲ್ಲಿ ಬೆಂಗಳೂರಿನ ಚೌಡಯ್ಯ ಸಭಾಂಗಣದಲ್ಲಿ ಜರುಗಿದ ಅಖಿಲ ಭಾರತ ಶಾಂತಿ ಮತ್ತು ಸೌಹಾರ್ದತಾ ಸಂಘಟನೆಯ ಸಮ್ಮೇಳನದ ಎಲ್ಲ ಸಿದ್ಧತಾ ಕಾರ್ಯಕ್ರಮಗಳಲ್ಲೂ ಈ ಇಬ್ಬರು ಸಹೃದಯರು ವಹಿಸಿದ ಪಾತ್ರವನ್ನು ಮರೆಯಲಾಗದು.

ಪಾರ್ಥಸಾರಥಿಯವರು ಮಹಾತ್ಮಗಾಂಧಿ-ಜವಾಹರಲಾಲ್ ನೆಹರು ಅವರ ವಿಚಾರಧಾರೆಗಳಿಂದಲ್ಲದೆ 'ಕಮ್ಯೂನಿಸಂ' ಎಂಬ ಕೃತಿಯ ಲೇಖಕರಾದ ಅವರ ಭಾವ ದಿ॥ ಎಲ್. ಶ್ರೀಕಂಠಯ್ಯನವರ ಚಿಂತನೆಗಳಿಂದ ಪ್ರಭಾವಿತರಾಗಿದ್ದಿರಬೇಕು. ದಿ॥ ಎಲ್. ಶ್ರೀಕಂಠಯ್ಯನವರು ಹೆಸರಾಂತ ವಕೀಲರು, ಪ್ರಗತಿಪರ ಚಿಂತಕರು.

ಶ್ರೀಯುತರು ಇಸ್ಕಸ್ ಮತ್ತು ಶಾಂತಿ ಸಂಘಟನೆಯ ವತಿಯಿಂದ ಕರ್ನಾಟಕದ ನಿಯೋಗದ ಸದಸ್ಯರಾಗಿ ಮಾಸ್ಕೋ, ವಿಯತ್ನಾಂಗಳಿಗೆ ಮತ್ತು ಕಾಂಬೋಡಿಯ ವಿಮೋಚನೆಗೊಂಡ ಪ್ರಾರಂಭದ ದಿನಗಳಲ್ಲಿ ಆ ದೇಶಕ್ಕೆ ಭೇಟಿ ನೀಡಿದ್ದರು. ವಿಶೇಷವಾಗಿ, ಕಾಂಬೋಡಿಯದಿಂದ ಹಿಂತಿರುಗಿದ ನಂತರ ಜರುಗಿದ ಸಭೆಯೊಂದರಲ್ಲಿ ಅವರು ತಮ್ಮ ಅನುಭವಗಳನ್ನು ಸವಿವರವಾಗಿ ಹಂಚಿಕೊಳ್ಳುವ ಮೂಲಕ ಅದ್ಭುತ ಭಾಷಣ ಮಾಡಿದುದು ಇಂದಿಗೂ ಮನಸ್ಸಿನಲ್ಲಿ ಹಸುರಾಗಿದೆ.

ಗಾಂಧಿನಗರದ ಇಸ್ಕಸ್ ಕಛೇರಿಯಲ್ಲಿ ಜರುಗುತ್ತಿದ್ದ ಇಸ್ಕಸ್ ಮತ್ತು ಶಾಂತಿ ಸಂಘಟನೆಯ ಸಮಿತಿಗಳ ಸಭೆಯಾಗಲಿ, ಸಮ್ಮೇಳನ-ಸಮಾವೇಶಗಳಾಗಲಿ, ಬಿ. ಟಿ. ಪಿ. ಅವರು ಪೂರ್ವಸಿದ್ಧತೆಯೊಂದಿಗೆ ವಿಚಾರಮಂಡನೆ ಮಾಡುತ್ತಿದ್ದುದು ಅವರ ವಿಶೇಷತೆ. ೧೯೮೮ರಲ್ಲಿ ಪದವೀಧರ ಕ್ಷೇತ್ರದಿಂದ ವಿಧಾನಪರಿಷತ್ ಸದಸ್ಯತ್ವಕ್ಕಾಗಿ ಜರುಗಿದ ಚುನಾವಣೆಯಲ್ಲಿ ಸ್ಪರ್ಧಿಸಿದ್ದು, ಇಸ್ಕಸ್ ಮತ್ತು ಶಾಂತಿ ಸಂಘಟನೆಯ ಬಳಗದವರೆಲ್ಲರೂ ಎಲ್ಲೆಡೆ ಹುಮ್ಮಸ್ಸಿನಿಂದ ಬಿರುಸಿನ ಪ್ರಚಾರ ಕೈಗೊಂಡದ್ದು ಈಗಲೂ ನೆನಪಿದೆ. ಅವರ ಇಸ್ಕಸ್ ಮತ್ತು ಶಾಂತಿ ಸಂಘಟನೆಯೊಂದಿಗಿನ ಸುದೀರ್ಘ ಒಡನಾಟದ ಇನ್ನೊಂದು ವಿಶೇಷತೆಯೆಂದರೆ ಪ್ರತಿಯೊಂದು ಸಭೆಗೂ ಬಿ.ಟಿ.ಪಿ. ಅವರೊಂದಿಗೆ ಅವರ ಪತ್ನಿ ಶ್ರೀಮತಿ ಸುಮಿತ್ರ ಪಾರ್ಥಸಾರಥಿಯವರು ತಪ್ಪದೇ ಹಾಜರಿರುತ್ತಿದ್ದರು. ಸುಮಿತ್ರ ಅವರು ನಮ್ಮ ಆತ್ಮೀಯ ಬಳಗದವರಲ್ಲಿ ಒಬ್ಬರಾಗಿದ್ದರು.

ನಮ್ಮೆಲ್ಲ ಸಂಘಟನೆಗಳ, ಚಳುವಳಿಗಳ ಸದಸ್ಯರ ಮನದಲ್ಲಿ ಬಿ.ಟಿ.ಪಾರ್ಥಸಾರಥಿಯವರ ನೆನಪು ಸದಾ ಕಾಲ ಉಳಿಯಲಿದೆ.

ತುಂಬು ಜೀವನ ನಡೆಸಿ ನಮ್ಮನ್ನಗಲಿರುವ ಸನ್ಮಿತ್ರ ಬಿ. ಟಿ. ಪಾರ್ಥಸಾರಥಿ ಅವರಿಗೆ 'ಹೊಸತು'ವಿನ ನಮನಗಳು.

ಎಸ್. ಸುರೇಂದ್ರ

# ನುಗಡೋಣಿ ಅವರ ಕತೆಗಳು

— ಡಾ|| ಎಸ್. ಪ್ರಸಾದಸ್ವಾಮಿ —

ಅಮರೇಶ ನುಗಡೋಣಿ ಕನ್ನಡದ ವೈಶಿಷ್ಟ್ಯಪೂರ್ಣ ಕತೆಗಾರ. ಈ ವೈಶಿಷ್ಟ್ಯತೆಗೆ ಅವರ ಪ್ರಾದೇಶಿಕ ಭಿನ್ನತೆ, ಭಾಷಿಕ ಪರಿಕರ, ಪ್ರಕಾರನಿಷ್ಠೆ, ಧನಾತ್ಮಕ ಮನೋಧರ್ಮ ಮತ್ತು ಬದುಕನ್ನು ಕುರಿತ ಬದ್ಧತೆಗಳು ಕಾರಣವಾಗಿವೆ. ಕನ್ನಡದಲ್ಲಿ ಸಣ್ಣಕತೆಯನ್ನು ಅದರ ಎಲ್ಲ ನೆಲೆಗಳ ಸಾಧ್ಯತೆಯನ್ನು ಶೋಧಿಸಿ, ಅನ್ವಯಿಸಿ, ರೂಪಿಸಿಕೊಂಡವರು ನುಗಡೋಣಿ. ಮಾಸ್ತಿ ಸಣ್ಣಕತೆಗೆ ಸ್ವರೂಪವೊಂದನ್ನು ಕಲ್ಪಿಸಿದರು. ನವ್ಯಕತೆಗಾರರು ಈ ಪ್ರಕಾರವನ್ನು ಅದರ ಗರಿಷ್ಠ ಪ್ರಮಾಣದ ಕಲಾತ್ಮಕ ಯಶಸ್ಸಿನತ್ತ ಮುನ್ನಡೆಸಿದರು. ದೇವನೂರು 'ತಮ್ಮತನ'ದಲ್ಲಿ ಇದಕ್ಕೆ ಇನ್ನೊಂದು ಆಯಾಮ ಕಲ್ಪಿಸಿದರು. ಅನಂತಮೂರ್ತಿ ತಮ್ಮ ಕತೆಗಳ 'ರಾಚನಿಕ' ಸ್ವರೂಪದಿಂದ ಅತ್ಯುತ್ತಮ ಕತೆಗಾರರೆನಿಸಿದರೆ, ಲಂಕೇಶರು ಈ ಪ್ರಕಾರ ಧ್ವನಿಸಬಹುದಾದ ಶೋಧನೆ, ವಿಶ್ಲೇಷಣೆ, ವ್ಯಂಗ್ಯ, ಆತ್ಮ ನಿರೀಕ್ಷೆ, ಸಮುದಾಯ ನಿಷ್ಠತೆ, ವ್ಯಕ್ತಿತ್ವ ಅನ್ವೇಷಣೆಯ ಸಾಧ್ಯತೆಗಳನ್ನು ಗಮನಾರ್ಹವಾಗಿ ಸೆರೆಹಿಡಿದವರು. ನುಗಡೋಣಿ ಗ್ರಾಮೀಣ ಮತ್ತು ಸಾಂಸ್ಕೃತಿಕ ಆಯಾಮವನ್ನು ಈ ಪ್ರಕಾರಕ್ಕೆ ಜೋಡಿಸಿದ್ದಾರೆ.

ಹೀಗೆ ಅತ್ಯುತ್ತಮ ಕತೆ, ಕತೆಗಾರರ ಪರಂಪರೆಯನ್ನು ಸಮರ್ಥವಾಗಿ ಮುಂದುವರಿಸಿದ ಸಾಧನೆ, ಯಶಸ್ಸು ನುಗಡೋಣಿಯವರದು. 'ಕೊಡುವುದು - ಪಡೆವುದು' ಒಂದು ಸಾಮುದಾಯಿಕ ಅಗತ್ಯವಾಗಿ ನುಗಡೋಣಿಯವರನ್ನು ಕಾಡಿದೆ. ಕಾರಂತರು ಆರಂಭಿಸಿದ ಈ ಪ್ರಕ್ರಿಯೆಯನ್ನು ಅದರ ಎಲ್ಲ ಸಾಮಾಜಿಕ ನೆಲೆಗಳಲ್ಲಿ ಪರಿಶೋಧಿಸಿದವರು ನುಗಡೋಣಿ.

ಕತೆಯೊಳಗಿನ 'ಉಪಕತೆ', ಅದು ಮುಖ್ಯ ಕತೆಯೊಂದಿಗೆ ಹೊಂದಿರುವ ಅವಿನಾ ಸಂಬಂಧ, ಎರಕಹೊಯ್ದ ಬಂಧ, ನಿರುದ್ವಿಗ್ನ ನಿರೂಪಣೆಗಳು ಇವರ ಕತೆಗಳ ಮುಖ್ಯ ಲಕ್ಷಣ. ಮಾಸ್ತಿ, ಲಂಕೇಶರಂತೆಯೇ 'ಕತೆ ಕಟ್ಟುವ' ಕುಸುರಿತನ ಇವರಿಗೆ ಸಿದ್ಧಿಸಿದೆ. ಈ ಪ್ರಕಾರವನ್ನು ಸಮುದಾಯದ ಶೋಧನೆಗೆ, ಅರ್ಥೈಸುವಿಕೆಗೆ, ಸಂಸ್ಕೃತಿ ನಿರ್ವಚನಕ್ಕೆ ಬಳಸಿಕೊಂಡ ಹೆಗ್ಗಳಿಕೆ ನುಗಡೋಣಿಯವರದು. ಹೈದರಾಬಾದ್ ಕರ್ನಾಟಕದ ಜೀವನ ವಿಧಾನ, ಸರಳ ಕನ್ನಡ, ಧಾರಾಳವಾಗಿ ಬೆರೆತು ಧ್ವನಿ ಉಕ್ಕಿಸುವ ಉರ್ದು, ಹಿಂದಿ ಪದಗಳು, ಸ್ವಂತಿಕೆ ಹಾಗೂ ಜೀವಂತಿಕೆ ಉಳ್ಳ ಪಾತ್ರಗಳು, ಜೀವನ ಪ್ರೇಮ, ಸಹಬಾಳ್ವೆ, ಹಳ್ಳಿ ಬದುಕು ಇವರ ಕತೆಗಳ ಭಿತ್ತಿ; ಸತ್ವ. ನಿಷ್ಠೆ ಎಂಬಂತೆ, ವ್ರತವೆಂಬಂತೆ 'ಕತೆ ಕಟ್ಟುವ' ನುಗಡೋಣಿ ಹನ್ನೆರಡನೇ ಶತಮಾನದ 'ಕನಸಿನ ವಾಸ್ತವ'ಗಳನ್ನು ತಮ್ಮ ಒಟ್ಟೂ ಬರೆಹದ ತಾತ್ವಿಕತೆಯನ್ನಾಗಿ ಮಾಡಿಕೊಂಡಿದ್ದಾರೆ. ಅವರ ಈವರೆಗಿನ ಮಣ್ಣು ಸೇರಿತು ಬೀಜ, ತಮಂಧದ ಕೇಡು, ಮುಸ್ಸಂಜೆಯ ಕಥಾನಕಗಳು, ಸವಾರಿ ಕಥಾ ಸಂಕಲನದ ಕತೆಗಳು ಸವೆಸಿದ ದಾರಿ ಒಂದು ಸೋಜಿಗದ ಪಯಣವೇ ಆಗಿದೆ.



ಆರಂಭದ ಕತೆಗಳಲ್ಲಿ ಮನುಷ್ಯ ಮತ್ತು ಕಾಮಕೇಂದ್ರಿತ ಬದುಕಿನ ಚಿತ್ರಣಕ್ಕೆ ಬದ್ಧರಾದಂತಿರುವ ನುಗಡೋಣಿ ತಮಂಧದ ಕೇಡುವಿನಲ್ಲಿ ತಮ್ಮ ತಾತ್ವಿಕತೆಯನ್ನು ಮರುರೂಪಿಸಿಕೊಂಡಿರುವುದು ಎದ್ದು ಕಾಣುತ್ತದೆ. ಜಾತಿ-ಸಹಬಾಳ್ವೆ-ಬದುಕು ಇಲ್ಲಿ ನಿರ್ವಚನಕ್ಕೆ ಒಳಗಾಗಿವೆ. ವಚನ ಕಾಲದ ಪ್ರಯತ್ನಗಳ ಮರುಹುಟ್ಟು ಆಶಯಗಳಾಗಿ ಕಾಣಿಸಿಕೊಳ್ಳುತ್ತವೆ. ಉಳ್ಳವರು ತಾವು ಬಹು ಹಿಂದೆ ಕಿತ್ತುಕೊಂಡದ್ದನ್ನು ಇಂದು ಕೊಡಲು ಸಿದ್ಧಗೊಂಡ ಹಂತವನ್ನೂ ನುಗಡೋಣಿ ಕನಸಿದ್ದಾರೆ. ಇಂತಲ್ಲಿ ಕೊಡುವವರು ಸಿದ್ಧರಾದರೂ, ಸಿದ್ಧರಿದ್ದರೂ, ಪಡೆವವರು 'ದ್ವಂದ್ವ'ದಲ್ಲಿರುವುದನ್ನು, ಆ ದ್ವಂದ್ವಕ್ಕಿರುವ ಆಯಾಮವನ್ನು ಅವರು ಒರೆಗೆ ಹಚ್ಚುತ್ತಾರೆ. ಸಮಾಜ ದಲಿತರಲ್ಲಿಗೆ ಸಾಗಬೇಕೆಂದು ಆಶಿಸುತ್ತಾರೆ. ದಲಿತರು ಸಮಾಜವನ್ನು ಅರ್ಥಮಾಡಿಕೊಳ್ಳುವಂತೆ, ಒಂದಾಗುವಂತೆ ಬಯಸುತ್ತಾರೆ. ಇವೆಲ್ಲವೂ ಧನಾತ್ಮಕ, ಸಕಾರಾತ್ಮಕ ಮತ್ತು ಅಪೇಕ್ಷಣೀಯ ಚಿಂತನೆಗಳಾಗಿವೆ, ಒಂದು ಕಾಲಘಟ್ಟವನ್ನು ಅದರ ಎಲ್ಲ ಆಯಾಮದೊಡನೆ ವಿಶ್ಲೇಷಿಸಿದ ಸಾಧ್ಯತೆಗಳಾಗಿವೆ. ಈ ಕೊಡುವಿಕೆ-ಪಡೆಯುವಿಕೆ ಪ್ರಕ್ರಿಯೆ ಹಸನಾಗಲು ಸೂಕ್ತ ಮನೋಭೂಮಿಕೆ ಬೇಕೆಂಬುದನ್ನೂ ನುಗಡೋಣಿ ಸೂಚಿಸುತ್ತಾರೆ. ಅಂತಹ ಪ್ರಕ್ರಿಯೆ ಸಾಧ್ಯವಾಗಲಿ ಎಂಬ ಮನಸ್ಥಿತಿ ಕತೆಗಾರನನ್ನು ಹೆಚ್ಚು ಪ್ರಸ್ತುತಗೊಳಿಸಿದೆ. ಕತೆಗಾರ ದೈನಂದಿನ ಬದುಕಿನ ಗೊಂದಲಗಳಿಗೆ ಹೆಚ್ಚು ಗಮನ ನೀಡದೆ ಕಾಲದ ಓಟದಲ್ಲಿನ ಒಟ್ಟು ಬದುಕಿನ ಚಲನೆ, ಚಹರೆಗೆ ಆದ್ಯತೆ ನೀಡುತ್ತಾರೆ. ಉತ್ತರ ಕರ್ನಾಟಕದ ಗೌಡಿಕೆ, ಶ್ರೀಮಂತಿಕೆ, ಜಮೀನ್ದಾರಿಕೆ, ಅನಕ್ಷರತೆ, ಬಡತನ, ಛಲ, ಬದ್ಧತೆ, ತಮಾಷೆ, ಶ್ರಮ ಮೊದಲಾದ ಎಲ್ಲ ಮುಖ್ಯ 'ಗತಿ'ಗಳನ್ನು 'ಒಟ್ಟೂ ಜೀವನದ' ಸಹಜ ನೆಲೆ-ಸೆಲೆಗಳ ರೂಪಕವಾಗಿ ಗ್ರಹಿಸುತ್ತಾರೆ.

ಬಂಡಾಯ-ದಲಿತ ಸಾಹಿತ್ಯದ ಎಲ್ಲ ಆಶಯಗಳನ್ನು ನುಗಡೋಣಿ ಮಂಡಿಸುವ, ಗ್ರಹಿಸಿರುವ, ಪರಿಶೀಲಿಸಿರುವ, ಅನ್ವಯಿಸಿಕೊಂಡಿರುವ 'ಕ್ರಮ' ತೀರಾ ಭಿನ್ನ. 'ವ್ಯಕ್ತಿ' ಈ ಒಟ್ಟೂ ಗ್ರಹಿಕೆಯಲ್ಲಿ ನಗಣ್ಯ ಎನಿಸಿದರೂ 'ನಿರಂತರ ಚಲನೆಯ ಬದುಕಿನಲ್ಲಿ' ಸಮುದಾಯದೊಡನೆ ಸಾಗುವ ವ್ಯಕ್ತಿ 'ವ್ಯಕ್ತಿತ್ವ' ಉಳಿಸಿಕೊಳ್ಳುವಲ್ಲಿ, ರೂಪಿಸಿಕೊಳ್ಳುವಲ್ಲಿ, ತನ್ನತನ ತೋರುವಲ್ಲಿ ಸಫಲವಾದಂತೆ ಚಿತ್ರಣಗೊಂಡಿದ್ದಾನೆ. ಸಮಕಾಲೀನರಾದ ರೋಚಕ ಕತೆಗಾರ ಕುಂವೀಯನ್ನು ಸೃಜನೆಯಲ್ಲಿ ನುಗಡೋಣಿ ಮೀರುವುದೇ ಇಲ್ಲಿ. ಮಹಾದೇವರ ಸಾವಧಾನ ಮತ್ತು ನಿರ್ಲಿಪ್ತ ಭಾವುಕತೆ, ಮಾಸ್ತಿಯವರ 'ಕತೆ ಹೇಳುವಿಕೆ', ಲಂಕೇಶರ 'ಕತೆ ಕಟ್ಟುವಿಕೆ' ಪ್ರಕ್ರಿಯೆಗಳು ನುಗಡೋಣಿಯವರಲ್ಲಿ ಹದನಾಗಿ ಬೆರೆತು ಕತೆಯನ್ನು ರಂಜನೆ-ಸಂವಹನೆ-ಆಲೋಚನೆಯ ಸಾಧ್ಯತೆಗೆ ದಕ್ಕಿಸಿ, ನಂತರದ ಆಧ್ಯಾತ್ಮ, ಅಲೌಕಿಕ ಆಯಾಮಕ್ಕೆ ನಡೆಸಿವೆ.

ತಮ್ಮ ಬಹುಪಾಲು ಕತೆಗಳಲ್ಲಿ ನುಗಡೋಣಿ 'ಹಳ್ಳಿ'ಯನ್ನೇ ನಿರೂಪಿಸಿದ್ದಾರೆ. ಈ ಊರುಗಳು ಸಶಕ್ತವಾಗಿ ರೂಪುಗೊಂಡಿವೆ. ಛಿದ್ರಗೊಳ್ಳುವ ಕೌಟುಂಬಿಕ ಸಂಬಂಧಗಳು, ವ್ಯಕ್ತಿ ಅಸಹಾಯಕತೆ, ರಾಜಕಾರಣ, ಆಟ, ಆಧುನಿಕತೆ, ನಗರೀಕರಣ, ಜಾಗತೀಕರಣದ ಪ್ರಭಾವ-ಪರಿಣಾಮ ಮೊದಲಾದವು ಎಷ್ಟು ಬೇಕೋ ಅಷ್ಟಕ್ಕೆ ಅಚ್ಚುಗೊಂಡು ಕತೆಯೊಳಗೆ ನಿರ್ವಹಿಸಲ್ಪಟ್ಟಿವೆ. ನುಗಡೋಣಿಯವರ ಕತೆಗಳ 'ಮುಸ್ಲಿಂ ಬದುಕು' ಪ್ರತ್ಯೇಕ ನಿರ್ವಚನಕ್ಕೆ ಈಡಾಗುವಷ್ಟು ಸಮೃದ್ಧವಾಗಿ ಚಿತ್ರಣಗೊಂಡಿದೆ. ಅಂತಿಮವಾಗಿ ವ್ಯಕ್ತಿ 'ಮನುಷ್ಯ' ಎಂಬ ತಿಳುವಳಿಕೆ ಇದನ್ನು ರೂಪಿಸಿದೆ.

ಬದುಕಿನ ನೈತಿಕತೆಯನ್ನು ವ್ಯಕ್ತಿ ನೆಲೆಯಲ್ಲಿ ನುಗಡೋಣಿ ಶೋಧಿಸುತ್ತಾರೆ. ಹರಿಶ್ಚಂದ್ರ, ರೇಣುಕರಂತಹ ಪಾತ್ರಗಳುಳ್ಳ 'ಒಡಲುಗೊಂಡವರು' ಕತೆ ಅದನ್ನು ಭಿನ್ನ ನೆಲೆಯಲ್ಲಿ ಧ್ವನಿಸಿದೆ. ನಂಬಿಕೆ, ವ್ಯವಸ್ಥೆಗಳ ನಿರೂಪಣೆಯಲ್ಲಿ ನುಗಡೋಣಿ ಪರಮ ತಲ್ಲೀನರು.

ಈ ನಂಬಿಕೆ, ವ್ಯವಸ್ಥೆಗಳು 'ವ್ಯಕ್ತಿ'ಯನ್ನು ಬಲಗುಂದಿಸಿದರೂ, ಸೋಲಿಸಿದರೂ ಕತೆಗಾರರಿಗೆ ಅದು 'ಮುಖ್ಯ' ಎನಿಸುವುದಿಲ್ಲ. ಒಂದು ತಿರುಗುವ ಚಕ್ರದ ನಡುವೆ ಇರುವ ಸಣ್ಣ ನಂಟಿನಂತೆ 'ವ್ಯಕ್ತಿ' ಕತೆಗಾರರ ದೃಷ್ಟಿಕೋನದಲ್ಲಿ ನಿರೂಪಿಸಲ್ಪಟ್ಟಿದ್ದಾನೆ. ಹಾಗಾಗಿ ಆ ನಂಟು, ಚಕ್ರ, ಚಲನೆ, ಸಮಾಜ ಎಲ್ಲವೂ ಏಕಬಂಧದಲ್ಲಿ ಗ್ರಹಿಸಲ್ಪಟ್ಟಂತೆ ಕಂಡುಬರುತ್ತದೆ.

ಆಡುಭಾಷೆ, ಉಪಭಾಷೆ ನುಗಡೋಣಿ ಕತೆಗಳ ಜೀವ. ಕತೆಗಳು ನೆನಪಿನ ಮಾಲೆಯಂತೆ, ಕನಸಿನಂತೆ, ದಾರದ ಉಂಡೆಯಂತೆ, ಸಿಕ್ಕುಸಿಕ್ಕಾಗಿ ಬಿಡಿಸಿಕೊಳ್ಳುವ, ಬಿಚ್ಚಿಕೊಳ್ಳುತ್ತಾ ಸಾಗುವ 'ಕಥನಗಾರಿಕೆ' ಇವರ ಕತೆಗಳ ಸೊಗಸು. ದಲಿತರ ನಿಸರ್ಗಪ್ರಿಯತೆ, ಸಹಜತೆ, ಮುಗ್ಧತೆಗಳನ್ನು ತನ್ಮಯತೆಯಿಂದ ನಿರೂಪಿಸುವ

ಕತೆಗಾರ, ತಮ್ಮ ಸಂವೇದನೆಯ ಮೂಲಸೆಲೆ, ಆಲೋಚನೆಯ ಒಳಸೆಲೆಯಾದ ದೇವರು (ದೈವ), ಬಸವಣ್ಣ, ಕಲ್ಯಾಣ ಕ್ರಾಂತಿಗಳನ್ನು ಆಳದಲ್ಲಿ ಬುನಾದಿಯಾಗಿ ಹೊಂದಿರುವುದು ಗಮನಾರ್ಹ. ಅಲ್ಲಲ್ಲಿ ಗಂಡು ಪಾತ್ರ ಪ್ರಗತಿಶೀಲ ಮನಸ್ಥಿತಿಯನ್ನು, ಹೆಣ್ಣು ಯಥಾಸ್ಥಿತಿಯನ್ನು ಸಂಕೇತಿಸುವಂತಹ ಪಾತ್ರಗಳಿದ್ದರೂ, ಅಂತಿಮವಾಗಿ ಗಂಡು, ಹೆಣ್ಣಿನ ಅನುಭೂತಿ ಮೀರಿದ 'ಮನುಷ್ಯ' ಸ್ಥಿತಿಯ ಸೃಷ್ಟಿ ಕತೆಗಾರನ ಕಾಣ್ಕೆಯಾಗಿದೆ. ದಲಿತ ಬದುಕಿನ 'ರಸ' ವಿಶೇಷಗಳನ್ನು ನೀಡುತ್ತಲೇ, ಅವರು ವಂಚಿತರಾಗಿರುವ ಶಿಕ್ಷಣ, ಸಾಧ್ಯವಾಗಬಹುದಾದ ಬದಲಾವಣೆ, ಉಂಟಾಗಬಹುದಾದ ಕ್ರಾಂತಿಗಳನ್ನು ಕತೆಗಾರ ಕನಸುತ್ತಾರೆ. ದೇವನೂರರ 'ಮಾರಿಕೊಂಡವರು' ಕತೆಯ ಧ್ವನಿ ಸಾಧ್ಯತೆಗಳ ವಿಸ್ತಾರತೆ 'ತಮಂಧದ ಕೇಡು' ಕತೆಗೆ ದಕ್ಕಿರುವುದು ಗಮನಾರ್ಹ. ಕತೆ ಎಲ್ಲರನ್ನೂ, ಎಲ್ಲವನ್ನೂ 'ಸಮ' ಮಾಡಲು ಹವಣಿಸಿದೆಯೆ ಎಂಬ ಸಣ್ಣ ಪ್ರಶ್ನೆ ಏಳುತ್ತದೆ.

ಕತೆಗಳಲ್ಲಿನ ಕಾಮ ಸಂಬಂಧಗಳು ಬದುಕಿನ ಅವಿಭಾಜ್ಯ ಅಂಶಗಳೆಂಬಂತೆ ಭಾವಿಸಲ್ಪಟ್ಟಿವೆ. ಇಂತಲ್ಲಿ ಗಂಡಿನ ಮೇಲ್ಜಾತಿ, ಹೆಣ್ಣಿನ ಕೀಳ್ಜಾತಿ ಪ್ರಶ್ನೆಯಾಚೆಗೆ ನಿಂತಿವೆ. ಇದು ಉಲ್ಟಾ ಆದೊಡನೆಯೇ ಪ್ರಶ್ನೆಯಾಗಿರುವುದೂ ಗಮನಾರ್ಹ. 'ಜೀತ' ಮೀರದ ಉತ್ತರ ಕರ್ನಾಟಕದ ಬದುಕು 'ವ್ಯಕ್ತಿ ಸ್ವಾತಂತ್ರ್ಯ'ಕ್ಕೆ ಅಡ್ಡಿಯಾಗಿರುವುದು ಉಂಟು. ಮಠ, ದೈವ, ದೇವಸ್ಥಾನ, ನ್ಯಾಯ, ಜಾತಿ, ಕಾಮಗಳು ನಿರ್ವಚನಕ್ಕೆ ಒಳಗಾದ 'ನೆಲೆ' ಗಮನ ಸೆಳೆಯುತ್ತದೆ. ಇಲ್ಲೆಲ್ಲಾ ಉಂಟಾಗಿರುವ ಸಂಬಂಧಗಳು ಅನೇಕ ಪ್ರಶ್ನೆಗಳಿಗೆ ಅವಕಾಶ ನೀಡುತ್ತವೆ. ಯಜಮಾನ-ಆಳು, ಗಂಡು-ಹೆಣ್ಣು, ಕಾಮ-ಮದುವೆ, ಬಾಯಿ ಇಲ್ಲದವರ ವೇದನೆ, ಸ್ತ್ರೀಯರ ಮೌನ ಎಲ್ಲವೂ 'ಒಂದು ಸ್ಥಿತಿ'ಯನ್ನು ಕಟ್ಟಿಕೊಡುತ್ತಲೇ ಅದನ್ನು ಮೀರುವ ಆಶಯವನ್ನು ಹೊಂದಿವೆ.

ಈ ಕತೆಗಳ ಪಾತ್ರಗಳಿಗೆ ಬದುಕು ಸವಾಲಲ್ಲ, ಇವು ಸಂಭ್ರಮಿಸುತ್ತವೆ; ನಿಡುಸುಯ್ಯುತ್ತವೆ. ಇಲ್ಲಿನ ಸಂಗ, ಸಂಭೋಗ, ಮೋಸ, ತ್ಯಾಗ ಎಲ್ಲವೂ ಒಂದು ನಿಶ್ಚಿತ ಬದುಕಿನ ಅಂಗವಾಗಿಯೇ ಸ್ವೀಕೃತವಾಗಿವೆ. ಚುನಾವಣೆಯಲ್ಲಿ ದಲಿತರ, ದಲಿತ ಹೆಣ್ಣಿನ 'ನೆಲೆ'ಗಳತ್ತ ನೋಟ ಬೀರಲಾಗಿದೆ. ಸುಲ್ತಾನಮ್ಮನ ಮಾನವೀಯತೆ ಗುರುತಿಸಲ್ಪಟ್ಟಿದೆ. ಪ್ರೇಮ, ಬಲಾತ್ಕಾರ, ಸಂಭೋಗ ಕುರಿತ ಕತೆಗಾರನ ಮೌನ ಅವರ ಗ್ರಹಿಕೆ, ಅಭಿವ್ಯಕ್ತಿಗಳ ಸಂಯಮಕ್ಕೆ ನಿದರ್ಶನವಾಗಿದೆ. ಈ ಕತೆಗಳಲ್ಲಿನ ಗಂಡು-ಹೆಣ್ಣಿನ ಸಂಬಂಧಗಳ ನಡುವೆ ನೈತಿಕ ಪ್ರಶ್ನೆ ಏಳುವುದೇ ಇಲ್ಲ. ಶಾಂತಗೌಡ-ಚಂದವ್ವ, ಮಾರೆಮ್ಮ-ಅಬ್ದುಲ್ಲ, ಭೀಮಕ್ಕ-ಗೌಡನ ತಮ್ಮ, ಬಸವರಾಜಪ್ಪ-ಗಂಗವ್ವ, ದಾಸ್ರಯ್ಯ-ನೀಲಮ್ಮ ಮೊದಲಾದವರ ಸಂಬಂಧ ಕಾಮವನ್ನು ಮೀರಿದ್ದು; ಹೌದೆ ?

ಗೌಡನ ಮನೆಯ ಕೆಲಸದಾಳುಗಳ ಅಂತಃಕರಣದ ಚಿತ್ರಣ ಗಮನಾರ್ಹ. ಉಳಿದ ಲೇಖಕರು ದಲಿತರ ಗೋಳನ್ನು ಮಾತ್ರ ಹೇಳಿದರೆ ನುಗಡೋಣಿ ದಲಿತರ ಸಂಭ್ರಮ, ಉಲ್ಲಾಸ, ಬದುಕುವ ಬದ್ಧತೆ, ಆಚರಣೆಗಳನ್ನು ವಿವರಿಸುವಲ್ಲಿ ತಲ್ಲೀನರಾಗುತ್ತಾರೆ. ಆ ಮೂಲಕ ದಲಿತ ಬದುಕಿನ ಜೀವಂತಿಕೆಯನ್ನು ಕಟ್ಟಿಕೊಡುವ 'ರೀತಿ' ಸೊಗಸಾಗಿದೆ.

ರಾಯಚೂರು ಕನ್ನಡದ ಬಳಕೆ (ಕಿತ್ತಿದ, ಕೊಲ್ಲಿದ), ಉಪಭಾಷೆಯೊಳಗಿನ ಅನುನಾಸಿಕಗಳ ಬಳಕೆ (ಮಧ್ಯಾಣ), 'ಹೊಗುವಂತಿಗಿ' ಮೊದಲಾದ ಪ್ರಯೋಗಗಳು ಸ್ಥಳೀಯತೆಯನ್ನು ಹೇಳುತ್ತಲೇ, ಭಾಷಿಕ ಅಪಭ್ರಂಶಗಳನ್ನು ದಾಖಲಿಸಿವೆ. ಬಹುತೇಕ ಕತೆಗಳು 'ಹಿನ್ನೋಟ' ತಂತ್ರದಲ್ಲಿ ರಚಿತವಾಗಿವೆ. ಈ ನಿರೂಪಣಾ ಕ್ರಮ ನುಗಡೋಣಿಯವರ 'ಟ್ರೇಡ್‌ಮಾರ್ಕ್' ಎನಿಸುವಷ್ಟರ ಮಟ್ಟಿಗೆ ಈ ತಂತ್ರವನ್ನು ಅವರು ಸಮರ್ಥವಾಗಿ ಬಳಸಿಕೊಂಡಿದ್ದಾರೆ.

ಲೌಕಿಕ-ಅಲೌಕಿಕ, ಕುಶಿ-ಆಧ್ಯಾತ್ಮ, ನಂಬಿಕೆ-ಮೋಸಗಳ ಕಲೆಯ ಬಲೆ 'ಸವಾರಿ' ಕತೆ. ಜಾತಿಸಂಸ್ಕೃತಿ, ವೃತ್ತಿಸಂಸ್ಕೃತಿ, ನಿಷ್ಠೆ, ರಾಜಕಾರಣ, ಬದಲಾದ ಬದುಕಿನ ಕ್ರಮಗಳು ಈ ಕತೆಯ ಒಳ ಸೆಲೆಗಳು. 'ಶರಣ'ನಾದ ಗೌಡ ಅದಕ್ಕೆ 'ವಿರುದ್ಧ'ವಾಗಿ ಬದುಕಿ; 'ಸತ್ತು' ಉಳಿಯುತ್ತಾನೆ. ದಲಿತ ವಜ್ರಪ್ಪ ಅದಕ್ಕೆ ವಿರುದ್ಧವಾಗಿ ಬದುಕಿ; ಸಾಯುತ್ತಾನೆ. ಗೌಡನ ಮಗನ 'ರಾಜಕಾರಣ' ಸಮಕಾಲೀನ; ಅಮಾನವೀಯ. ಮಠದಪ್ಪನ ನಿಷ್ಠೆ ಸಮರ್ಥನೀಯ; ಮೋಸ. ವಜ್ರಪ್ಪನ ಕನಸು ಅಧ್ಯಾತ್ಮ; ಅದಕ್ಕಾಗಿ ಬೇಡುವ ಕುಸಿ ಲೌಕಿಕ.

ಮೋಹಕ ನಿರೂಪಣೆಯುಳ್ಳ ಶಕ್ತಿಶಾಲಿ ಕತೆ ಇದು. ಇಲ್ಲಿನ ಬರವಣಿಗೆಯ ಸಾಂದ್ರತೆ ಅಗಾಧವಾದದ್ದು; ಬೆರಗುಗೊಳಿಸುವಂತದ್ದು. ಸ್ಫುಟವಾದ ಪಾತ್ರಗಳು, ನಿರ್ಲಿಪ್ತ ನಿರೂಪಣೆ, ಚಿಕಿತ್ಸಕ ದೃಷ್ಟಿಕೋನ, ನೀರಿನಂಥ ಭಾಷೆ, ಚಕಿತಗೊಳಿಸುವ ಆಚರಣೆ, ಅಚ್ಚರಿಯುಂಟು ಮಾಡುವ ಕನಸು, ಕೊನೆಯಲ್ಲಿ ವಜ್ರಪ್ಪನ ಸಾವಿನ ಆಘಾತ, ವ್ಯವಸ್ಥೆಯ ಗೆಲುವು ಕತೆಯ ಅಪೂರ್ವ ಸೆಲೆಗಳು. ಗೌಡನ ರೋಗಕ್ಕೆ ಅವನ ಕ್ರಿಯೆಗಳೇ ಕಾರಣ. ಮಗನ ಆಕಾಂಕ್ಷೆ ಬೇರಿಲ್ಲದ ಅವನ ತಿಳುವಳಿಕೆಯ ದ್ಯೋತಕ. ನಿಸ್ವಾರ್ಥದ ನಿಷ್ಠೆಯ ಮಠದಪ್ಪ 'ನಂಬುಗೆ'ಗೆ ಮಾಡುವ ಮೋಸ ಲೋಕದ ನಿಷ್ಠುರತೆಗೆ ನಿದರ್ಶನ. ಸಿದ್ಧನೂ ಮಾರುಹೋಗುವಂತಹ ಬಲೆ ನೇಯುವ 'ವ್ಯವಸ್ಥೆ' ಎಲ್ಲ ಕಾಲದ್ದು. ಮನುಷ್ಯ ಸಂಬಂಧಗಳನ್ನು ಮೀರಿ ನಿಲ್ಲುವ ರಾಜಕಾರಣ; ಅದರ ಹಿಂದಿನ ಹಣ ಮುಂದಿನ ದಿನಗಳಲ್ಲಿ ಬೀರಬಹುದಾದ ಪರಿಣಾಮ ?

''ಅಲೌಕಿಕ ಕನಸು; ವೃತ್ತಿ; ಅಧ್ಯಾತ್ಮದ ಕಾಣ್ಕೆ; ಅದನ್ನೂ ವಿಚಿತ್ರವಾಗಿ ಪರಿಭಾವಿಸುವ ಸಮಾಜ; ಅದನ್ನು ತನ್ನ ಲಾಭಕ್ಕೆ ಬಳಸಿಕೊಳ್ಳುವ ವ್ಯವಸ್ಥೆ''ಗಳ ಮುಪ್ಪುರಿಗೊಂಡ ಚಿತ್ರಣ 'ಸವಾರಿ' ಕತೆಯ ಭಿತ್ತಿ. ನಿರರ್ಗಳ; ಸಂಯಮದ ನಿರೂಪಣೆಯಿಂದಾಗಿ ಕತೆ ಅಗಾಧ ಪರಿಣಾಮ ಬೀರುತ್ತದೆ. ವಜ್ರಪ್ಪನ ಅಧ್ಯಾತ್ಮದ ಬಗ್ಗೆ ಪ್ರಶ್ನೆ ಏಳುತ್ತವೆ. ಸಿದ್ಧನ ಸೋಲು ಪ್ರಶ್ನಾರ್ಹ. ಆದರೆ ಮಠದಪ್ಪ ಅದರಿಂದ ಹೊರಗು !

ನುಗಡೋಣಿಯವರ 'ನೀರು ತಂದವರು', 'ದೈವಕ್ಕೆ ಶರಣೆಂಬೆನು', 'ಕಾಗೀಕೂಟ' ಕತೆಗಳ ಆಶಯ ಮಹೋನ್ನತವಾದುದು. ಸಾಹಿತ್ಯ ಕೃತಿಯೊಂದು ಸಾಂಸ್ಕೃತಿಕ ನಿರ್ವಚನವಾಗುವ, ಅಲೌಕಿಕ-ಆನುಭಾವಿಕ ಆಗುವ ಸಾಧ್ಯತೆಗಳನ್ನು ದಕ್ಕಿಸಿಕೊಂಡಿರುವ ಈ ರಚನೆಗಳು ಅಭಿಜಾತ-ದೇಸೀ ಲಕ್ಷಣಗಳ ಸಮನ್ವಯವಾದಂತೆಯೇ ದೇಶ-ಭಾಷೆಗಳಾಚೆಗಿನ ವ್ಯಾಪ್ತಿ ಪಡೆದ ಸಾರ್ಥಕ ಅಭಿವ್ಯಕ್ತಿಗಳಾಗಿವೆ.

**ಡಾ|| ಎಸ್. ಪ್ರಸಾದಸ್ವಾಮಿ**
'ನುಡಿ', ನಂ. ೩, ೧ನೇ 'ಎ' ಮುಖ್ಯರಸ್ತೆ, ಮುನೇಶ್ವರ ಬಡಾವಣೆ, ೪ನೇ ಬ್ಲಾಕ್,
ದೊಡ್ಡಬೊಮ್ಮಸಂದ್ರ, ವಿದ್ಯಾರಣ್ಯಪುರ ಅಂಚೆ, ಬೆಂಗಳೂರು - ೫೬೦ ೦೯೭

## ಪೊರೆ ಕಳಚಿದ ಹಾವು ಸೂರ್ಯ ಬಿಸಿಲಲ್ಲಿ

ಪೊರೆ ಕಳಚಿದ ಹಾವು ಸೂರ್ಯ ಬಿಸಿಲಲ್ಲಿ
ಸತ್ತದ್ದು ಏಳಲು ಸರಸರ ಸರಸರ
ನವಜೀವ ಪಡೆದು ನವಭಾವ ಮುಡಿದು
ಹಿಂದು ನೋಡದೆ ಇಂದು ನೋಡದೆ
ಮುಂದೆ ಮುಂದೆ ಸಾಗಲು
ಎಂದೆಂದು ಜೀವಂತವಾಗಿರಲು
ಈ ಕಡೆಗೆ ಮಟ ಮಟ ಮಧ್ಯಾಹ್ನ
ಆ ಕಡೆಗೆ ಮಟ ಮಟ ಮಧ್ಯರಾತ್ರಿ
ಆಗಿ ಆಗಿ ಮುಂದೆ ಮುಂದೆ
ಹೋದವರ ಜೊತೆ ಇರಲು
ಸತ್ತ ಹಾವು ಜೀವಂತಗೊಂಡು

ಒಳ್ಳೆಯವರಿಗೆ ಒಳ್ಳೆಯದಾಗಲು
ಕೆಟ್ಟವರಿಗೆ ಕೆಟ್ಟದಾಗಲು
ಸದಾ ಸದಾ ಹಾದಿ ಕಾಯುತ್ತಿರಲು
ಚಕ್ರವಾದ ಪಕ್ಷಿಯಾಗಿ ನಿತ್ಯಕಾಯಲು

**ಚೆನ್ನಣ್ಣ ವಾಲೀಕಾರ**
ಬಡೆಪೂರ ಕಾಲೊನಿ, ವಿಶ್ವವಿದ್ಯಾಲಯ ರಸ್ತೆ
ಗುಲಬರ್ಗಾ - ೫೮೫ ೧೦೫



ಬಿ. ಎಸ್. ಜಗದೀಶ ಚಂದ್ರ

# ಮರೆಯಲಾಗದ ಮಿನಿ ಹಾಲೆಂಡ್ ಮದುರೋಡಾಂ



ಇಲ್ಲಿರುವ ಚರ್ಚುಗಳು, ಅರಮನೆಗಳು, ಕ್ರೀಡಾಂಗಣಗಳು, ನಿಲ್ದಾಣಗಳು, ಕಛೇರಿಗಳು, ನವೀನ ಕಟ್ಟಡಗಳು ಇತ್ಯಾದಿಗಳ ಮಾದರಿಗಳು ಎಂಥವರನ್ನೇ ಆಗಲಿ ಮಂತ್ರಮುಗ್ಧ ಗೊಳಿಸುತ್ತವೆ. ಇವಕ್ಕೆ ಹೊಂದುವಂತಹ ಸುತ್ತಮುತ್ತಲಿನ ರಸ್ತೆಗಳು, ವಾಹನಗಳು, ಹೊರ ಆವರಣಗಳು, ಗಿಡ ಮರಗಳು ಮೊದಲಾದುವು ನಿಜವಾದ ಕಟ್ಟಡವನ್ನೇ ನೋಡಿದಂಥ ಅನುಭವವನ್ನು ನೀಡುತ್ತವೆ. ಇದನ್ನು ನೋಡಿದ ಮೇಲೆ ಹಾಲೆಂಡನ್ನು ಏಕೆ ಸುತ್ತಬೇಕು, ಹಣ ಮತ್ತು ಸಮಯ ಎರಡೂ ವ್ಯರ್ಥ ಎಂದು ಯಾರಾದರೂ ಯೋಚಿಸಿದರೆ ತಪ್ಪೇನಿಲ್ಲ. ಮದುರೋಡಾಂನ ಒಂದು ಘೋಷಣೆ – 'ಇಡೀ ಹಾಲೆಂಡನ್ನು ಒಂದೇ ತಾಣದಲ್ಲಿ ವೀಕ್ಷಿಸಿ'

ಕರ್ನಾಟಕವು ಶಿಲ್ಪಕಲೆಗಳಿಗೆ, ನಮ್ಮ ಭಾರತೀಯ ಸಂಸ್ಕೃತಿಗೆ ಪ್ರಖ್ಯಾತ. ಈ ಆಕರ್ಷಣೆಯಿಂದಾಗಿಯೇ ದೇಶವಿದೇಶಗಳಿಂದ ಪ್ರವಾಸಿಗಳ ದಂಡೇ ಬರುತ್ತದೆ. ಆದರೆ ಇಲ್ಲಿ ನೋಡಬೇಕಾದ ಸ್ಥಳಗಳು ಒಂದೇ ಎರಡೇ ? ಬೇಲೂರೇ, ಹಳೇಬೀಡೇ, ಹಂಪೆಯೇ, ಐಹೊಳೆಯೇ, ಪಟ್ಟದಕಲ್ಲೇ, ಲಕ್ಕುಂಡಿಯೇ ! ಅಬ್ಬಬ್ಬ ಹೇಳಲು ಹೊರಟರೆ ಒಂದು ದೊಡ್ಡ ಪಟ್ಟಿಯೇ ಆಗುತ್ತದೆ. ಆದರೆ ಈ ಎಲ್ಲವನ್ನು ನೋಡಲು ಎಷ್ಟೊಂದು ಸಮಯ ಬೇಕಲ್ಲವೇ ? ಆದರೂ ನೋಡಬೇಕೆಂಬ ತವಕ, ಆಸೆ. ಎಲ್ಲವನ್ನೂ ಒಂದೇ ಕಡೆ ನೋಡುವಂತೆ ಮಾಡಿಬಿಟ್ಟರೆ ? ಛೇ ಹಾಗೆಲ್ಲಾದರೂ ಮಾಡಲು ಸಾಧ್ಯವೇ !! ಯಾಕಾಗಬಾರದು ? ಊಹಿಸಿಕೊಳ್ಳಿ. ಎಂತಹ ಅದ್ಭುತವಾದ ಕಲ್ಪನೆ ಅಲ್ಲವೇ ? ಅಯ್ಯೋ ಕಲ್ಪನೆ ಏಕೆ, ನಿಜವಾಗಿಯೇ ಏಕಾಗಬಾರದು ? ಛೇ ಇದೆಂತಹ ಹುಚ್ಚು ಆಲೋಚನೆ ಎಂದು ಅನ್ನಿಸುತ್ತಿದೆಯೇ ? ಖಂಡಿತ ಇದು ಹುಚ್ಚು ಆಲೋಚನೆಯಲ್ಲ. ಇದನ್ನು ನಿಜವಾಗಿಯೂ ಸಾಕಾರಗೊಳಿಸಬಹುದು. ಇದಕ್ಕೊಂದು ಪುರಾವೆ ಬೇಕೇ ? ಸ್ವಲ್ಪ ಮುಂದೆ ಓದಿ ನೋಡಿ, ನಾವು ಇಷ್ಟು ದಿನ ಸುಮ್ಮನೆ ಏನೂ ಮಾಡದೇ ವ್ಯರ್ಥಮಾಡಿದೆವಲ್ಲಾ ಎಂದೆನಿಸದಿದ್ದರೆ ಹೇಳಿ.

ಹಾಲೆಂಡ್ ದೇಶವು ನಮಗೆಲ್ಲಾ ಸುಪರಿಚಿತ. ಅಲ್ಲಿರುವ ದಿ ಹೇಗ್ ಎಂಬ ಪಟ್ಟಣವೂ ನಮಗೆ ವಿಶ್ವಸಂಸ್ಥೆಯ ಅಂತರರಾಷ್ಟ್ರೀಯ ನ್ಯಾಯಾಲಯದ ಕಟ್ಟಡದ ಮೂಲಕ ಪರಿಚಿತ. ಆದರೆ ಅಲ್ಲೇ ಬಳಿಯಲ್ಲಿರುವ ಮದುರೋಡಾಂ ಎಂದರೆ ಯಾವುದಪ್ಪಾ ಅದು ಎಂದು ಎಲ್ಲರೂ ತಲೆ ಕೆರೆಯುತ್ತಾರೆ. ಹೌದು ಅಲ್ಲಿ ಮದುರೋಡಾಂ ಎಂಬ ಸಣ್ಣ ನಗರವೊಂದಿದೆ. ಸಣ್ಣ ಎಂದರೆ ನಿಜವಾಗಿಯೂ ಸಣ್ಣದು. ಅಲ್ಲಿ ಮಕ್ಕಳು ಹೋದರೆ ಅಲ್ಲಿಯ ಕಟ್ಟಡಗಳ ಮುಂದೆ ಅವರು ಗಲಿವರ್‌ನಂತೆ ಆಗಿಬಿಡುತ್ತಾರೆ. ಯಾಕೆ ಎಂದು ಆಶ್ಚರ್ಯವೇ ? ಹೌದು ಅಲ್ಲಿರುವ ಕಟ್ಟಡಗಳೆಲ್ಲಾ ಸಣ್ಣ ಗಾತ್ರಕ್ಕೆ ಇಳಿಸಿರುವ ಮಾದರಿಗಳು. ಭಾರತದಲ್ಲಿ ಇಂಥ ನಗರವಿಲ್ಲದಿರುವುದರಿಂದ ನಮಗೆ ಅದು ಆಶ್ಚರ್ಯವೂ ಹೌದು, ನಮ್ಮಲ್ಲಿ ಇಂಥ ನಗರವಿಲ್ಲವಲ್ಲ ಎಂಬ ಕೊರಗೂ ಹೌದು.

ಜಾರ್ಜ್ ಮದುರೋ ಎಂಬ ವೀರಯೋಧನೊಬ್ಬನಿದ್ದ. ಎರಡನೇ ಮಹಾಯುದ್ಧದಲ್ಲಿ ಮಡಿದ ಆತನ ಸವಿನೆನಪಿಗಾಗಿ ಏನನ್ನಾದರೂ ಮಾಡಬೇಕು ಎಂಬುದು ಆತನ ತಂದೆ ತಾಯಿಯ ಆಸೆ. ಇವರ ಆಸೆ ಕೈಗೂಡಿಸಲು ಡಚ್ ಸ್ಯಾನಿಟೋರಿಯಂನ ಸದಸ್ಯರಾದ ಶ್ರೀಮತಿ ಬೂನ್ ವಾಂಡರ್ ಸ್ಟ್ರಾಪ್ ಎಂಬಾಕೆಯು ನೆರವಿಗೆ ಬಂದರು. ಎಲ್ಲರೂ ಸೇರಿ ಸವಿನೆನಪಿಗಾಗಿ ಹಾಲೆಂಡಿನ ಎಲ್ಲಾ ಮುಖ್ಯವಾದ ಹಳೆಯ ಹೊಸ ಕಟ್ಟಡಗಳ ಮಾದರಿಗಳ ಒಂದು ಉದ್ಯಾನವನ್ನು ಒಂದು ನಗರದಂತೆಯೇ ನಿರ್ಮಿಸಬೇಕೆಂಬ ತೀರ್ಮಾನಕ್ಕೆ ಬಂದರು. ಹೀಗೆ ನಿರ್ಮಿತವಾದ ಮಿನಿ ನಗರವೇ ಮದುರೋಡಾಂ, ಜಾರ್ಜ್ ಮದುರೋನ ನೆನಪಿಗಾಗಿ ಕಟ್ಟಿದ್ದು. ಇಲ್ಲಿಗೆ ಬರುವ ಪ್ರವಾಸಿಗರು ನೀಡುವ ಪ್ರವೇಶಧನ, ಸಹಾಯಧನ ಇತ್ಯಾದಿ ಹಣವೆಲ್ಲವೂ ಸ್ಯಾನಿಟೋರಿಯಂನ ಏಳಿಗೆಗೆ ಉಪಯೋಗವಾಗುವಂತೆ ಏರ್ಪಾಟು ಮಾಡುವ ತೀರ್ಮಾನಕ್ಕೆ ಬರಲಾಯಿತು. ಈ ರೀತಿ ಜುಲೈ ೨, ೧೯೫೨ರಂದು ಈ ಮಿನಿ ನಗರದ ಉದ್ಘಾಟನೆಯಾಯಿತು. ೧೯೫೨ರಲ್ಲೇ ಬಂದ ಕಲ್ಪನೆ ಭಾರತದಲ್ಲಿ ೫೦ ವರ್ಷದ ನಂತರವೂ ಬಂದಿಲ್ಲ, ಎಂತಹ ವಿಪರ್ಯಾಸ ಅಲ್ಲವೇ !!

ಈ ಮಿನಿ ನಗರದ ಆಡಳಿತ ಮತ್ತು ಅಭಿವೃದ್ಧಿ ಕಾರ್ಯಗಳು ಅಲ್ಲಿನ ವಿದ್ಯಾರ್ಥಿಗಳು ಮತ್ತು ಯುವಜನರಿಂದಲೇ ನಡೆಯುತ್ತಿವೆ. ಯುವಜನರೇ ಈ ನಗರದ ಮೇಯರ್ ಆಗಲು ಅರ್ಹರು. ಇದಕ್ಕೆ ಹಾಲೆಂಡಿನ ರಾಜಮನೆತನದ ಸಹಾಯವೂ ಇದೆ. ಹೀಗಾಗಿ ಅಂದು ಯುವರಾಣಿಯಾಗಿದ್ದ ಕುಮಾರಿ ಬೇಟ್ರಿಕ್ಸ್ ಈ ನಗರದ ಮೊದಲ ಮೇಯರ್ ಆಗಿ ಆಯ್ಕೆಯಾಗಿದ್ದಳು. ಇದಾದ ನಂತರ ಅನೇಕ ವಿದ್ಯಾರ್ಥಿಗಳು ಇದರ ಮೇಯರ್ ಆಗಿ ಆಯ್ಕೆಯಾಗುತ್ತಿದ್ದಾರೆ. ಮದುರೋಡಾಂ ನಗರದ ಪರಿಷತ್ತಿನಲ್ಲಿ ೨೫ ಮಂದಿ ಸದಸ್ಯರಿದ್ದು, ಅವರಿಂದಲೇ ಮೇಯರ್‌ನ ಆಯ್ಕೆಯಾಗುತ್ತದೆ. ಈ ಮೇಯರ್ ತಮ್ಮ ಅವಧಿಯಲ್ಲಿ ಮದುರೋಡಾಂ ನಗರದ ಎಲ್ಲಾ ವ್ಯವಹಾರ, ಅಭಿವೃದ್ಧಿ, ಆಗುಹೋಗುಗಳನ್ನು ನೋಡಿಕೊಳ್ಳಬೇಕು. ಯುವಜನರನ್ನು ಉತ್ತಮ ಕಾರ್ಯದಲ್ಲಿ ತೊಡಗಿಸಲು ಇದಕ್ಕಿಂತ ಉತ್ತಮ ಕ್ರಮ ಬೇರಿನ್ನೇನು ಬೇಕು !

ಹಾಲೆಂಡಿನ ಅತಿ ಸಣ್ಣ ನಗರವಾದ ಮದುರೋಡಾಂನಲ್ಲಿ ಹಳೆಯ, ಹೊಸ ಕಟ್ಟಡಗಳ ಭಾರಿ ಸಂಖ್ಯೆಯ ಮಾದರಿಗಳನ್ನು ೧:೨೫ ಸ್ಕೇಲಿನಲ್ಲಿ ನಿರ್ಮಿಸಿದ್ದಾರೆ. ವೈಭವದಿಂದ ಕಂಗೊಳಿಸುತ್ತಿರುವ ಡಚ್ ವಾಸ್ತುಶಿಲ್ಪದ ಎಲ್ಲಾ ಮಾದರಿಗಳೂ ಇಲ್ಲಿದ್ದು, ಮದುರೋಡಾಂ



ಅಲ್ಲಿನ ಪರಂಪರೆ, ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಕಲಾನಗರವೆಂದರೆ ತಪ್ಪಾಗಲಾರದು. ಇಲ್ಲಿ ಒಟ್ಟು ೧೧೪೮ ಮಾದರಿಗಳಿದ್ದು, ಹಾಲೆಂಡಿನ ಮೂಲೆ ಮೂಲೆಯಿಂದ ಉತ್ತಮವಾದ ಕಟ್ಟಡಗಳನ್ನು ಆರಿಸಲಾಗಿದೆ. ಇದರಲ್ಲಿ ಚಾರಿತ್ರಿಕವಾಗಿ, ಸಾಂಸ್ಕೃತಿಕವಾಗಿ ಮತ್ತು ಸಮಕಾಲೀನವಾಗಿ ಪ್ರಸಿದ್ಧವಾಗಿರುವ ಕಟ್ಟಡಗಳೂ ಸೇರಿವೆ.

ಇದರ ದರ್ಶನ ಮಾಡುವ ಪ್ರತಿಯೊಬ್ಬ ಪ್ರವಾಸಿಗೂ ಈ ನಗರದ ವಿವರವಿರುವ ಒಂದು ಪುಸ್ತಕವನ್ನು ನೀಡಲಾಗುತ್ತದೆ. ಇಲ್ಲಿರುವ ಎಲ್ಲಾ ಮಾದರಿಗೂ ಒಂದು ಸಂಖ್ಯೆಯನ್ನು ನೀಡಲಾಗಿದ್ದು ಆ ಸಂಖ್ಯೆಯ ಮಾದರಿಯ ವಿವರವನ್ನು ಪುಸ್ತಕದ ಮೂಲಕ ತಿಳಿದುಕೊಳ್ಳಬಹುದು. ಸಮಯ, ಸಂಯಮ, ಆಸಕ್ತಿ ಇದ್ದವರಿಗೆ ಇದೊಂದು ಸ್ವರ್ಗವೇ ಸರಿ. ಇಡೀ ಹಾಲೆಂಡಿನ ದರ್ಶನ ಒಂದೇ ಜಾಗದಲ್ಲಿಯೇ ಆಗುವುದು ಇನ್ನೊಂದು ವಿಶೇಷ. ಈ ಮಾದರಿಗಳನ್ನೆಲ್ಲಾ ಮದುರೋಡಾಂನಲ್ಲಿಯೇ ನಿರ್ಮಿಸಲಾಗಿದೆ. ಕೆಲವು ಮಾದರಿಗಳನ್ನು ನಿರ್ಮಿಸಲು ೪ ವರ್ಷಗಳೇ ಬೇಕಾದುವೆಂದರೆ ಅವುಗಳ ಅಂದ ಚಂದ, ಗುಣಮಟ್ಟ ಹೇಗಿರಬಹುದು ನೀವೇ ಊಹಿಸಿಕೊಳ್ಳಿ. ಇಲ್ಲಿ ಕೇವಲ ಕಟ್ಟಡಗಳಷ್ಟೇ ಅಲ್ಲ, ಮಾದರಿಯ ರೈಲುಗಳೂ ಉಂಟು. ಈ ಮಿನಿ ರೈಲುಗಳು ನಿಜವಾದ ರೈಲಿನಂತೆ ಹಳಿಗಳ ಮೇಲೆ ಚಲಿಸುತ್ತವೆ. ಒಟ್ಟು ಈ ಹಳಿಗಳ ಉದ್ದ ಸುಮಾರು ೪೦೦೦ ಮೀಟರ್ ಇದೆಯೆಂದರೆ ಆಶ್ಚರ್ಯವಾಗುವುದಲ್ಲವೇ? ಒಟ್ಟು ೧೪ ರೈಲು ಮತ್ತು ಟ್ರಾಂಗಳಿದ್ದು ಕೆಲವು ಯೂರೋ ಸೆಂಟುಗಳನ್ನು ಹಾಕಿದರೆ ಚಲಿಸುತ್ತವೆ. ಇದಕ್ಕೆ ಹಾಕಿದ ಹಣ ಈ ಮೊದಲೇ ಹೇಳಿದಂತೆ ಮರು ಉಪಯೋಗವಾಗುತ್ತದೆ. ಈ ಚಲಿಸುವ ರೈಲನ್ನು ನೋಡುತ್ತಾ ಕುಳಿತರೆ ಮಕ್ಕಳಿಗೇ ಏಕೆ, ಮುದುಕರಿಗೂ ಒಂದು ರೀತಿಯ ಮುದ ಮತ್ತು ಆನಂದ ಸಿಗುತ್ತದೆ.

ಇಲ್ಲಿ ನಿರ್ಮಿಸಲು ಉದ್ದೇಶಿಸುವ ಯಾವುದೇ ಮಾದರಿಯನ್ನು ಕೇವಲ ಕಾಟಾಚಾರಕ್ಕೆ ನಿರ್ಮಿಸಲಾಗುವುದಿಲ್ಲ. ಅದರ ನಿರ್ಮಾಣಕ್ಕೆ ತೆಗೆದುಕೊಳ್ಳುವ ಆಸಕ್ತಿ, ಮುತುವರ್ಜಿಯನ್ನು ನೋಡಿ ಮೆಚ್ಚಲೇಬೇಕು. ಎಲ್ಲಕ್ಕೂ ಮೊದಲು ನಿಜವಾದ ಕಟ್ಟಡದ ವಿವಿಧ ಕೋನಗಳ ಛಾಯಾಚಿತ್ರಗಳನ್ನು ತೆಗೆದುಕೊಳ್ಳಲಾಗುತ್ತದೆ. ಅದನ್ನು ವಿವರವಾಗಿ ಅಭ್ಯಾಸ ಮಾಡಿದ ನಂತರವೇ ಮಾದರಿಯ ನಿರ್ಮಾಣವನ್ನು ಆರಂಭಮಾಡುವುದು. ಮಾದರಿಯ ನಿರ್ಮಾಣಕ್ಕೆ ಮೊದಲು ಮರವನ್ನು ಉಪಯೋಗಿಸುತ್ತಿದ್ದರಾದರೂ ಈಗೀಗ ಲೋಹ ಹಾಗೂ ಕೃತಕ ವಸ್ತುಗಳಿಂದ ನಿರ್ಮಿಸಲಾಗುತ್ತಿದೆ.

ಇಡೀ ಮಿನಿ ನಗರವನ್ನು ರಮ್ಯವಾಗಿ ಕಾಣುವಂತೆ ಮಾಡಲು ಸಾಕಷ್ಟು ಮರ ಗಿಡಗಳನ್ನು ನೆಡಲಾಗಿದೆ ಮತ್ತು ಅವು ಈ ಮಿನಿ ನಗರದ ಪ್ರಮಾಣಕ್ಕೆ ಹೊಂದಿಕೊಳ್ಳುವಂತೆ ನೋಡಿಕೊಳ್ಳಲಾಗಿದೆ. ಬೆಳೆಯುವ ಗಿಡಗಳನ್ನು ಕತ್ತರಿಸಿ ಅಳತೆಗೆ ಹೊಂದುವಂತೆ ಮಾಡಲಾಗಿದೆ. ಇಲ್ಲಿಯ ಕಟ್ಟಡಗಳ ಮತ್ತು ರಸ್ತೆಗಳ ಸುತ್ತಮುತ್ತಲಲ್ಲಿ ಸುಮಾರು ೫೦೦೦ ಮರಗಳು (ಮರದಂತೆ ಕಾಣಿಸುವ ಕತ್ತರಿಸಿದ ಗಿಡಗಳು) ಇವೆ.

ಕಟ್ಟಡವೆಂದ ಮೇಲೆ ಮನುಷ್ಯರು, ವಾಹನಗಳು ಇರಲೇಬೇಕಲ್ಲವೇ? ಕಟ್ಟಡದ ಅಳತೆಗೆ ತಕ್ಕ ಮನುಷ್ಯರು, ವಾಹನಗಳು ಜೀವಂತವಾಗಿರುವಂತೆ ನಿರ್ಮಿಸಲಾಗಿದೆ. ಇಲ್ಲಿಯ ಮನುಷ್ಯರು ಪಾದಚಾರಿಗಳಾಗಿ, ಕಟ್ಟಡದ ವಾಸಿಗಳಾಗಿ, ವೀಕ್ಷಕರಾಗಿ ಅನೇಕ ವಿಧದಲ್ಲಿ ಅವತರಿಸಿದ್ದಾರೆ. ಈ ಜನರ ಸಂಖ್ಯೆ ಸುಮಾರು ೧೩,೦೦೦ ಇರಬಹುದು. ಹಾಗೆಯೇ ಇಲ್ಲಿ ಓಡಾಡುವ ವಾಹನಗಳೂ ಅಳತೆಗೆ ತಕ್ಕಂತೆ ಇದ್ದು ಕಾರು, ಲಾರಿ, ಬಸ್ಸು ಇತ್ಯಾದಿ ಸುಮಾರು ೨೪೦೦ ವಾಹನಗಳು ಇವೆ; ಅಲ್ಲದೇ ಇವು ಚಲಿಸಬಲ್ಲವು ಎಂಬುದು ಒಂದು ಹೆಗ್ಗಳಿಕೆ. ರಸ್ತೆ ಎಂದ ಮೇಲೆ ದೀಪಗಳು ಬೇಡವೇ? ಜಗಮಗಿಸುವ ನಗರದಂತೆ ಕಂಗೊಳಿಸಲು ಸುಮಾರು ೫೦,೦೦೦ ರಸ್ತೆ ಬದಿಯ ದೀಪಗಳೂ ಉಂಟು. ಇವೆಲ್ಲವನ್ನೂ ರಾತ್ರಿಯ ವೇಳೆ ನೋಡಿದರೆ ಯೂರೋಪಿನ ಯಾವ ನಗರಕ್ಕೂ ಕಡಿಮೆ ಇಲ್ಲ ಎಂಬ ಭಾವನೆ ಉಂಟಾಗುತ್ತದೆ.

ಹಾಲೆಂಡ್, ಆ್ಯಂಸ್ಟರ್‌ಡಾಂ ಎಂದರೆ ಮೊದಲು ನೆನಪಿಗೆ ಬರುವುದು ಕಾಲುವೆಗಳು, ಸೇತುವೆಗಳು ಅಲ್ಲವೇ? ಇಂತಹ ಒಂದು ಸವಿನೆನಪನ್ನು ಇಲ್ಲಿ ಸಾಕಾರಗೊಳಿಸಲಾಗಿದೆ. ನಗರದ ಅಳತೆಗೆ ಹೊಂದುವಂಥ ಕಾಲುವೆಗಳು, ಸೇತುವೆಗಳು ನಗರದ ತುಂಬ ತುಂಬಿವೆ. ಕೆಲವು ಸೇತುವೆಗಳ ಮೇಲೆ ನಾವೂ ಸಹ ನಡೆದಾಡಬಹುದು, ಕೆಲವಂತೂ ಕೆಳಗಿನ ಕಾಲುವೆಗಳಲ್ಲಿ ಹಡಗು ಬಂದರೆ ತೆರೆದುಕೊಳ್ಳುತ್ತವೆ. ಒಟ್ಟು ೨೭ ಸೇತುವೆಗಳೂ ೫೮ ಹಡಗುಗಳೂ ಇಲ್ಲಿವೆ. ಕಾಲುವೆಗಳಲ್ಲಿ ಓಡಾಡುವ ಹಡಗುಗಳನ್ನಂತೂ ನೋಡಲು ಎರಡು ಕಣ್ಣುಗಳು ಸಾಲವು.

ಇಷ್ಟು ಸಾಲದು ಎಂಬಂತೆ ಮದುರೋಡಾಂಗೆ ಒಂದು ವಿಮಾನ ನಿಲ್ದಾಣವೂ ಉಂಟು. ಇದು ಯಾವುದೇ ಕಟ್ಟಡದ ಮಾದರಿಯಲ್ಲ, ಮದುರೋಡಾಂಗಾಗಿಯೇ ವಿನ್ಯಾಸ ಮಾಡಿರುವ ಒಂದು ಮಾದರಿ ಕಟ್ಟಡ. ಬೇರೆ ಬೇರೆ ದೇಶದ ಒಟ್ಟು ೩೨ ವಿಮಾನದ ಮಾದರಿಗಳಿದ್ದು ಅವುಗಳೊಂದಿಗೆ ಈ ಕಟ್ಟಡವೂ ಅತ್ಯಂತ ಸುಂದರವಾಗಿದೆ.

ಇಷ್ಟೆಲ್ಲಾ ಮಾಡಿದ ಮೇಲೆ ಇದನ್ನು ಕಾಪಾಡುವುದು ಒಂದು ದೊಡ್ಡ ಸಮಸ್ಯೆಯೆ. ದಿನದ ಯಾವುದೇ ಸಮಯದಲ್ಲಿ ಸುಮಾರು ೩೫ ಜನ ಪರಿಣತರು ಕರ್ತವ್ಯ ನಿರತರಾಗಿರುತ್ತಾರೆ. ಹೀಗಾಗಿ ಯಾವ ಸಮಸ್ಯೆಯೂ ಎದುರಾಗುವುದಿಲ್ಲ. ಕಟ್ಟಡದ ನೈಜ ವಾತಾವರಣ ಮೂಡಿಸಲು ಆ ಕಟ್ಟಡದ ಸುತ್ತಮುತ್ತ ಇರುವ ರಸ್ತೆ, ಮರ, ರೈಲು ಮಾರ್ಗ, ಕಾಲುವೆ, ಇತರ ಪ್ರಕೃತಿ ದೃಶ್ಯ ಇತ್ಯಾದಿಗಳನ್ನು ಯಥಾವತ್ತಾಗಿ ನಕಲು ಮಾಡುತ್ತಾರೆ. ಇದರಿಂದ ನಿಜವಾದ ಕಟ್ಟಡವನ್ನು ನೋಡಿದ ಅನುಭವವೇ ಆಗುತ್ತದೆ. ಕೆಲವು ಯೂರೋ ಸೆಂಟ್‌ಗಳನ್ನು ಹಾಕಿದರೆ ಹಡಗು, ರೈಲು ಇತ್ಯಾದಿಗಳು ಚಲಿಸುತ್ತವೆ. ಇದು ನೈಜತೆ ಮೂಡಿಸಲು ಒಂದು ಮುಖ್ಯ ಕಾರಣವೂ ಹೌದು.

ಈ ಮಾದರಿಗಳ ಮಿನಿ ನಗರದಲ್ಲಿ ಬೇರೆ ಕಟ್ಟಡಗಳೂ ಉಂಟು. ಆದರೆ ಅವು ಮಾದರಿಗಳಲ್ಲ ನಿಜವಾದ ಕಟ್ಟಡಗಳು. ಇದರಲ್ಲಿ ಎರಡು ಅತ್ಯಾಧುನಿಕ ಉಪಾಹಾರಗೃಹಗಳಿದ್ದು ಅವುಗಳಲ್ಲಿ ಕುಳಿತು ಬಾಯಲ್ಲಿ ನೀರೂರಿಸುವ ತಿಂಡಿಗಳೊಂದಿಗೆ ಇಡೀ ಮಿನಿ ನಗರದ ದೃಶ್ಯವನ್ನು ಸವಿಯಬಹುದು. ಇಲ್ಲಿಯೇ ಎರಡು ಬಹೂಪಯೋಗಿ ಸಭಾಮಂದಿರಗಳಿದ್ದು ಸುಮಾರು ೪೦೦ ಜನ ಹಿಡಿಸುವಷ್ಟಿವೆ. ಇವು ವಾಣಿಜ್ಯ ಮಾತುಕತೆಗಳಿಗೆ, ಕಾರ್ಯಾಗಾರಗಳಿಗೆ, ಸಾಂಸ್ಕೃತಿಕ ಸಮಾರಂಭಗಳಿಗೆ, ಇತರ ಸಮಾರಂಭಗಳಿಗೆ ತುಂಬ ಅನುಕೂಲವಾಗಿದ್ದು, ಬಾಡಿಗೆಗೆ ಪಡೆದರೆ ಹಾಗೂ ಭಾಗವಹಿಸುವ ಜನ ಸಾಕಷ್ಟು ಸಂಖ್ಯೆಯಲ್ಲಿದ್ದರೆ ಹಗಲು, ರಾತ್ರಿಯ ಊಟವನ್ನು ಉಚಿತವಾಗಿ ನೀಡುತ್ತಾರೆ.

ಇವುಗಳೊಂದಿಗೆ ಒಂದು ಉಡುಗೊರೆಯ ಅಂಗಡಿಯೂ ಉಂಟು. ಹಾಲೆಂಡ್ ದೇಶಕ್ಕೆ ಸಂಬಂಧಪಟ್ಟ ವಸ್ತುಗಳು, ಮಕ್ಕಳ ಆಟಿಕೆಗಳು, ಮಾದರಿಗಳನ್ನು ನಿರ್ಮಿಸುವ ಪುಸ್ತಕಗಳು, ಶುಭಾಶಯ ಪತ್ರಗಳು ಇತ್ಯಾದಿಗಳು ದೊರೆಯುತ್ತವೆ. ಒಳಗೆ ಹೋದರೆ ವೇಳೆ ಸರಿಯುವುದೇ ಗೊತ್ತಾಗುವುದಿಲ್ಲ, ಕೈತೂತಿರುವವರಿಗೆ ದುಡ್ಡು ಖರ್ಚಾಗುವುದೂ ತಿಳಿಯುವುದಿಲ್ಲ.

ಈ ಮಿನಿ ನಗರದ ಸುತ್ತ ಸ್ವಲ್ಪ ಎತ್ತರದಲ್ಲಿ ಮಕ್ಕಳು ಸುತ್ತಾಡಲು ಒಂದು ಪುಟಾಣಿ ರೈಲೂ ಇದೆ. ಚಿಕ್ಕ ಮಕ್ಕಳಾದರೆ ಉಚಿತ. ಮಕ್ಕಳಿಗೆ ನಿಜವಾಗಿಯೂ ಮುದ ನೀಡುವ ಆಕರ್ಷಣೆ ಮರೆಯಲಾಗದ ಅನುಭವ ನೀಡುವುದು.

ಇಲ್ಲಿರುವ ಚರ್ಚುಗಳು, ಅರಮನೆಗಳು, ಕ್ರೀಡಾಂಗಣಗಳು, ನಿಲ್ದಾಣಗಳು, ಕಛೇರಿಗಳು, ನವೀನ ಕಟ್ಟಡಗಳು ಇತ್ಯಾದಿಗಳ ಮಾದರಿಗಳು ಎಂಥವರನ್ನೇ ಆಗಲಿ ಮಂತ್ರಮುಗ್ಧಗೊಳಿಸುತ್ತವೆ. ಇವಕ್ಕೆ ಹೊಂದುವಂತಹ ಸುತ್ತಮುತ್ತಲಿನ ರಸ್ತೆಗಳು, ವಾಹನಗಳು, ಹೊರ ಆವರಣಗಳು, ಗಿಡಮರಗಳು ಮೊದಲಾದುವು ನಿಜವಾದ ಕಟ್ಟಡವನ್ನೇ ನೋಡಿದಂಥ ಅನುಭವವನ್ನು ನೀಡುತ್ತವೆ. ಇದನ್ನು ನೋಡಿದ ಮೇಲೆ ಹಾಲೆಂಡನ್ನು ಏಕೆ ಸುತ್ತಬೇಕು, ಹಣ ಮತ್ತು ಸಮಯ ಎರಡೂ ವ್ಯರ್ಥ ಎಂದು ಯಾರಾದರೂ ಯೋಚಿಸಿದರೆ ತಪ್ಪೇನಿಲ್ಲ. ಮದುರೋಡಾಂನ ಒಂದು ಘೋಷಣೆ – 'ಇಡೀ ಹಾಲೆಂಡನ್ನು ಒಂದೇ ತಾಣದಲ್ಲಿ ವೀಕ್ಷಿಸಿ' – ಎಂದಿದೆ. ಇದು ಖಂಡಿತವಾಗಿಯೂ ನಿಜ ಹಾಗೂ ಮರೆಯಲಾಗದ ಅನುಭವ. ಕಟ್ಟಡಗಳಲ್ಲಿ ಆಸಕ್ತಿ ಇರುವವರಿಗೆ, ಇಂಜಿನಿಯರ್‌ಗಳಿಗೆ, ವಾಸ್ತುಶಿಲ್ಪಿಗಳಿಗೆ ಇದೊಂದು ಸ್ವರ್ಗವೇ ಸರಿ.

ಇಷ್ಟೆಲ್ಲಾ ನೋಡಿದ ನಂತರ ಇಡೀ ಭಾರತವನ್ನು ಅಥವಾ ಕರ್ನಾಟಕವನ್ನು ಒಂದೇ ತಾಣದಲ್ಲಿ ನೋಡುವ ಯೋಗ ನಮಗೆ ಎಂದು ಸಿಗುತ್ತದೋ ಎಂದು ಇಂದಿಗೂ ಅನ್ನಿಸುತ್ತಲೇ ಇದೆ.

**ಬಿ. ಎಸ್. ಜಗದೀಶ ಚಂದ್ರ**
ನಂ. ೪೮೨, ೩೮ನೇ ಅಡ್ಡರಸ್ತೆ
೫ನೇ ಬ್ಲಾಕ್, ಜಯನಗರ
ಬೆಂಗಳೂರು - ೫೬೦ ೦೪೧





ನಭಾವಲೋಕನ

# ಚಂದ್ರ ಎಲ್ಲಿ?

**ಈ** ತಿಂಗಳ ಹುಣ್ಣಿಮೆಯ ಚಂದ್ರೋದಯ ವಿಶೇಷವಾದದ್ದು. ಚಂದ್ರ ಎಲ್ಲಿದೆ ಎಂದು ಹುಡುಕಬೇಕಾಗುವುದು. ಆಗಲೇ ಚಂದ್ರ ಭೂಮಿಯ ನೆರಳನ್ನು ಪ್ರವೇಶಿಸಿಬಿಟ್ಟಿರುವುದರಿಂದ ಮಂಕಾದ ಚಂದ್ರ ಉದಯವಾಗುವುದು. ಕಷ್ಟಪಟ್ಟು ಹುಡುಕಿದ ಕೂಡಲೇ ಚಂದ್ರನ ಛಾಯಾಚಿತ್ರ ತೆಗೆಯಲು ಪ್ರಯತ್ನಿಸಿ. ಸಾಕಷ್ಟು ಕಷ್ಟಪಡಬೇಕಾಗುವುದು. ನಿಮ್ಮ ಎಲ್ಲ ಬಗೆಯ ಎಕ್ಸ್‌ಪೋಷರ್‌ಗಳ ಪ್ರಯೋಗಗಳಿಗೆ ರಾತ್ರಿಯ ಎಂಟೂವರೆಯವರೆಗೂ ಅವಕಾಶವಿದೆ. ಚಂದ್ರದ ಆಸುಪಾಸಿನ ನಕ್ಷತ್ರಗಳೂ ಮೂಡುವುವು. ಎಂಟೂವರೆಗೆ ಚಂದ್ರನ ಬಿಳಿಯ ಭಾಗ ಅದರ ಪಶ್ಚಿಮದ ಅಂಚಿನಲ್ಲಿ ಗೋಚರಿಸುವುದು. ಅದು ಬಿಳಿಯೇ? ಹಳದಿಯೇ? ಕಿತ್ತಳೆಯೇ? ಪರೀಕ್ಷಿಸಿ.




ಅಲ್ಲಿಯವರೆಗೂ ಅಂದರೆ ಪೂರ್ಣತೆಯ ಅವಧಿಯಲ್ಲಿ ಚಂದ್ರನ ಬಣ್ಣ ಕಂದು ಇರಬಹುದೇ? ತಾಮ್ರದ ಬಣ್ಣ ಇರಬಹುದೇ? ಕಡುಗೆಂಪು ಇರಬಹುದೇ? ಪ್ರತಿ ಹುಣ್ಣಿಮೆಯಲ್ಲಿ ಕೆಂಪು ಚಂದ್ರ ಉದಯಿಸಿ ಬರುಬರುತ್ತಾ ಬಿಳಿಯಾಗುತ್ತಿತ್ತು. ಈ ಬಾರಿ ಬಣ್ಣ ಹೇಗೆ ಬದಲಾಗಬಹುದು? ನೋಡಿ ಪರೀಕ್ಷಿಸೋಣ. ಗ್ರಹಣದ ಸಮಯದಲ್ಲಿ ಚಂದ್ರನ ಬಣ್ಣ ನಿರ್ಧರಿಸುವುದು ಭೂ ವಾತಾವರಣದ ಧೂಳು. ಅದು ಈಗ ಹೆಚ್ಚಾಗಿರುವ ಸಾಧ್ಯತೆ ಇದೆ. ಒಂದೆರಡು ಅಗ್ನಿಪರ್ವತಗಳು ಧೂಳನ್ನು ಚಿಮ್ಮಿಸಿ ವಿಮಾನಯಾನವನ್ನು ಅಸ್ತವ್ಯಸ್ತಗೊಳಿಸಿದ್ದು ನೆನಪಿದೆಯಲ್ಲವೇ? ಆ ಧೂಳು ಈಗ ಅಡಗಿಹೋಗಿದ್ದರೆ ಚಂದ್ರ ಕಡುಗೆಂಪಾಗಿರುತ್ತದೆ. ಈಚೆಗೊಂದು ಅಗ್ನಿ ಪರ್ವತವೂ ಧೂಳು ಚೆಲ್ಲಲು ಆರಂಭಿಸಿದೆ. (ನವೆಂಬರ್ ೧೨) ಈ ಧೂಳು ಇನ್ನೂ ವಾತಾವರಣದಲ್ಲಿಯೇ ಇದ್ದರೆ ಚಂದ್ರ ಕಂದು ಬಣ್ಣಕ್ಕಿರಬಹುದು ಅಥವಾ ಕಾಣದೇ ಇರುವಷ್ಟು ಮಂಕಾಗಬಹುದು. ಒಟ್ಟಿನಲ್ಲಿ ಅದೊಂದು ಅಪೂರ್ವ ಹುಣ್ಣಿಮೆ ಆಗಲಿದೆ.

ಸಂಜೆ ಇನ್ನೂ ಮಸುಕಾದ ಸಂಜೆಗೆಂಪು ಇರುವಾಗಲೇ ಪೂರ್ವ ದಿಗಂತವನ್ನು ಗಮನಿಸಿ. ಆಕಾಶ ಶುಭ್ರವಾಗಿದ್ದರೆ ಭೂಮಿಯ ನೆರಳನ್ನು ಗುರುತಿಸಲು ಸಾಧ್ಯವಾಗಬಹುದು. ಸ್ವಲ್ಪ ಸಮಯದಲ್ಲಿಯೇ ಅಲ್ಲಿ ಚಂದ್ರನೂ ಮೂಡುವುದು. ಆದರೆ ಅದು ನೆರಳು ಎಂದು ಖಚಿತ ಪಡಿಸಿಕೊಳ್ಳಲು ಹಿಂದಿನ ದಿನ ಮತ್ತು ಮರುದಿನವೂ ಗಮನಿಸಿ. ಆಕಾಶ ಶುಭ್ರವಾಗಿರುವುದರಿಂದ ಇದು ಸಾಧ್ಯವಾಗಬಹುದು.

ಮಂಕಾಗಿರುವ ಚಂದ್ರನ ಸಹಾಯದಿಂದ ಆ ರಾತ್ರಿ ನಕ್ಷತ್ರಪುಂಜಗಳನ್ನು ಗುರುತಿಸುವ ಕೆಲಸ ಕೈಗೆತ್ತಿಕೊಳ್ಳಬಹುದು. ವೃಷಭ ಮತ್ತು ಮಹಾವ್ಯಾಧದ ನಡುವೆ ಕಾಣುವ ಚಂದ್ರ; ಅದರ ತುಸು ಉತ್ತರಕ್ಕೆ ಆರಿಗಾ (ವಿಜಯಸಾರಥಿ). ಇದೀಗ ನಕ್ಷೆ ಬಳಸಿ ಪಾರ್ಥ (ಪರ್ಸಿಯುಸ್), ಕುಂತಿ (ಕೆಸಿಯೋಪಿಯಾ) ಇವುಗಳನ್ನೂ ಗುರುತಿಸಬಹುದು. ರಾತ್ರಿ ಎಂಟು ಗಂಟೆಯ ಹೊತ್ತಿಗೆ ಚಂದ್ರ ಮೇಲೇರಿರುವುದರಿಂದ ಇತರ ನಕ್ಷತ್ರಪುಂಜಗಳು ಪೂರ್ವದಲ್ಲಿ ಉದಯವಾಗುವುದನ್ನೂ ಪರಿಚಯ ಮಾಡಿಕೊಳ್ಳಬಹುದು. ದಕ್ಷಿಣದ ಆಕಾಶ ನಿಜಕ್ಕೂ ಖಾಲಿಯೇನಲ್ಲ; ಅಲ್ಲಿರುವ ಬಕ (ಗ್ರುಸ್), ದಕ್ಷಿಣ ಮೀನ (ಪೈಸಸ್ ಆಸ್ಟ್ರನೀಸ್) ಮತ್ತು ವೈತರಣಿ (ಎರಿಡಾನಿಸ್) ಇವುಗಳನ್ನು ಗುರುತಿಸಿ.



೭ರ ಸಂಜೆ ಗುರು ಮತ್ತು ಚಂದ್ರ ಮೇಷರಾಶಿಯಲ್ಲಿ

ಶುಕ್ರ ಮತ್ತು ಗುರು ಪೂರ್ವ ಪಶ್ಚಿಮಗಳಲ್ಲಿ ಪ್ರಕಾಶಮಾನವಾಗಿ ಕಾಣುವುವು. ಕಳೆದ ತಿಂಗಳು ನೇರವಾಗಿ ಎದುರುಬದಿರಾಗಿದ್ದವು; ಈಗ ಗುರು ಇನ್ನೂ ಮೇಲೆದ್ದಿದೆ ಎಂಬುದನ್ನು ಗುರುತಿಸಬಹುದು. ಆದರೆ ಗುರು ಇದ್ದಲ್ಲೇ ಇದೆ. ಅಂದರೆ ಮೇಷ ರಾಶಿಯಲ್ಲೇ ಇದೆ. ತಿಂಗಳ ಕೊನೆಗೆ ಅದರ ಹಿನ್ನಡೆ ಮುಕ್ತಾಯವಾಗಿ ಅದು ಮುಂದಕ್ಕೆ ಹೊರಡಲು ಪ್ರಾರಂಭಿಸುತ್ತದೆ. ಆದರೆ ಬರಿಗಣ್ಣಿಗೆ ಈ ಚಲನೆ ತಿಳಿಯಲು ಒಂದು ತಿಂಗಳಾದರೂ ಕಾಯಬೇಕು. ಸದ್ಯಕ್ಕೆ ಅದು ತಟಸ್ಥವಾಗಿದೆ ಎನ್ನಿಸಬಹುದು. ಶುಕ್ರ ಕಳೆದ ಒಂದು ತಿಂಗಳಲ್ಲಿ ವೃಶ್ಚಿಕ ರಾಶಿಯಿಂದ ಧನು ರಾಶಿಯತ್ತ ಚಲಿಸಿದೆ. ಡಿಸೆಂಬರ್‌ನಲ್ಲಿ ಧನು ರಾಶಿಯಿಂದ ಮಕರದತ್ತ ಚಲಿಸುವುದು. ಸೂರ್ಯ ಕೂಡ ಹೀಗೆಯೇ ಧನುರಾಶಿಯಿಂದ ಮಕರಕ್ಕೆ ಚಲಿಸುತ್ತದೆ. ಅಂದರೆ ಸೂರ್ಯ ಮತ್ತು ಶುಕ್ರಗಳ ನಡುವೆ ಅದೇ ಅಂತರ ಉಳಿಯುತ್ತದೆ. ಶುಕ್ರ ತಿಂಗಳುದ್ದಕ್ಕೂ ಅದೇ ಎತ್ತರದಲ್ಲಿ ಕಾಣುತ್ತದೆ.

ಶನಿ ಕನ್ಯಾರಾಶಿಯಲ್ಲಿದೆ. ಚಿತ್ರಾ ನಕ್ಷತ್ರದ ಪಕ್ಕ ಅದನ್ನು ಬೆಳಗಿನ ಜಾವ ಕಾಣಬಹುದು. ಬೆಳಗಿನ ಜಾವದಲ್ಲಿ ಕಾಣುವ ಇನ್ನೊಂದು ಗ್ರಹ ಮಂಗಳ ಸಿಂಹ ರಾಶಿಯಲ್ಲಿ ಮಘ ನಕ್ಷತ್ರದಿಂದ ಕ್ರಮೇಣ ದೂರ ಸರಿಯುವುದನ್ನು ತಿಳಿಯಲು ತಿಂಗಳ ಆರಂಭದಲ್ಲಿ ಮತ್ತು ತಿಂಗಳ ಕೊನೆಯಲ್ಲಿ ಅದರ ಸ್ಥಾನವನ್ನು ಗುರುತಿಸಿ.

ಬೆಳಗಿನ ಜಾವ ಕಾಣುವ ಬುಧ ೨೨ರಂದು ಗರಿಷ್ಠ ಎತ್ತರದಲ್ಲಿರುತ್ತದೆ. ಅದೇ ದಿನವೇ ಉತ್ತರಾಯಣ. ಸೂರ್ಯ ದಕ್ಷಿಣದ ಎಲ್ಲೆಯನ್ನು ಮುಟ್ಟುವ ದಿನ. ಅತಿ ಕಡಿಮೆ ಅವಧಿಯ ಹಗಲು.

೧೨-೧೩ರ ಅವಧಿಯಲ್ಲಿ ಜೆಮಿನಿಡ್ಸ್ ಉಲ್ಕಾವೃಷ್ಟಿ ಕಾಣುತ್ತದೆ. ಆದರೆ ಈ ಬಾರಿ ಅದರ ವೀಕ್ಷಣೆಗೆ ಹುಣ್ಣಿಮೆಯ ಚಂದ್ರನ ಬೆಳಕು ಅಡ್ಡಿಯಾಗುತ್ತದೆ. ಇನ್ನೊಂದು ಅಷ್ಟೇನೂ ಜನಪ್ರಿಯವಲ್ಲದ ಉಲ್ಕಾವೃಷ್ಟಿ ೨೨-೨೩ರಂದು ನಡೆಯುವುದು. ಆಗ ಚಂದ್ರನ ಬೆಳಕೂ ಕ್ಷೀಣವಾಗಿರುತ್ತದೆ. ಇದು ಲಘು ಸಪ್ತರ್ಷಿ ಮಂಡಲ (ಉರ್ಸಾ ಮೈನರ್)ದ ದಿಕ್ಕಿನಿಂದ ಹೊರಟಂತೆ ಕಾಣುವುದರಿಂದ ಉರ್ಸಿಡ್ಸ್ ಎಂಬ ಹೆಸರಿದೆ. ಅಂದರೆ ಧ್ರುವ ನಕ್ಷತ್ರದ ದಿಕ್ಕಿಗೆ ನೋಡುತ್ತಾ ಕುಳಿತರೆ ಗಂಟೆಗೆ ೧೦ ಉಲ್ಕೆಗಳು ಕಾಣುವುವು.

ಜೆರಾಡ್ ಎಂಬ ಧೂಮಕೇತು ದುರ್ಬೀನಿಗೆ ಕಾಣುವಷ್ಟು ಪ್ರಕಾಶ ಪಡೆದಿದ್ದರೂ ಸೂರ್ಯನಿಗೆ ಸಮೀಪವಾಗಿರುವುದರಿಂದ ಸಂಜೆ ಸೂರ್ಯಾಸ್ತವಾದ ಸ್ವಲ್ಪ ಹೊತ್ತು ಮಾತ್ರ ಕಾಣುವ ಸಾಧ್ಯತೆ ಇದೆ. ೨೩ರಂದು ಸೂರ್ಯನನ್ನು (ಪುರರವಿ ಬಿಂದುವಿನಲ್ಲಿ) ಸಮೀಪಿಸುವುದು.

**ಖಗೋಳ ದಿನಚರಿ**

೨ ಚಾಂದ್ರಮಾಸದ ಮೊದಲ ಪಾದ; ಚಂದ್ರಾಸ್ತ ಮಧ್ಯರಾತ್ರಿಗೆ.
೬ ಚಂದ್ರ – ಭೂಮಿ ನಡುವೆ ಗರಿಷ್ಠ ಅಂತರ
೭ ಸಂಜೆ ಗುರು ಮತ್ತು ಚಂದ್ರ ಜೋಡಿ*
೧೦ ಸಂಜೆ ಚಂದ್ರಗ್ರಹಣ ಉದಯಕ್ಕೆ ಮೊದಲೇ ಆರಂಭ; ಮುಕ್ತಾಯ ೨೧:೪೮ಕ್ಕೆ
೧೨ - ೧೩ ಮುಂಜಾವು ಜೆಮಿನಿಡ್ಸ್ ಉಲ್ಕಾವೃಷ್ಟಿ
೧೭ ಮುಂಜಾವು ಮಂಗಳ, ಚಂದ್ರ ಜೋಡಿ*
೧೮ ಚಾಂದ್ರಮಾಸದ ಕೊನೆಯ ಪಾದ; ಚಂದ್ರೋದಯ ಮಧ್ಯರಾತ್ರಿಗೆ
೨೦ ಬೆಳಗಿನ ಜಾವ ಚಿತ್ರಾ, ಸ್ವಾತಿ, ಶನಿ ಮತ್ತು ಚಂದ್ರ ಪುಟ್ಟ ಗುಂಪು*
೨೨ ಉತ್ತರಾಯಣ ೧೧:೦೦ ಗಂಟೆಗೆ; ಮುಂಜಾವು ಬುಧ - ಜ್ಯೇಷ್ಠಾ ಜೋಡಿ; ಉರ್ಸಿಡ್ಸ್ ಉಲ್ಕಾವೃಷ್ಟಿ
೨೩. ಮುಂಜಾವು ಬುಧ ಗ್ರಹದ ಗರಿಷ್ಠ ಕೋನೋನ್ನತಿ*
೨೪ ಅಮಾವಾಸ್ಯೆ ೨೩:೩೬ಕ್ಕೆ
೨೬ ಗುರುಗ್ರಹದ ಹಿನ್ನಡೆ ಮುಕ್ತಾಯ
೨೭ ಸಂಜೆ ಶುಕ್ರ ಮತ್ತು ಚಂದ್ರ ಜೋಡಿ*

(* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)

ಡಾ|| ಬಿ. ಎಸ್. ಶೈಲಜಾ
ಜವಾಹರ್ ಲಾಲ್ ನೆಹರು ತಾರಾಲಯ,
ಹೈಗ್ರೌಂಡ್ಸ್, ಬೆಂಗಳೂರು - ೧



### ಹೊಳೆಮಕ್ಕಳು (ಕಾದಂಬರಿ)

ಬಿದರಹಳ್ಳಿ ನರಸಿಂಹಮೂರ್ತಿ
**ಪುಟ : viii + ೨೫೮ = ೨೬೬**
**ಬೆಲೆ : ರೂ. ೨೦೦**
**ಮನೋಹರ ಗ್ರಂಥಮಾಲಾ,**
ಲಕ್ಷ್ಮೀ ಭವನ,
ಸುಭಾಷ್ ರಸ್ತೆ,
ಧಾರವಾಡ - ೫೮೦ ೦೦೧

ಒಂದು ಕುಟುಂಬದಲ್ಲಿ ಸಹಜವಾಗಿ ನಡೆದುಹೋಗುವಂಥ ಕಥೆಯನ್ನುಳ್ಳ ಸುದೀರ್ಘ ಕಾದಂಬರಿಯಿದು. ಪ್ರಾರಂಭದಲ್ಲೇ ಪುಣ್ಯಕ್ಷೇತ್ರವೆಂದು ನಂಬಲಾದ ಸ್ಥಳದಲ್ಲಿ ದುರಂತಕ್ಕೀಡಾಗಿ ನೊಂದಿರುವ ಕುಟುಂಬದ ಇತರ ಸದಸ್ಯರು ಕಾಲದ ಪ್ರವಾಹದಲ್ಲಿ ಮುಂದೆ ಸಾಗುತ್ತ ತಮ್ಮ ನೆಲೆಯನ್ನು ಗುರುತಿಸುತ್ತ, ಬಾಳು ಸಾಗಿಸುತ್ತ ನೆಮ್ಮದಿಯನ್ನು ಕಾಣಲು ತವಕಿಸುತ್ತವೆ. ನದಿಯೊಂದು ಹರಿಯುತ್ತಾ ಮುಂದೆ ಸಾಗುವ ಪಥಕ್ಕೂ ಮನುಷ್ಯನ ಜೀವನದ ವರ್ಷಗಳುರುಳಿ ಮುಂದುವರಿದು ಸಾಗುವ ಪಥಕ್ಕೂ ತುಂಬ ಸಾಮ್ಯವಿದೆ. ಅಜ್ಜನಿಂದ ಮೊಮ್ಮಗನವರೆಗೆ ಇರುವ ಇಲ್ಲಿನ ಕಥಾ ಹಂದರದಲ್ಲಿ ವಿಶೇಷ ಘಟನೆಗಳೇನೂ ನಡೆಯುವುದಿಲ್ಲವಾದರೂ ಬದಲಾವಣೆಗಳು ತನ್ನಿಂದ ತಾನೇ ಆಗುತ್ತವೆ. ಹಳ್ಳಿಯ ಪರಿಸರದಲ್ಲಿ ತಣ್ಣನೆಯ ಬದುಕನ್ನು ಕಟ್ಟಿಕೊಳ್ಳುವ ಜನರ ಮನಸ್ಸಿನ ಭಾವನೆಗಳಲ್ಲಿ ಕೆಲವರದ್ದು ಒಳಗೊಳಗೇ ಕುದಿದು ಆವಿಯಾದರೆ ಮತ್ತೆ ಕೆಲವು ಜನರಲ್ಲಿ ಅವು ಇಂಗಿಹೋಗದೆ ಲಾವಾರಸದಂತೆ ಉಕ್ಕಿ ಹೊರಗೆ ಚೆಲ್ಲುತ್ತವೆ. ತನ್ನಿಷ್ಟದಂತೆ ಬದುಕುವ ಆಸೆ ಎಲ್ಲರಿಗೂ ಇರುವುದಾದರೂ ಹಾಗಾಗುವುದು ಜೀವನದಲ್ಲಿ ಅಪರೂಪದ ಘಟನೆಯಾಗುತ್ತದೆ. ಬದಲಾವಣೆ ಬಯಸುವ ಎಲ್ಲ ಮನಸ್ಸುಗಳು ಪಾತ್ರಗಳ ಮೂಲಕ ಈ ಕಾದಂಬರಿಯಲ್ಲಿ ಬಿಂಬಿತವಾಗಿವೆ. ಇದನ್ನು ಬರೆದ ಶ್ರೀ ಬಿದರಹಳ್ಳಿ ನರಸಿಂಹ ಮೂರ್ತಿ ಕನ್ನಡಿಗರಿಗೆ ಈಗಾಗಲೇ ಪರಿಚಿತರು.

### ತುಳುವರ ಯುಗಯಾತ್ರೆ

ರವಿ ರಾ. ಅಂಚನ್
**ಪುಟ : ೧೪+೧೬೨= ೧೭೬** **ಬೆಲೆ : ರೂ. ೧೨೫**
**ಸಿರಿವರ ಪ್ರಕಾಶನ,** ಎಂ ೩೭/ಬಿ, ೮ನೇ ಅಡ್ಡರಸ್ತೆ, ಲಕ್ಷ್ಮಿನಾರಾಯಣಪುರ, ಬೆಂ - ೨೧

ತುಳು ನಾಡಿನ ಕೃಷಿ ಮೂಲದ ಬುಡಕಟ್ಟು ಸಂಸ್ಕೃತಿ ತುಂಬ ಪ್ರಾಚೀನವಾಗಿದ್ದು ಅಲ್ಲಿ ಮಾತೃ ಮೂಲದ ವ್ಯವಸ್ಥೆಯೇ ಪ್ರಧಾನವಾಗಿತ್ತು. ಕುಲಮೂಲದ ಹಿರಿಯರಿಗೆ ಕಾಪಾಡ್ತಿ ಮತ್ತು ಕಾಪಾಡರೆಂದು ಗೌರವಿಸಲಾಗುತ್ತಿತ್ತು. ಮುಂದೆ ಊಳಿಗಮಾನ್ಯ ವ್ಯವಸ್ಥೆಯತ್ತ ಮೂಲ ಕುಟುಂಬಗಳು ವಿಘಟನೆಗೊಂಡು ಸಾಮಾಜಿಕ ವ್ಯವಸ್ಥೆಯೇ ಪಲ್ಲಟಗೊಂಡಿತು. ಕೇವಲ ಕೃಷಿಕರಾಗಿ-ಕೃಷಿಕಾರ್ಮಿಕರಾಗಿ ದುಡಿಯುವ ಅನಿವಾರ್ಯತೆ ಸೃಷ್ಟಿಯಾಗಿ ಜನಜೀವನವೇ ಬದಲಾಯಿತು. ಹೀಗೆ ಇಲ್ಲಿ ತುಳುವರ ಚರಿತ್ರೆಯನ್ನು ಶೋಧಿಸುವ, ಅವರ ಆಚರಣೆ, ನಂಬಿದ ಸತ್ಯಗಳ ಆರಾಧನೆ ಮತ್ತು ಭೂಸಂಬಂಧಿ ಕೆಲಸಕಾರ್ಯಗಳಲ್ಲಿ ಅವರ ಶ್ರದ್ಧೆ–ಮುಂತಾದ ಬಹಳಷ್ಟು ವಿವರಗಳನ್ನೊಳಗೊಂಡ ಮಾಹಿತಿಗಳು ಸಿಗುತ್ತವೆ. ತುಳು ಪಾಡ್ದನಗಳಲ್ಲಿ ಅಡಗಿರುವ ತುಳುವರ ಸಂಸ್ಕೃತಿ-ಚರಿತ್ರೆ ಮಹತ್ವದ ವಿಚಾರಗಳನ್ನು ತಿಳಿಸುತ್ತದೆ. ಈಗಾಗಲೇ ಮಾಯಂದಾಲ್ ಕಲ್ಲುರ್ಟಿಯಂತಹ ಮಾತೃಮೂಲ-ಶ್ರಮಸಂಸ್ಕೃತಿಯ ತುಳುವರ ವೀರ ಮಹಿಳೆಯರ ಬಗ್ಗೆ ಪುಸ್ತಕಗಳನ್ನು ಬರೆದಿರುವ ಶ್ರೀ ರವಿ ರಾ ಅಂಚನ್ ಈ ಕೃತಿಯಲ್ಲಿ ಇನ್ನಷ್ಟು ವಿವರವಾಗಿ ತುಳುವರ ಬಗ್ಗೆ ಬರೆದಿದ್ದಾರೆ. ತುಳುವರ ಬದುಕಿನೊಂದಿಗೆ ಬೆಸೆದುಕೊಂಡ ದಕ್ಷಿಣಕನ್ನಡದ ಅನೇಕ ಸ್ಥಳಗಳ ಪುರಾಣ ಮತ್ತು ಸ್ಥಳನಾಮಗಳ ಬಗ್ಗೆ ಇಲ್ಲಿ ಚರ್ಚಿಸಲಾಗಿದೆ.



### ನಾ ಬದುಕಲಿಕ್ಕೆ ಒಲ್ಲೆಪಾ (ದ್ವಿಪಾತ್ರ ನಾಟಕಗಳು)

ಲೋಹಿತ್ ನಾಯ್ಕರ
**ಪುಟ : viii + ೧೧೪ = ೧೨೨** **ಬೆಲೆ : ರೂ. ೮೦**
**ಮನೋಹರ ಗ್ರಂಥಮಾಲಾ,** ಲಕ್ಷ್ಮೀ ಭವನ, ಸುಭಾಷ್ ರಸ್ತೆ, ಧಾರವಾಡ - ೫೮೦ ೦೦೧

ಇಲ್ಲಿರುವ ದ್ವಿಪಾತ್ರ ಸಂಭಾಷಣೆಯಿಂದ ಕೂಡಿದ ನಾಟಕಗಳು ರಂಗಪ್ರಯೋಗಗಳಿಗಾಗಿಯೇ ರಚಿಸಿರುವಂತಿವೆ. ಹೇಳುವುದನ್ನೆಲ್ಲ ಎರಡು ಪಾತ್ರಗಳು ಸಮರ್ಪಕವಾಗಿ ಹೇಳಿ ಇಂದಿನ ಸನ್ನಿವೇಶ - ಆತಂಕ- ತಲ್ಲಣಗಳನ್ನು ಕಣ್ಣಿಗೆ ಕಟ್ಟಿದಂತೆ ಅಭಿನಯಿಸಲು ಯೋಗ್ಯವಾಗಿವೆ. ದುಷ್ಟ ಸರಕಾರಗಳು, ಭ್ರಷ್ಟ ಅಧಿಕಾರಿಗಳು ಸ್ವಾರ್ಥ ತುಂಬಿದ ಮಾನವೀಯ ವಾತಾವರಣವೆಲ್ಲ ಸೇರಿ ಅಮಾಯಕರಿಗೆ ಜೀವನ ಜಿಗುಪ್ಸೆ ತರುತ್ತದೆ. ಸುಖಲೋಲುಪರಾಗಿದ್ದು ಬಡಜನರನ್ನು ಹಿಂಡುವಂಥ ವ್ಯವಸ್ಥೆಯನ್ನು ಈ ನಾಟಕಗಳು ಎತ್ತಿತೋರಿಸುತ್ತವೆ. ಗೌರವಯುತ-ಜವಾಬ್ದಾರಿಯುತ ಸ್ಥಾನಗಳನ್ನೆಲ್ಲ ಅಪಾತ್ರರು ಆಕ್ರಮಿಸಿಕೊಂಡು ಸ್ವೇಚ್ಛೆಯಿಂದ ಮೆರೆಯುವುದನ್ನು ಇಲ್ಲಿನ ಪಾತ್ರಗಳ ನಡವಳಿಕೆಯಿಂದ ತಿಳಿಯಬಹುದು. ಹೆಜ್ಜೆ ಹೆಜ್ಜೆಗೂ ನಿಯಮ, ಕಾಯಿದೆ, ಕಾನೂನುಗಳೆಂಬ ಸುಳಿಗಳಿಂದ ಬೇಸತ್ತು ತಾನಿನ್ನು ಬದುಕಲಾರೆ, ಅಥವಾ ತನಗಿನ್ನು ಬದುಕಲು ಇಷ್ಟವಿಲ್ಲ ಎಂಬ ಅಸಹಾಯಕ ಧ್ವನಿ ನೊಂದವರಿಂದ ಹೊರಡುತ್ತದೆ. ಯುವ ಜನತೆ ಇಂದು ಹಿಡಿದಿರುವ ದಾರಿ ಎಲ್ಲಿಗೆ ತಲುಪಬಹುದೆಂಬ ಆತಂಕ-ಭೀತಿ ಆವರಿಸಿದ್ದು ಮಾತ್ರವಲ್ಲದೆ ಸಮಸ್ಯೆಗಳ ಸುಳಿಗಳನ್ನು ನಾವೇ ಸೃಷ್ಟಿಸಿಕೊಂಡು ತಪ್ಪುಗಳನ್ನು ಬೇರೊಬ್ಬರ ಮೇಲೆ ಹಾಕುವ ಪ್ರಯತ್ನ ಇಂದಿನ ಸಮಾಜದ್ದು. ಪ್ರತಿಯೊಂದು ನಾಟಕಕ್ಕೂ ಎರಡೇ ಪಾತ್ರಗಳಿದ್ದು ಸಂಭಾಷಣೆಗಳು ಬೆಚ್ಚಿ ಬೀಳಿಸುತ್ತಿವೆ. ವಿಜ್ಞಾನ ತನ್ನ ಎಲ್ಲೆ ಮೀರಿದಾಗ ಸಂಭವಿಸುವ ದುರಂತಗಳು ಮಾನವೀಯತೆ ಕಳೆದುಕೊಂಡವುಗಳಾಗುತ್ತವೆ.

### ಉಜ್ವಲ ಕಿಡಿಗಳು (ಹಿಂದಿನ ಸ್ಫೂರ್ತಿದಾಯಕ ಭಾರತೀಯ ವಿಜ್ಞಾನಿಗಳು)

ಅರವಿಂದ್ ಗುಪ್ತ
**ಪುಟ : ೨೩೨**
**ಬೆಲೆ : ರೂ. ೧೫೦**
**ನವಕರ್ನಾಟಕ ಪ್ರಕಾಶನ** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೯೭, ಬೆಂಗಳೂರು - ೫೬೦ ೦೦೧



ಇಲ್ಲಿ ಪರಿಚಯಿಸಲ್ಪಟ್ಟ ೩೯ ಮಂದಿ ಜ್ಞಾನಿಗಳು ಹಾಗೂ ವಿಜ್ಞಾನಿಗಳೆಲ್ಲರೂ ಭಾರತೀಯರು. ಜ್ಞಾನದ ವಿವಿಧ ಶಾಖೆಗಳಲ್ಲಿ ಪ್ರಯೋಗನಿರತರಾಗಿದ್ದು, ಸಂಶೋಧನೆಗಳನ್ನು ಮಾಡಿ ಸಫಲರಾಗಿ ತಂತಮ್ಮ ಕ್ಷೇತ್ರದಲ್ಲಿ ಹೊಳೆಯುತ್ತ ನಿಂತಿರುವ ಆರದ ಕಿಡಿಗಳು. ಇಲ್ಲಿನ ವಿಜ್ಞಾನಿಗಳು, ವೈದ್ಯಕೀಯ ಸಂಶೋಧಕರು ಇತಿಹಾಸತಜ್ಞರು, ಭಾಷಾ ವಿಜ್ಞಾನಿಗಳು, ಪಕ್ಷಿತಜ್ಞರು ಎಲ್ಲರೂ ಅಭೂತಪೂರ್ವಕ ಸಾಧನೆಗೈದವರೇ, ಇಂದು ಇವರೆಲ್ಲರೂ ಭೌತಿಕವಾಗಿ ಕಣ್ಮರೆಯಾಗಿದ್ದರೂ ತಮ್ಮ ಸಾಧನೆಯ ಫಲವನ್ನು ನಮಗಾಗಿ ಬಿಟ್ಟು ಹೋದವರು. ಅಲ್ಲದೆ ನಾವಿಂದು ಹೆಜ್ಜೆಹೆಜ್ಜೆಗೂ ಅನುಭವಿಸುವ ಸುಖ-ಸೌಕರ್ಯಗಳಿಗೆ ಕಾರಣರಾಗಿದ್ದು ತನ್ಮೂಲಕ ನಮ್ಮ ಮನದಂಗಳದಲ್ಲಿ ನೆನಪಾಗಿ ಉಳಿದವರು. ಯಾವುದೇ ಆವಿಷ್ಕಾರದ ಹಿಂದೆ ಸಂಶೊಧಕರ, ವಿಜ್ಞಾನಿಗಳ ಕಠಿಣ ಶ್ರಮ ಮತ್ತು ಛಲ ಬಿಡದ ಪ್ರಯತ್ನ ಇದೆ. ಇವರೆಲ್ಲರೂ ನಮ್ಮ ಸಹ ಮಾನವರಾಗಿದ್ದು ನಮ್ಮಂತೆಯೇ ಬದುಕಿನ ಎಲ್ಲ ಕಷ್ಟಸುಖಗಳಿಗೆ ಸ್ಪಂದಿಸುತ್ತಲೇ ಹೊಸದನ್ನು ಅರಸುತ್ತಲೇ ಇದ್ದವರು. ವಿಶೇಷ ಪ್ರತಿಭೆಯಿಂದಲೋ, ಮಿಂಚಿನಂತೆ ಹೊಳೆದ ಒಂದು ವಿಷಯದ ಜಾಡನ್ನು ಹುಡುಕುತ್ತಲೋ, ಸಿಕ್ಕ ಅವಕಾಶವನ್ನು ಸದುಪಯೋಗ ಪಡಿಸಿಕೊಂಡೋ ಉನ್ನತ ಸ್ಥಾನಗಳಿಗೆ ಏರಿದವರು. ಇಂಥ ಪ್ರತಿಭೆಗಳನ್ನು ಈ ಪುಸ್ತಕವು ಅವರ ಸಾಧನೆಗಳ ಜೊತೆಜೊತೆಗೆ ಅವರ ಜೀವನ ಪಥವನ್ನೂ ಪರಿಚಯಿಸುತ್ತದೆ. ಪ್ರಯೋಗಶಾಲೆಗಳಾಚೆಗಿನ ಅವರ ಆಸಕ್ತಿ ಉತ್ಸಾಹಗಳನ್ನು ತಿಳಿಸುತ್ತದೆ. ಇಂದಿನ ಕಿರಿಯರಿಗೆ ಈ ಮಹನೀಯರ ಸಾಧನೆಗಳು ಸ್ಫೂರ್ತಿದಾಯಕವಾಗಬಲ್ಲವು. ಇದನ್ನು ಬರೆದ ಶ್ರೀ ಅರವಿಂದ್ ಗುಪ್ತ ವೈಜ್ಞಾನಿಕ ತಿಳಿವು ನೀಡುವ ಮಕ್ಕಳ ಆಟಿಕೆ ತಯಾರಿಕೆಗಾಗಿ ಪ್ರಸಿದ್ಧರು. ಸರಳವಾಗಿ ಮಕ್ಕಳಿಗೆ ವಿಜ್ಞಾನ ಬೋಧಿಸುವ ಹಲವು ಸಚಿತ್ರ ಪುಸ್ತಕಗಳನ್ನು ಸಹಾ ಇವರು ಬರೆದಿದ್ದಾರೆ.

## ಭಾರತೀಯ ಖಭೌತವಿಜ್ಞಾನದ ಪಿತಾಮಹ ಪ್ರೊ॥ ವೇಣು ಬಾಪು

*ಡಾ॥ ಎಂ. ಎಸ್. ಎಸ್. ಮೂರ್ತಿ*

**ಪುಟ : ೧೦೪** **ಬೆಲೆ : ರೂ. ೬೫**

**ನವಕರ್ನಾಟಕ ಪ್ರಕಾಶನ** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧

ನಾವೂ ತಲೆಯೆತ್ತಿ ಆಕಾಶ ನೋಡುತ್ತೇವೆ. ನಕ್ಷತ್ರಗಳನ್ನು ಎಣಿಸುತ್ತೇವೆ. ಆದರೆ ಅದನ್ನು ವಿಜ್ಞಾನಿಯೊಬ್ಬನ ಕಣ್ಣಿನಿಂದ ನೋಡಿದಾಗ ಅದಕ್ಕೆ ಸಾವಿರ ಪಟ್ಟು ಬೆಲೆ ಬರುತ್ತದೆ. ರಹಸ್ಯಗಳೆಲ್ಲ ಭೂಮಿಗಿಳಿದು ಬರುತ್ತವೆ. ಈ ಪುಸ್ತಕವು ಅಂಥ ಖ-ಭೌತ ವಿಜ್ಞಾನಿ ಪ್ರೊ॥ ವೇಣು ಬಾಪು ಅವರ ಜೀವನ - ಸಾಧನೆಗಳನ್ನು ಪರಿಚಯಿಸುತ್ತದೆ. ೧೯-೨೦ನೇ ಶತಮಾನದ ಆಕಾಶ ವೀಕ್ಷಣೆ ವಿಜ್ಞಾನ ಕ್ಷೇತ್ರದಲ್ಲಿ ತುಂಬ ಮಹತ್ವದ್ದಾಗಿದ್ದು ಹೊಸ ಹೊಸ ಆಕಾಶಕಾಯ - ಧೂಮಕೇತುಗಳಲ್ಲದೆ ದೂರ ಗಗನದಾಚೆಗೆ ನಮ್ಮ ಸೂರ್ಯನಿಗಿಂತಲೂ ಹಲವು ಪಟ್ಟು ದೊಡ್ಡದಾದ ನಕ್ಷತ್ರಗಳಿವೆಯೆಂದು ಪತ್ತೆಮಾಡಿ ಖಗೋಳದ ಭೌತಿಕ ನಿಯಮಗಳನ್ನು ಜಗತ್ತಿಗೆ ಪರಿಚಯಿಸಿತು. ಖ-ಭೌತ ವಿಜ್ಞಾನದ ಹೊಸ ಶಾಖೆ ಆರಂಭಗೊಂಡದ್ದು ವೇಣು ಬಾಪು ಅವರಂಥ ವಿಜ್ಞಾನಿಗಳಿಗೆ ಆಕಾಶದ ಹೆಬ್ಬಾಗಿಲನ್ನೇ ತೆರೆದಂತಾಯಿತು. ವಿಜ್ಞಾನಿಗಳೆಲ್ಲ ದೂರದರ್ಶಕ ನಿರ್ಮಿಸಿಕೊಂಡು ಆಕಾಶವನ್ನೆಲ್ಲ ಅಳೆಯಲಾರಂಭಿಸಿದರು. ಅಮೆರಿಕದ ಅಂದಿನ ಖ್ಯಾತ ಖಗೋಳ ವಿಜ್ಞಾನಿ ಶಾರ್ಲೋ ಶಾಪ್ಲಿ ಭಾರತಕ್ಕೆ ಉಪನ್ಯಾಸ ನೀಡಲು ಬಂದ ಸಂದರ್ಭವನ್ನು ಬಹು ಚೆನ್ನಾಗಿ ಸದುಪಯೋಗಪಡಿಸಿಕೊಂಡ ವೇಣು ಬಾಪು ಹಾರ್ವರ್ಡ್ ಕಾಲೇಜ್ ಅಬ್ಸರ್ವೇಟರಿಯನ್ನು ಸೇರಿ ವಿಶೇಷ ಪರಿಣತಿ ಪಡೆದರು. ಭಾರತಕ್ಕೆ ಮರಳಿ ನಕ್ಷತ್ರಗಳ ವರ್ಣಗೋಳ, ವುಲ್ಫ್-ರೇ ನಕ್ಷತ್ರಗಳ ರೋಹಿತ, ಆಕಾಶಗಂಗೆ-ಗೆಲಾಕ್ಸಿಗಳು, ಅಲ್ಲದೆ ಅಪರೂಪದ ಅತಿಥಿಯಾಗಿ ಕಾಣಿಸಿಕೊಳ್ಳುವ ಧೂಮ ಕೇತುಗಳ ಬಗ್ಗೆ ಅಧ್ಯಯನ ಮಾಡಿದರು. ಅಂದಿನ ಪ್ರಧಾನಿ ರಾಜೀವ್‌ಗಾಂಧಿ ರಾಷ್ಟ್ರಕ್ಕೆ ಸಮರ್ಪಿಸಿದ 'ವೇಣು ಬಾಪು ದೂರದರ್ಶಕ', 'ವೇಣು ಬಾಪು ಆಕಾಶ ವೀಕ್ಷಣಾಲಯ' ಕಾವಲೂರಿನಲ್ಲಿ ಸ್ಥಾಪಿತವಾದದ್ದು ವೇಣು ಬಾಪುಗೆ ನೀಡಿದ ಗೌರವವಾಗಿದೆ.



## ಗುರುದೇವ ಮತ್ತು ಮಹಾತ್ಮ (ಪತ್ರ ಸಂಚಯ)

*ಜಿ. ರಾಮನಾಥ ಭಟ್*

**ಪುಟ : 432** **ಬೆಲೆ : ರೂ. ೨೫೦**

**ನವಕರ್ನಾಟಕ ಪ್ರಕಾಶನ** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧

ಗುರುದೇವ (ರವೀಂದ್ರನಾಥ ಠಾಕೂರ್) ಮಹಾತ್ಮಾ (ಗಾಂಧೀಜಿ) ಇಬ್ಬರೂ ಭಾರತದ ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ಬ್ರಿಟಿಷರ ಆಳ್ವಿಕೆಯನ್ನು ಕೊನೆಗೊಳಿಸಲು ಶ್ರಮಿಸಿದ ಅಮರ ಚೇತನಗಳು. ಇಬ್ಬರೂ ಅಪ್ರತಿಮ ದೇಶಭಕ್ತರು, ಉಜ್ವಲ ರಾಷ್ಟ್ರಾಭಿಮಾನಿಗಳು. ಗಾಂಧೀಜಿಯವರದು ಸ್ವರಾಜ್ಯಕ್ಕಾಗಿ ಸತ್ಯಾಗ್ರಹ, ಅಹಿಂಸೆ, ಜನಾಂದೋಳನ ಮುಂತಾದ ರಾಜಕೀಯ ಮಾರ್ಗವಾದರೆ ರವೀಂದ್ರರದು ಕವಿಯಾಗಿ ಸಾಹಿತಿಯಾಗಿ ದೇಶಭಕ್ತಿಯನ್ನು ಜನರಲ್ಲಿ ಮೂಡಿಸುವಲ್ಲಿ ಅವರಿಗಿಂತ ಕಡಿಮೆಯದೇನೂ ಅಲ್ಲದ ಪಾತ್ರ. (ಗುರುದೇವರೆಂದು ಗಾಂಧೀಜಿಯವರಿಂದಲೇ ಗೌರವಿಸಲ್ಪಟ್ಟವರು ರವೀಂದ್ರರು.) ಇವರಿಬ್ಬರ ನಡುವೆ ಪತ್ರಗಳು ಮತ್ತು ಉತ್ತರಗಳು ನಿರಂತರವಾಗಿ ವಿನಿಮಯ ವಾಗುತ್ತಿದ್ದವು. ಇಬ್ಬರ ಚಿಂತನೆಗಳೂ ಬ್ರಿಟಿಷರ ಆಡಳಿತ ಕೊನೆಗೊಳಿಸಿ ಸ್ವರಾಜ್ಯ ಸ್ಥಾಪನೆ ಮಾಡುವುದರತ್ತ ಏಕತ್ರಗೊಂಡಿದ್ದವು. ಇಬ್ಬರ ನಡುವೆ ಅಲ್ಪಸ್ವಲ್ಪ ಭಿನ್ನಾಭಿಪ್ರಾಯಗಳಿದ್ದರೂ ಅವರೆಂದೂ ಅದನ್ನು ಬೆಳೆಸಿ ಮುನಿಸಿಕೊಂಡವರಲ್ಲ. ಇಲ್ಲಿನ ಪತ್ರವ್ಯವಹಾರವು ಇಬ್ಬರು ಪ್ರತಿಭಾಸಂಪನ್ನರು, ಪರಸ್ಪರ ಗೌರವ ಭಾವನೆ ಉಳ್ಳವರ ಮಧ್ಯೆ ನಡೆದಿದ್ದು ಸಹಜವಾಗಿಯೇ ಸ್ವದೇಶಾಭಿಮಾನ, ಸ್ವಾಭಿಮಾನ ಮತ್ತು ವಿದ್ಯಾವಿನಯ ಸಂಪನ್ನತೆ ಪ್ರತಿ ಸಾಲಿನಲ್ಲೂ ಕಾಣಿಸುತ್ತದೆ. ಅವರಿಬ್ಬರ ನಡುವಿನ ಚರಖಾ ವಿವಾದಗಳು, ಸ್ವದೇಶೀ ಚಳುವಳಿ ಅಂಗವಾಗಿ ವಿದೇಶಿ ಬಟ್ಟೆ ಸುಡುವುದನ್ನು ಒಪ್ಪದ ಠಾಕೂರರು ಗಾಂಧೀಜಿಗೆ ಛೇಡಿಸುತ್ತ ಬರೆದ ಪತ್ರ, ಸ್ನೇಹಕ್ಕೆ ಎರವಾಗದಂತೆ ಗಾಂಧೀಜಿಯವರಿಂದ ಅಷ್ಟೇ ಚಾಕಚಕ್ಯತೆಯಿಂದ ಬಂದ ಪ್ರತ್ಯುತ್ತರ ಇವೆಲ್ಲ ಇಬ್ಬರನ್ನೂ ಇನ್ನೂ ಹತ್ತಿರಕ್ಕೆ ತಂದ ಸಂಗತಿಗಳು. ಮೂಲದ ಎಲ್ಲ ಗಾಂಭೀರ್ಯವನ್ನುಳಿಸಿಕೊಂಡು ವಿದ್ವತ್ಪೂರ್ಣ ಭಾಷೆಗೆ ಸ್ವಲ್ಪವೂ ಕೊರತೆಯಾಗದಂತೆ ಕನ್ನಡಕ್ಕೆ ತರ್ಜುಮೆ ಮಾಡಿದವರು ಶ್ರೀ ಜಿ. ರಾಮನಾಥ ಭಟ್.

**– ಇಂದಿರಾಕುಮಾರಿ**
*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ*
*ಯಶವಂತಪುರ, ಬೆಂಗಳೂರು - ೨೨*

---

# ಸಾದರ ಸ್ವೀಕಾರ

**ಕೂಳೆ ಮತ್ತಿತರ ಕತೆಗಳು** ಹೊರೆಯಾಲ ದೊರೆಸ್ವಾಮಿ
**ಪುಟ : ೧೭೬** **ಬೆಲೆ : ರೂ. ೧೨೦**
**ಜ್ಯೋತಿ ಪ್ರಕಾಶನ,** ಎಮ್-೪೫
ಕರ್ನಾಟಕ ಬ್ಯಾಂಕ್ ರಸ್ತೆ, ವಿವೇಕಾನಂದ ಚೌಕದ ಸಮೀಪ
ಮೈಸೂರು - ೫೭೦ ೦೨೩

**ಜ್ಞಾನದೊಡನಾಡಿಗಳು** (ವ್ಯಕ್ತಿಚಿತ್ರಗಳು)
ಹೊರೆಯಾಲ ದೊರೆಸ್ವಾಮಿ
**ಪುಟ : ೨೪೦** **ಬೆಲೆ : ರೂ. ೧೫೦**
**ಅಂಬಾರಿ ಪ್ರಕಾಶನ,** ೧೨೩೮, ಮಹಡಿ, ೩ನೇ ಕ್ರಾಸ್,
ಗಂಗೆರಸ್ತೆ, ಕುವೆಂಪು ನಗರ, ಮೈಸೂರು - ೫೭೦ ೦೨೩

**ಸ್ವರ್ಗ ಹಾಗೂ ಮರ್ತ್ಯಗಳ ನಡುವೆ** (ಕವನ ಕಥನ)
ಡಾ॥ ಎಸ್. ವಿದ್ಯಾಶಂಕರ
**ಪುಟ : ೧೪೪** **ಬೆಲೆ : ರೂ. ೭೫**
**ಪ್ರಿಯದರ್ಶಿನಿ ಪ್ರಕಾಶನ,** ನಂ. ೧೩೮. ೭ನೇ 'ಸಿ'
ಮುಖ್ಯರಸ್ತೆ, ಹಂಪಿ ನಗರ, ಬೆಂಗಳೂರು - ೫೬೦ ೧೦೪

**ಸುರಭಿ, ಜಾರುಂದೀ ಮತ್ತು ಪೆಲತ್ತಂ**
(ಪ್ರೌಢ ಮಕ್ಕಳ ಕಾದಂಬರಿ) ಶಾಂತಾರಾಮ ಸೋಮಯಾಜಿ
**ಪುಟ : ೮೮** **ಬೆಲೆ : ರೂ. ೫೫**
**ಐಬಿಎಚ್ ಪ್ರಕಾಶನ,** ನಂ. ೯೭, ಪ್ರಧಾನ್ ರೆಸಿಡೆನ್ಸಿ
೨೪ನೇ ಕ್ರಾಸ್, ಜಯನಗರ ೩ನೇ ಬ್ಲಾಕ್ ಪೂರ್ವ
ಬೆಂಗಳೂರು - ೫೬೦ ೦೧೧

**ಶ್ರೀ ಸಿದ್ಧೇಶ್ವರೋಪನಿಷತ್** ಪಿ. ವಿಜಯಕುಮಾರ ಕಣಬರಗಿ
**ಪುಟ : ೮೦** **ಬೆಲೆ : ರೂ. ೭೫**
**ಹಳ್ಳಿಯ ಸಂದೇಶ,** ೨೩೩, 'ಕವಿರಶ್ಮಿ' ರಾಮತೀರ್ಥ ನಗರ
ಕಣಬರಗಿ, ಬೆಳಗಾವಿ

**ನೀ ಮರೆಯಾದ ಕ್ಷಣಗಳು** (ಪದ್ಯ ಸಂಕಲನ)
ಬಸವರಾಜ ಎಸ್. ಕಲೆಗಾರ
**ಪುಟ : ೭೬** **ಬೆಲೆ : ರೂ. ೫೦**
**ರಾಷ್ಟ್ರೀಯ ದೃಶ್ಯಕಲಾ ಅಕಾಡೆಮಿ,** ಧಾರವಾಡ - ೦೧

**ಕಲಹಾರಿಯ ಸಿಂಹ ಮತ್ತು ಮಾಂಟಿಸ್‌ನ ಪ್ರಾರ್ಥನೆ**
ಶಾಂತಾರಾಮ ಸೋಮಯಾಜಿ
**ಪುಟ : ೯೧** **ಬೆಲೆ : ರೂ. ೫೦**
**ವಸಂತ ಪ್ರಕಾಶನ,** ನಂ. ೩೬೦, ೧೦ನೇ 'ಬಿ' ಮುಖ್ಯರಸ್ತೆ
೩ನೇ ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೧೧

**ಗುಲಗಂಜಿ** (ಜನಮುಖಿ ಕವಿತೆಗಳು) ಅಲ್ಲಮಪ್ರಭು ಬೆಟ್ಟದೂರು
**ಪುಟ : ೬೦** **ಬೆಲೆ : ರೂ. ೩೦**
**ಶ್ರೀ ಸಿದ್ಧಲಿಂಗೇಶ್ವರ ಬುಕ್ ಡಿಪೋ ಮತ್ತು ಪ್ರಕಾಶನ,**
ಮುಖ್ಯಬೀದಿ, ಗುಲಬರ್ಗಾ - ೫೮೫ ೧೦೧

**ಸಾಹಸದ ಒಂದು ಸೀಮಾರೇಖೆ**
(ಮುರಾರಿರಾವ್ ಘೋರ್ಪಡೆ ಮತ್ತು ೧೮ನೆಯ ಶತಮಾನದ ಡೆಕ್ಕನ್)
ಎಂ. ವೈ. ಘೋರ್ಪಡೆ ಅನು : ಭಾರತೀ ಕಾಸರಗೋಡು
**ಪುಟ : ೧೮೦** **ಬೆಲೆ : ರೂ. ೧೨೫**
**ಅಭಿನವ ಪ್ರಕಾಶನ,** ಮೊದಲನೆ ಮುಖ್ಯರಸ್ತೆ,
ಮಾರೇನಹಳ್ಳಿ ಬೆಂಗಳೂರು - ೫೬೦ ೦೪೦




## ಲಿಬಿಯಾ ವಶ – ಸಿರಿಯ, ಇರಾನ್ ಮುಂದಿನ ಸರದಿ ?

ಅರಬ್ ಜಗತ್ತಿನಲ್ಲಿ ಸರ್ವಾಧಿಕಾರಿ ಆಡಳಿತಗಳು ಒಂದಾದ ಮೇಲೊಂದು ಉರುಳಿವೆ. ಲಿಬಿಯಾದ ಸರ್ವಾಧಿಕಾರಿ ಪತನ ಇತ್ತೀಚಿನದು. ನಿರಂಕುಶಾಧಿಕಾರದ ವಿರುದ್ಧ ಹೋರಾಡಿ ಅಧಿಕಾರಕ್ಕೇರಿದವರೇ ಕೊನೆಗೆ ಸರ್ವಾಧಿಕಾರಿಗಳಾಗಿ, ಭ್ರಷ್ಟರು, ಸ್ವಜನ ಪಕ್ಷಪಾತಿಗಳಾಗಿ, ಪ್ರಜಾಪೀಡಕರಾಗಿ ಅಂತ್ಯಗೊಂಡುದೀಗ ವಿಪರ್ಯಾಸ. ಸರದಿಯಂತೆ ಟ್ಯುನೀಷಿಯ, ನಂತರ ಈಜಿಪ್ಟ್, ಈಗ ಲಿಬಿಯಾಗಳಲ್ಲಿ ಜನಾಂದೋಳನ ಪ್ರಾರಂಭವಾಗಿ ಸರ್ವಾಧಿಕಾರಿ ಆಡಳಿತೆಗಳು ಕೊನೆಗೊಂಡಿದ್ದನ್ನು ಕಂಡಿದ್ದೇವೆ. ಆದರೆ ಲಿಬಿಯಾದ ಗಡಾಫಿಯ ಅಂತ್ಯ ಶೋಚನೀಯ. ಮಾನವಹಕ್ಕುಗಳ ರಕ್ಷಣೆಯ ಹೆಸರಿನಲ್ಲಿ ಎಲ್ಲ ಅಂತರರಾಷ್ಟ್ರೀಯ ನಿಯಮಗಳನ್ನು ಗಾಳಿಗೆ ತೂರಿ ಅಮೆರಿಕ ಮತ್ತು ಯೂರೋಪಿನ ರಾಷ್ಟ್ರಗಳು ದುರಾಕ್ರಮಣ ನಡೆಸಿದ ಮೊದಲ ದೇಶ ಲಿಬಿಯಾ. ಈ ಮೊದಲು ಈ ರಾಷ್ಟ್ರಗಳ ಭಯೋತ್ಪಾದನೆಯ ವಿರುದ್ಧ ಸಮರದ ಹೆಸರಿನಲ್ಲಿ ಅಫ್ಘಾನಿಸ್ತಾನದ ಮೇಲೆ, ಭಯೋತ್ಪಾದನೆ ಮತ್ತು ನ್ಯೂಕ್ಲಿಯರ್ ಅಸ್ತ್ರ ಉತ್ಪಾದನೆ ಹೆಸರಿನಲ್ಲಿ ಇರಾಕಿನ ಮೇಲೆ ದುರಾಕ್ರಮಣ ನಡೆಸಿದುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಮೂರೂ ರಾಷ್ಟ್ರಗಳಲ್ಲಿ ಆಡಳಿತದ ವಿರುದ್ಧದ ಆಂದೋಳನದ ಪ್ರಾರಂಭ ಒಂದೇ ಮಾದರಿಯಾಗಿ ಕಂಡರೂ ಅದರಲ್ಲಿ ನಿರ್ದಿಷ್ಟ ದಿಕ್ಕುದೆಸೆ ಇಲ್ಲದಿದ್ದುದು ಎದ್ದುಕಾಣುತ್ತದೆ. ಅದರಿಂದಾಗಿಯೇ ಬೆಂಬಲದ ಹೆಸರಿನಲ್ಲಿ ಪಾಶ್ಚಾತ್ಯ ದೇಶಗಳು ಪ್ರವೇಶಿಸಲು ಅನುವಾಯಿತು ಮತ್ತು ಅವುಗಳಿಗೆ ಒಂದು ನೆಲೆ ಕಂಡುಕೊಳ್ಳಲು ಅವಕಾಶವಾಯಿತು. ಈ ರಾಷ್ಟ್ರಗಳು ಸ್ವತಂತ್ರವಾಗಿ ಉದ್ಭವಿಸಿದ್ದು, ವಸಾಹತುಶಾಹಿಯ ವಿರುದ್ಧ ಕಳೆದ ಶತಮಾನದ ನಡುವಿನಲ್ಲಿ ಹೋರಾಟ ನಡೆಸಿವೆ. ಆದರೆ ಈಗ ಸಂಭವಿಸಿರುವ ಘಟನೆಗಳನ್ನು ಅವಲೋಕಿಸಿದರೆ ಇವು ಮತ್ತೆ ಅದೇ ಸಾಮ್ರಾಜ್ಯಶಾಹಿಗಳ ಬಲೆಗೆ ಬೀಳುತ್ತಿವೆ ಎನ್ನಿಸುತ್ತದೆ. ತೈಲ ರಾಜಕಾರಣದ ದುರಾಸೆಯೇ ಇದರ ಹಿನ್ನೆಲೆ. ಈಗಾಗಲೇ ಪಾಶ್ಚಾತ್ಯ ತೈಲ ಕಂಪೆನಿಗಳು ಹೊಸ ಒಪ್ಪಂದಗಳನ್ನು ಮಾಡಿಕೊಳ್ಳತೊಡಗಿವೆ. ಅಮೂಲ್ಯವಾದ ನಿಕ್ಷೇಪಗಳನ್ನು ವಶಪಡಿಸಿಕೊಳ್ಳಲು ಹವಣಿಸುತ್ತಿವೆ.

ಮುಮ್ಮರ್ ಗಡಾಫಿ ಅಧಿಕಾರಕ್ಕೇರಿದ್ದು ದೊರೆ ಇದ್ರಿಸ್‌ನ ನಿರಂಕುಶಾಡಳಿತದ ವಿರುದ್ಧ ಸಂಚು ನಡೆಸಿ. ಈ ಸೇನಾಕ್ರಾಂತಿ ನಡೆದಾಗ ಗಡಾಫಿ ಇಪ್ಪತ್ತೇಳು ವಯಸ್ಸಿನ ತರುಣ ಕ್ಯಾಪ್ಟನ್. ಅಂದು ಜನಪ್ರಿಯವಾಗಿದ್ದ ಸಮಾಜವಾದದ ಹೆಸರಿನಲ್ಲಿ ಸುಧಾರಣೆಗಳನ್ನು ಜಾರಿಗೆ ತಂದ ಈತ ಕಾಲಕ್ರಮೇಣ ಬಣ್ಣ ಬದಲಿಸಿದ್ದು ಒಂದು ರೋಚಕ ಕತೆ. ಒಂದು ಕಾಲದಲ್ಲಿ ಪಶ್ಚಿಮ ರಾಷ್ಟ್ರಗಳಿಂದ ಭಯೋತ್ಪಾದಕನ ಬಿರುದು ಪಡೆದಿದ್ದ ಗಡಾಫಿ ಹೊಸ ಶತಮಾನದಲ್ಲಿ ಅದರ ವಿರುದ್ಧ ಹೋರಾಟದಲ್ಲಿ ಮಂಚೂಣಿಯಲ್ಲಿ ಕಾಣಿಸಿಕೊಂಡ; ಪಾಶ್ಚಾತ್ಯ ದೇಶಗಳ ಮಿತ್ರನೆನಿಸಿಕೊಂಡ. ಈ ಕಸರತ್ತನ್ನೆಲ್ಲ ನಡೆಸಿದ ಗಡಾಫಿಯ ಹತ್ಯೆ ಘೋರ. ಅವನ ಜೊತೆ ಸಾವನ್ನಪ್ಪಿದ ಅನುಯಾಯಿಗಳು ೫೩ ಮಂದಿ. ಗಡಾಫಿ ಬದುಕಿ ಉಳಿದು ವಿಚಾರಣೆಗೆ ಗುರಿಯಾಗಿದ್ದರೆ ಅನೇಕ ರಹಸ್ಯಗಳು ಹೊರಬೀಳುತ್ತಿದ್ದುವೇನೊ. ಆಂದೋಳನದ ನೇತೃತ್ವ ವಹಿಸಿದ ರಾಷ್ಟ್ರೀಯ ಪರಿವರ್ತನಾ ಮಂಡಳಿಯಲ್ಲಿರುವ ಅನೇಕರು ಅಮೆರಿಕದ ಗೂಢಚರ್ಯೆ ಸಂಸ್ಥೆ ಸಿ.ಐ.ಎ.ಯ ಸಂಪರ್ಕದಲ್ಲಿರುವವರು ಎಂದು ಗುರ್ತಿಸಲ್ಪಟ್ಟಿದ್ದಾರೆ. ಅದೇನೇ ಇರಲಿ, ಜನಾಂದೋಳನದ ಸಮಯದಲ್ಲಿ ನ್ಯಾಟೋ ರಾಷ್ಟ್ರಗಳು ನಡೆದುಕೊಂಡ ರೀತಿ ಹೀನವಾದ್ದು, ಖಂಡನೀಯವಾದ್ದು ಹಾಗೂ ವಿಶ್ವಸಂಸ್ಥೆಯ ನಿರ್ಣಯದ ಸ್ಪಷ್ಟ ಉಲ್ಲಂಘನೆ. ಜನಾಂದೋಳನದ ಇದಿರಿನಲ್ಲಿ ಅಧಿಕಾರಕ್ಕಂಟಿದ ಗಡಾಫಿ ಕೈಗೊಂಡ ದಬ್ಬಾಳಿಕೆ ಕ್ರಮಗಳು, ದೇಶದಲ್ಲಿ ಉಂಟಾದ ಅಂತರ್ಯುದ್ಧದ ಪರಿಸ್ಥಿತಿ ನ್ಯಾಟೋ ದೇಶಗಳಿಗೆ ಹಸ್ತಕ್ಷೇಪ ನಡೆಸಲು ನೆಪವಾಯಿತು. ಪ್ರಾರಂಭದಲ್ಲಿ ಹಣಕಾಸಿನ ಬೆಂಬಲ ಮತ್ತು ಶಸ್ತ್ರಾಸ್ತ್ರಗಳ ನೆರವು ನೀಡುತ್ತಿದ್ದ ರಾಷ್ಟ್ರಗಳು ಗಡಾಫಿ ಸೈನಿಕರ ದಾಳಿಯಿಂದ ಜನರನ್ನು ರಕ್ಷಿಸುವ ಹೆಸರಿನಲ್ಲಿ ನ್ಯಾಟೋ ರಾಷ್ಟ್ರಗಳು ರಾಜಧಾನಿ ಟ್ರಿಪೋಲಿ ಮೇಲೆ ಬಾಂಬ್ ದಾಳಿ ನಡೆಸಿದುವು. ೨೬,೦೦೦ ಬಾಂಬು ದಾಳಿಯಲ್ಲಿ ಗಡಾಫಿಯ ಸಮೀಪವರ್ತಿಗಳು, ಮಕ್ಕಳು ಮೊಮ್ಮಕ್ಕಳ ಜೊತೆಗೆ ಸುಮಾರು ೩೦,೦೦೦ಕ್ಕೂ ಹೆಚ್ಚು ಮಂದಿ ಲಿಬಿಯಾ ನಾಗರಿಕರು ಹತರಾದರೆಂದು ಅಂದಾಜು. ಹೆಚ್ಚು ಕಡಿಮೆ ಮೂರು ಲಕ್ಷ ಜನ ನೆರೆಯ ರಾಷ್ಟ್ರಗಳಿಗೆ ವಲಸೆ ಹೋಗಿದ್ದಾರೆಂದು ತಿಳಿದುಬಂದಿದೆ.

ಲಿಬಿಯಾದ ಕತೆ ಮುಗಿಸಿದ ಮೇಲೆ ಪಾಶ್ಚಾತ್ಯ ದೇಶಗಳ, ಮುಖ್ಯವಾಗಿ ಅಮೆರಿಕದ ಕೆಂಗಣ್ಣು ಈ ಭೂಭಾಗದ ಸಿರಿಯ ಮತ್ತು ಇರಾನ್‌ಗಳ ಕಡೆಗೆ ಹರಿದಿದೆ. ಸಿರಿಯಾದಲ್ಲಿ ಈಗಾಗಲೇ ಅಧ್ಯಕ್ಷ ಬಷಾರ್ ಅಲ್-ಅಸ್ಸಾದ್ ಆಡಳಿತೆಯ ವಿರುದ್ಧವಾಗಿ ಜನತೆ ಹೋರಾಟ ನಡೆಸುತ್ತಿದ್ದಾರೆ. ಜನತೆಯ ಆಂದೋಳನವನ್ನು ಹತ್ತಿಕ್ಕಲು ಅಸ್ಸಾದ್ ತೀವ್ರವಾದ ದಬ್ಬಾಳಿಕೆ ನಡೆಸುತ್ತಿದ್ದಾರೆ. ಈಗಾಗಲೇ ೩,೦೦೦ ಮಂದಿ ಅಮಾಯಕರು ಸಾವಿಗೀಡಾಗಿರುವರೆಂದು ವಿಶ್ವಸಂಸ್ಥೆಯ ಅಂದಾಜು. ಅಮೆರಿಕ ಮತ್ತು ಯೂರೋಪಿನ ರಾಷ್ಟ್ರಗಳು ಅಧಿಕಾರ ತ್ಯಜಿಸುವಂತೆ ಅಧ್ಯಕ್ಷ ಅಸ್ಸಾದ್ ಮೇಲೆ ಒತ್ತಾಯ ತರುತ್ತಿವೆ, ಹಸ್ತಕ್ಷೇಪ ಮಾತ್ರ ಬಾಕಿ ಇದೆ. ಇನ್ನು ಇರಾನಿನ ಮೇಲೆ ನ್ಯೂಕ್ಲಿಯರ್ ಅಸ್ತ್ರ ತಯಾರಿಕೆಯ ಮಿಥ್ಯಾರೋಪ ಹೊರಿಸಿ ಅಮೆರಿಕ ದಾಳಿ ನಡೆಸಲು ತುದಿಗಾಲ ಮೇಲೆ ನಿಂತಿದೆ. ಅಮೆರಿಕದ ಅಧ್ಯಕ್ಷ ಬರಾಕ್ ಒಬಾಮಾ ಈಗಾಗಲೇ ಇರಾನ್‌ಗೆ ಹಲವು ಬಾರಿ ಎಚ್ಚರಿಕೆ ನೀಡಿದ್ದಾರೆ. ಸಿರಿಯಾ, ಇರಾನ್‌ಗಳು ಬಿದ್ದರೆ ಅಮೆರಿಕದ ದುರಾಲೋಚನೆ ಈ ಪ್ರದೇಶದಲ್ಲಿ ಕೈಗೂಡಿದಂತೆಯೇ. ಅಪಾರವಾದ ತೈಲ ಸಂಪತ್ತನ್ನು, ಖನಿಜ ಸಂಪತ್ತನ್ನೂ ಹೊಂದಿರುವ ಪಶ್ಚಿಮ ಏಶಿಯಾದ ಮೇಲೆ ಸ್ವಾಮ್ಯ ಸಾಧಿಸುವುದು ಅಮೆರಿಕದ ಹೆಬ್ಬಯಕೆ. ಜಗತ್ತಿನ ಮೇಲೆ ಅದರ ಅಧಿನಾಯಕತ್ವ ಸ್ಥಾಪಿಸಲು ಈ ಪ್ರದೇಶದ ಮೇಲೆ ಹತೋಟಿ ಮುಖ್ಯವಾದ ಮೆಟ್ಟಿಲು.

ಸೀಯಾರ್ಕೆ

## ನೇಪಾಳ : ಸುಸ್ಥಿರತೆಯತ್ತ ಹೆಜ್ಜೆ

ಹಿಮಾಲಯದ ನೆರೆರಾಜ್ಯ ನೇಪಾಳ ಮೂರು ವರ್ಷಗಳ ನಂತರ ಹೊಸ ಹಾದಿಯಲ್ಲಿ ಮುಂದುವರಿಯಲು ನಿಶ್ಚಯಿಸಿದೆ. ರಾಜಸತ್ತೆಯನ್ನು ನಿರ್ಮೂಲಗೊಳಿಸಿದ ನಂತರ ಹೊಸ ಸಂವಿಧಾನವನ್ನು ರಚಿಸಿ, ಚುನಾವಣೆಗಳನ್ನು ನಡೆಸುವುದು ಕಗ್ಗಂಟಾಗಿತ್ತು. ರಾಜಶಾಹಿಯ ವಿರುದ್ಧವಾಗಿ ಸಶಸ್ತ್ರ ಹೋರಾಟವನ್ನು ನಡೆಸುತ್ತಿದ್ದು, ನಾಡಿನಲ್ಲಿ ಪ್ರಾಬಲ್ಯ ಹೊಂದಿದ್ದ ಮಾವೋವಾದಿ ಕಮ್ಯುನಿಸ್ಟರು ಇತರ ರಾಜಕೀಯ ಪಕ್ಷಗಳೊಂದಿಗೆ, ಮುಖ್ಯವಾಗಿ ನೇಪಾಳಿ ಕಾಂಗ್ರೆಸ್ಸಿನ ಜೊತೆಗೆ ೨೦೦೬ರಲ್ಲಿ ಮಾಡಿಕೊಂಡ ಒಪ್ಪಂದ ದೇಶದಲ್ಲಿ ಹೊಸ ದಿಶೆಯನ್ನು ತೆರೆಯಿತು. ಮಾವೋವಾದಿ ನಾಯಕ ಪ್ರಚಂಡ ನೇತೃತ್ವದಲ್ಲಿ ಮಾಡಿಕೊಳ್ಳಲಾದ ಹನ್ನೆರಡು ಅಂಶಗಳ ಒಪ್ಪಂದ ಮಾವೋವಾದಿಗಳನ್ನು ರಾಜಕೀಯ ಮುಖ್ಯವಾಹಿನಿಗೆ ತಂದುದಲ್ಲದೆ, ಸಶಸ್ತ್ರ ಆಂದೋಳನ ಅಂತ್ಯಗೊಂಡು ದೇಶದಲ್ಲಿ ಶಾಂತಿಸ್ಥಾಪನೆಗೆ ಅನುವು ಮಾಡಿಕೊಟ್ಟಿತು. ಇದರ ನಂತರ ದೇಶದಲ್ಲಿ ರಾಜಶಾಹಿಯ ಅಂತ್ಯ, ಚುನಾವಣೆಗಳಲ್ಲಿ, ಮಾವೋವಾದಿಗಳ ಭಾಗವಹಿಸುವಿಕೆ, ಗಳಿಸಿದ ವಿಜಯ ಎಲ್ಲ ಈಗ ಇತಿಹಾಸ. ದೇಶಕ್ಕೆ ಹೊಸ ಸಂವಿಧಾನವೊಂದನ್ನು ರೂಪಿಸಿ, ಪ್ರಜಾಪ್ರಭುತ್ವದಡಿಯಲ್ಲಿ ಚುನಾವಣೆಗಳನ್ನು ನಡೆಸಿ ಸುಸ್ಥಿರ ಸರಕಾರವನ್ನು ಸ್ಥಾಪಿಸುವ ಕನಸು ಮಾತ್ರ ದೂರವೇ ಉಳಿಯಿತು.

ಮುಖ್ಯವಾಗಿ ಇದಕ್ಕೆ ಕಾರಣ ಮಾವೋವಾದಿಗಳು ಮತ್ತು ಇತರ ಪ್ರಮುಖ ರಾಜಕೀಯ ಪಕ್ಷಗಳ ನಡುವೆ ವಿಶ್ವಾಸದ ಕೊರತೆ. ಇನ್ನೊಂದು ವಿವಾದಿತ ಪ್ರಶ್ನೆ ಸಶಸ್ತ್ರ ಹೋರಾಟದಲ್ಲಿ ನಿರತವಾಗಿದ್ದ ಮಾವೋವಾದಿ ಸೈನಿಕರ ಭವಿಷ್ಯ. ನೇಪಾಳಿ ಕಾಂಗ್ರೆಸ್ ಮತ್ತು ದೇಶದ ಸೇನೆ ಮಾವೋವಾದಿ ಸೇನೆಯ ವಿಸರ್ಜನೆಗೆ ಪಟ್ಟು ಹಿಡಿದಿತ್ತು. ಆದರೆ ಮಾವೋವಾದಿ ನಾಯಕರು ಇವರನ್ನು ಮುಖ್ಯವಾಹಿನಿಗೆ ತಂದು ಸೇನೆಯಲ್ಲಿ ಭರ್ತಿಮಾಡಿಕೊಳ್ಳಬೇಕೆಂದೂ, ಇವರ ಪೈಕಿ ನಿವೃತ್ತರಾಗುವವರಿಗೆ ಪರಿಹಾರ ನೀಡಬೇಕೆಂದೂ

(೫೨ನೇ ಪುಟಕ್ಕೆ)

# ಬಾಂಗ್ಲಾ ಗಡಿಯಲ್ಲಿ ಧ್ವಜಾವರೋಹಣ

ಅಮೃತಸರದ ಬಳಿ ವಾಘಾ ಬಾರ್ಡರ್‌ನಲ್ಲಿ ಭಾರತ ಪಾಕಿಸ್ತಾನದ ಧ್ವಜಾವರೋಹಣ ನೋಡಿದ್ದೆ. ಪಾಕಿಸ್ತಾನ, ಭಾರತ – ಈ ಎರಡೂ ದೇಶಗಳ ನಾಗರಿಕರು ವಾಘಾ ಬಾರ್ಡರ್‌ನ ಎರಡೂ ಭಾಗಗಳಲ್ಲಿ ಭಾರಿ ಸಂಖ್ಯೆಯಲ್ಲಿ ಸೇರಿದ್ದರು. ತೀವ್ರ ಭಾವಾವೇಶ ಎರಡೂ ಭಾಗದ ಸೈನಿಕರಲ್ಲಿ ಮಾತ್ರವಲ್ಲ, ನಾಗರಿಕರಲ್ಲೂ ಇತ್ತು. ಯುದ್ಧರಂಗವೋ ಎಂಬಂತೆ ಸೈನಿಕರು ಜನರನ್ನು ಹುರಿದುಂಬಿಸುತ್ತಿದ್ದರು. ಒಂದೆಡೆ 'ಬೋಲೋ ಭಾರತಮಾತಾ ಕೀ ಜೈ' ಎಂದೂ ಮತ್ತೊಂದೆಡೆ 'ಬೋಲೋ ಪಾಕಿಸ್ತಾನ ಕೀ ಜೈ' ಎಂದೂ ಎರಡೂ ಕಡೆಯ ನಾಗರಿಕರನ್ನು ಎರಡೂ ಕಡೆಯ ಸೈನಿಕರನ್ನು ಹುರಿದುಂಬಿಸುತ್ತಿದ್ದರು. ಅಲ್ಲಿಯ ಪರಿಸರವೇ ನೋವು ನಲಿವಿನ ಮಿಶ್ರಭಾವ. ಕೆಲವರಿಗೆ ಉಗ್ರಭಾವ. ಗೇಟ್‌ನ ಹೊರಗಡೆ ಸಾಲುಗಟ್ಟಿ ನಿಂತ ಲಾರಿಗಳು. ಸೈನಿಕರೋ ಬಹಳ ಕಟ್ಟುನಿಟ್ಟು. ಒಂದು ಮಿತಿಯವರೆಗೆ ಮಾತ್ರ ನಾಗರಿಕರಿಗೆ ಪ್ರವೇಶ.

ನನಗೆ ಬಾಂಗ್ಲಾ ಗಡಿಗೂ ಹೋಗಿ ಆ ಭಾಗದ ಧ್ವಜಾವರೋಹಣ ನೋಡುವ ಆಸೆ ವಾಘಾದಲ್ಲಿಯೇ ಕುಡಿಯೊಡೆದಿತ್ತು. ಅದು ಸಾಕಾರಗೊಂಡಿದ್ದು ೨೦೧೧ರ ಸೆಪ್ಟೆಂಬರ್ ೨೯ರಂದು.

ಬಾಂಗ್ಲಾ, ಎಲ್.ಒ.ಸಿ.ಯಲ್ಲಿ ಎರಡೂ ಕಡೆ ಗೇಟ್ ಇಲ್ಲ. ಆ ಭಾಗದಲ್ಲಿ ಟ್ರಾಫಿಕ್ ನಿಲ್ಲಿಸಲು ಮಾಡಿದ ತಡೆಕೋಲು ಇದೆ. ಅದರ ಮೇಲೆ 'ವಂದನೆಗಳು, ಮತ್ತೆ ಬನ್ನಿ' ಎಂದು ಇಂಗ್ಲಿಷ್‌ನಲ್ಲಿ ಬರೆದಿತ್ತು. ಅದರ ಬಳಿ ಆಳೆತ್ತರದ ಒಂದು ಸಿಮೆಂಟ್ ಸ್ತಂಭದ ಮೇಲೆ 'ಇಂಡಿಯಾ ಭಾರತ್' ಎಂದು ಬರೆದಿತ್ತು. ಅದರಾಚೆ ೧೦ ಅಡಿ ದೂರದಲ್ಲಿ 'ಬಾಂಗ್ಲಾ' ಎಂದು ಅಷ್ಟೇ ಎತ್ತರದ ಸ್ತಂಭದ ಮೇಲೆ ಬರೆದಿತ್ತು. ಆ ಭಾಗದ ರಸ್ತೆಯಲ್ಲೂ ತಡೆಕೋಲು ಇತ್ತು. ಡಾಮರ್ ರಸ್ತೆ ಬಾಂಗ್ಲಾ, ಭಾರತ ಎಂಬ ಭೇದ ಮಾಡದೆ ಮುಂದೆ ಸಾಗುತ್ತಿತ್ತು. ಬಾಂಗ್ಲಾ ಕಡೆಯವರು ಯಾರು, ಭಾರತದ ಕಡೆಯವರು ಯಾರು ಎಂದು ತಿಳಿಯುತ್ತಿರಲಿಲ್ಲ.

ಅಲ್ಲಿ ಇರುವವರನ್ನೇ ವಿಚಾರಿಸಿದರೆ "ನಾನು ಬಾಂಗ್ಲಾದವ, ಇವರು ಬಾಂಗ್ಲದವರು" ಎಂದ ಒಬ್ಬ. ಅವರಲ್ಲಿ ಹೆಚ್ಚಿನವರು ಬಾಂಗ್ಲಾ ಪ್ರಜೆಗಳು. "ಎಲ್ಲಿಂದ ಬಾಂಗ್ಲಾ ಆರಂಭ" ಎಂದು ಕೇಳಿದೆ. ಈ ಸ್ತಂಭದಿಂದ ಬಾಂಗ್ಲಾ ಆರಂಭ ಎಂದ ಬಾಂಗ್ಲಾ ಪ್ರಜೆ. ಬಾಂಗ್ಲಾ ಸ್ತಂಭಕ್ಕೂ ಭಾರತ ಸ್ತಂಭಕ್ಕೂ ನಡುವೆ ನೋ ಮ್ಯಾನ್ಸ್ ಲ್ಯಾಂಡ್.

ಬಾಂಗ್ಲಾ ಪ್ರಜೆಯೊಂದಿಗೆ ಬಾಂಗ್ಲಾ ಸ್ತಂಭದ ಮುಂದೆ ನಿಂತು ಫೋಟೋ ತೆಗಿಸಿಕೊಂಡೆವು. ಆತ ತಾನೊಬ್ಬ ವ್ಯಾಪಾರಿ ಅಂದ. ಅವನ ಹೆಸರು ಶಬೀರ್. ಲಾರಿಗಳ ಮೂಲಕ ಭಾರತಕ್ಕೆ ಸರಕು ಸಾಗಣೆ ಮಾಡುವುದು ಅವನ ವೃತ್ತಿ. "ಬಾಂಗ್ಲಾದಿಂದ ಭಾರತಕ್ಕೆ ಲಾರಿಗಳ ಮೂಲಕ ಮೀನು ಮಾರಾಟ ಮಾಡುತ್ತೇವೆ. ಇಲ್ಲಿಗಿಂತ ಬಾಂಗ್ಲಾದಲ್ಲಿ ಮೀನಿಗೆ ಬೆಲೆ ಅಧಿಕ. ಆದರೆ ಸಗಟು ವ್ಯಾಪಾರ ಎಂದು ನಾವು ಭಾರತದಲ್ಲಿ ಮಾರಾಟ ಮಾಡಲು ಆಸಕ್ತಿ ವಹಿಸುತ್ತೇವೆ" ಎಂದ. ಈ ಭಾಗದಲ್ಲಿ ಮೀನಿನ ವಾಸನೆ ಸಾಕಷ್ಟು ಇತ್ತು. "ನಿಮ್ಮ ಮಂಗಳೂರಿನ ಮೀನು ಮಾರುಕಟ್ಟೆಯ ರೀತಿ ವಾಸನೆ ಬರುತ್ತದೆ" ಎಂದರು ನನ್ನೊಂದಿಗೆ ಬಂದಿದ್ದ ಶಕುಂತಳ. ಆಕೆ ಹೇಳಿದ್ದರಲ್ಲಿ ಉತ್ಪ್ರೇಕ್ಷೆ ಇರಲಿಲ್ಲ. ಶಬೀರ್ ನಮ್ಮ ಫೋಟೋವನ್ನೂ ಕ್ಲಿಕ್ಕಿಸಿದ. ನಾವು ವಾಘಾ ಬಾರ್ಡರ್‌ಗೆ ಹೋಗಿ ಬಂದವರು ಎಂದು ತಿಳಿದಾಗ ಶಬೀರ್ ನುಡಿದ, "ಇಲ್ಲಿ ನೀವು ವಾಘಾ ಬಾರ್ಡರ್‌ನ ಭಾವನೆಗಳನ್ನು ನಿರೀಕ್ಷಿಸಬೇಡಿ. ಇಲ್ಲಿ ಎರಡೂ ಭಾಗದವರು ಬಹಳ ಶಾಂತ ರೀತಿಯಿಂದ ಧ್ವಜಾವರೋಹಣ ಮಾಡುತ್ತೇವೆ. ನೋಡಲು ಬಂದ ಜನಸಮೂಹವೂ ಅಷ್ಟೇ ಶಾಂತ ರೀತಿಯಲ್ಲಿ ಇರುತ್ತದೆ" ಎಂದು "ಎಷ್ಟೆಂದರೂ ನಾವೆಲ್ಲ ಒಂದೇ. ನಾವು ಬಂಗಾಲಿಗಳು. ಇವರೂ ಬಂಗಾಲಿಗಳೇ" ಎಂದ ಆಪ್ತತೆಯಿಂದ.

**ಡಾ|| ಇಂದಿರಾ ಹೆಗ್ಗಡೆ**

ಸಂಜೆ ೫ ಗಂಟೆಗೆ ಧ್ವಜಾವರೋಹಣ. ಆಗಲೇ ಸೂರ್ಯ ಕಂತುತ್ತಿದ್ದ ಬಾಂಗ್ಲಾ ದೇಶದತ್ತ.

ಧ್ವಜಾವರೋಹಣಕ್ಕೆ ಸ್ವಲ್ಪ ಸಮಯ ಇತ್ತು. ನಾವು ನಿಂತೇ ಇದ್ದೆವು. ಬಾರ್ಡರ್ ಸೆಕ್ಯೂರಿಟಿ ಫೋರ್ಸ್‌ನ ಸಿಪಾಯಿ ಕುರ್ಚಿಯನ್ನು ತಂದುಹಾಕಿ ನಮಗೆ ಕೂರಲು ವಿನಂತಿಸಿದ. ಅಸರು (ಕುಡಿಯಲು) ನೀಡಿ ಸತ್ಕರಿಸಿದ. ಅದಕ್ಕೂ ಮೊದಲು ಹೆಗ್ಡೆಯವರು ತಮ್ಮ ಸೈನಿಕ ಹಿನ್ನೆಲೆಯ ಬಗ್ಗೆ ಹೇಳಿದ್ದರಂತೆ. "ಆತ ತನ್ನ ಸೀನಿಯರ್‌ಗೆ ಹೇಳಿರಬೇಕು. ಆತನ ಆದೇಶ ಇಲ್ಲದೆ ಅವರ ಸ್ಥಳದಲ್ಲಿ ನಮಗೆ ಆಸನ ಪೂರೈಸಲಾರ" ಎಂದರು ಹೆಗ್ಡೆಯವರು.

ಪಥಚಲನಕ್ಕೆ ಸಿದ್ಧತೆಯಾದಾಗ ನಮ್ಮನ್ನು ಆ ಭಾಗಕ್ಕೆ ಕರೆದರು. ಇದುವರೆಗೆ ಬಾಂಗ್ಲಾದವರು ಯಾರು, ಭಾರತೀಯರು ಯಾರು ಎಂದು ನಮಗೆ ಗುರುತಿಸಲು ಆಗಿರಲಿಲ್ಲ. ಈಗ ಬಾಂಗ್ಲಾದವರು ಆ ಭಾಗದಲ್ಲಿ, ಭಾರತೀಯರು ಈ ಭಾಗದಲ್ಲಿ ನಿಂತಿದ್ದರು. ಪಥಚಲನ ಆರಂಭವಾಯಿತು. ಮೊದಲು ಭಾರತದ ಸೈನಿಕರು, ಅನಂತರ ಬಾಂಗ್ಲಾ. ಹೀಗೆ ಪಥಚಲನದ ಎಲ್ಲಾ ಹಂತಗಳೂ ಮುಂದುವರಿದುವು. ಹಾಗೆಯೇ ಧ್ವಜಾವರೋಹಣ. ಇಲ್ಲಿಯ ಪಥಚಲನದ ಅಧಿಕಾರಿ ಆದೇಶ ನೀಡಿದ. ಅದರಂತೆ ಪಥಚಲನ ಮುಗಿಸಿದ ಮೇಲೆ ಬಾಂಗ್ಲಾದ ಪಥಚಲನದ ಅಧಿಕಾರಿ ಆದೇಶ ನೀಡುತ್ತಿದ್ದ. ಧ್ವಜಾವರೋಹಣ ವಾಘಾ ಬಾರ್ಡರ್‌ನ ರೀತಿಯಲ್ಲಿಯೇ ನಡೆಯಿತು. ನಾವು ಕೆಲವೇ ಮಂದಿ ನಾಗರಿಕರು ಬಾರ್ಡರ್ ಸೆಕ್ಯೂರಿಟಿ ಫೋರ್ಸ್ ಜೊತೆಯಲ್ಲಿಯೇ ನಿಂತು ಈ ಕ್ರಿಯೆಗಳನ್ನು ವೀಕ್ಷಿಸುತ್ತಿದ್ದೆವು.

ಧ್ವಜಾವರೋಹಣ ಮುಗಿದ ಮೇಲೆ ಸುಬೇದಾರ್ ನಮ್ಮನ್ನು ಕುಳ್ಳಿರಿಸಿ ಮಾತಿಗೆಳೆದರು. ಟೀ ಕೊಟ್ಟು ಸತ್ಕರಿಸಿದರು. ಅಷ್ಟರಲ್ಲಿ ಸೂಟ್‌ಕೇಸ್ ಎಳೆಯುತ್ತಾ ಭಾರತದ ಕಡೆಯಿಂದ ಬಾಂಗ್ಲಾದತ್ತ ನಡೆದು ಹೋಗುತ್ತಿದ್ದ





ಮಹಿಳೆಯರನ್ನು ತೋರಿಸಿ ನಾನು ಸುಬೇದಾರ್ ಸಾಬ್‌ನ್ನು, ''ಅವರು ನೇರವಾಗಿ ಹೋಗುತ್ತಿದ್ದಾರೆ, ಪಾಸ್‌ಪೋರ್ಟ್, ವೀಸಾ...,'' ಎಂದೆ ಆಶ್ಚರ್ಯದಿಂದ... ಆಗ ಆತನೆಂದ : ''ನೋಡಿ ನಮ್ಮ ನೆರಳು ಬೀಳುವ ಜಾಗ ಬಾಂಗ್ಲಾ ಭೂಮಿ. ಅಲ್ಲಿಗೂ ಇಲ್ಲಿಗೂ ಹೆಚ್ಚು ದೂರ ಇಲ್ಲ. ಎರಡೂ ಕಡೆಯ ಜನರ ಬಂಧುಗಳು ಇರುವ ಭಾಗ ಇದು. ಈ ಎರಡೂ ಭಾಗದ ಜನರೊಳಗೆ ವಿವಾಹ ನಡೆಯುತ್ತಿರುತ್ತದೆ. ಹಿಂದುಗಳು ಬಾಂಗ್ಲಾದಲ್ಲಿ ಕಡಿಮೆ. ಆದರೆ ಬಾಂಗ್ಲಾದ ಮುಸ್ಲಿಮರ ಬಂಧುಗಳು ತ್ರಿಪುರಾದಲ್ಲಿ ಇದ್ದಾರೆ. ತ್ರಿಪುರಾದಲ್ಲಿ ಎಂಬೆಸಿಯ ಶಾಖೆಯೊಂದಿದೆ. ಅಲ್ಲಿ ಬೇಕಾದ ಕಾಗದ ಪತ್ರ ಸಿದ್ಧಪಡಿಸಿಕೊಂಡು ಇರುತ್ತಾರೆ. ಅದನ್ನು ತೋರಿಸಿ ಆ ಕಡೆ ಈ ಕಡೆ ಪ್ರಯಾಣಿಸುತ್ತಾರೆ.'' ಅವರು ಹೇಳಿದಂತೆ ಅಲ್ಲಿಯ ಮರದ ರೆಂಬೆಗಳು ಇಲ್ಲಿ, ಇಲ್ಲಿಯ ಮರದ ರೆಂಬೆಗಳು ಅವರ ಭೂಮಿಯಲ್ಲಿ ಇದ್ದುವು.

ನಾವು ಅಲ್ಲಿ ಇರುವವರೆಗೂ ನಡೆದುಹೋಗುವ ಐದಾರು ಕುಟುಂಬಗಳನ್ನು ಕಂಡೆವು. ''ಮುಂದೆ ಎಲ್ಲಾದರೂ ಬಸ್ಸು ಇರಬಹುದು. ಅಥವಾ ಪಕ್ಕದ ಹಳ್ಳಿಯವರು ಇರಬಹುದು'' ಎಂದರು. ಆ ಭಾಗದಲ್ಲಿ ಕಬ್ಬಿಣ ಬೇಲಿ ಭಾರತ ಬಾಂಗ್ಲಾವನ್ನು ಒಡೆದಿಲ್ಲ. ಇನ್ನು ಮುಂದೆ ಗೇಟ್ ಹಾಕುವ ಯೋಜನೆ ಇದೆ. ಈಗ ಮಾತ್ರ ಅವರ ಭೂಮಿ ಯಾವುದು, ನಮ್ಮ ಭೂಮಿ ಯಾವುದು ಎಂದು ತಿಳಿಯುವುದಿಲ್ಲ.

ಆದರೆ ಕಮಲಬಾರಿಯಲ್ಲಿ ಕಬ್ಬಿಣದ ಬೇಲಿ ಹಾಕಿದ್ದಾರೆ. ತ್ರಿಪುರಾದ ರಾಜಧಾನಿ ಅಗರ್ತಲಾದಿಂದ ೨೭ ಕಿಲೋ ಮೀಟರ್ ದೂರದ ಕಮಲಬಾರಿಯಲ್ಲೂ ಬಾಂಗ್ಲಾ ಭಾರತ ಗಡಿ ಬಾರ್ಡರ್ ಇದೆ. ತ್ರಿಪುರಾದ ಮೂರು ಭಾಗವನ್ನು ಬಾಂಗ್ಲಾ ಸುತ್ತುವರಿದಿದೆ. ಉತ್ತರ ಪೂರ್ವ ಭಾಗದ ಸ್ವಲ್ಪ ಭಾಗ ಅಸ್ಸಾಂ ಹಾಗೂ ಸ್ವಲ್ಪ ಭಾಗ ಮಿಜೋರಾಂ. ಹೀಗಾಗಿ ಬಾಂಗ್ಲಾ ದೇಶ ನೋಡುವುದು ಇಲ್ಲಿ ಸುಲಭ. ಐದು ವರ್ಷಗಳ ಹಿಂದೆ ಇಲ್ಲೂ ಬೇಲಿ ಇರಲಿಲ್ಲ. ಆ ಭಾಗದ ರೈತರ ಗದ್ದೆಗಳು ಇಲ್ಲಿ ಈ ಭಾಗದ ರೈತರ ಗದ್ದೆಗಳು ಅಲ್ಲಿ ಇದ್ದುವು. ರೈತರು ಆ ದೇಶ ಈ ದೇಶ ಎಂದು ನೋಡದೆ ಭೂಮಿಯನ್ನು ಉತ್ತು ಬಿತ್ತು ಹದಮಾಡಿ ಬೆಳೆ ತೆಗೆಯುತ್ತಿದ್ದರು. ಕೃಷಿ ಕಾರ್ಮಿಕರು ಹೆಚ್ಚಾಗಿ ಇಲ್ಲಿ ಕೆಲಸಕ್ಕೆ ಬರುತ್ತಿದ್ದರು. ಕಬ್ಬಿಣದ ಬೇಲಿ ಹಾಕಿದ ಮೇಲೆ ಈ ಭಾಗದಲ್ಲಿ ಒಂದು ಗೇಟ್ ಇಟ್ಟಿದ್ದಾರೆ. ಆ ಗೇಟ್ ಮೂಲಕ ರೈತರು ಎರಡೂ ದೇಶಗಳ ಒಳಗೆ ಕೃಷಿ ಕೆಲಸಕ್ಕೆ ಬರಲು ಅನುಮತಿ ಇದೆ.

ತ್ರಿಪುರಾವನ್ನು 'ಗೇಟ್‌ವೇ ಆಫ್ ಈಶಾನ್ಯ ಭಾರತ' ಎಂದೂ ಕರೆಯುತ್ತಾರೆ. ಭಾರತದಿಂದ ಈ ಭಾಗದ ಭಾರತೀಯ ರಾಜ್ಯಗಳಿಗೆ ಬರುವ ರಸ್ತೆ ಪ್ರಯಾಣಕ್ಕೆ ಈ ಮಾರ್ಗ ಅವಕಾಶವನ್ನು ನೀಡುತ್ತದೆ. ತ್ರಿಪುರಾದಲ್ಲಿ ಸ್ಥಾಪಿಸಲಾಗುವ 'ನ್ಯಾಚುರಲ್ ರಿಸೋರ್ಸ್ ಗ್ಯಾಸ್ ಕಂಪೆನಿ'ಗೆ ಬೇಕಾದ ಭಾರಿ ಯಂತ್ರಗಳನ್ನು ಹೊತ್ತು ಲಾರಿಗಳು ಭಾರತದಿಂದ ಬಾಂಗ್ಲಾ ದಾರಿಯಾಗಿ ಇಲ್ಲಿಗೆ ರಾತ್ರಿ ಹೊತ್ತು ಬರುತ್ತವೆ ಎಂದರು ಸುಬೇದಾರ್. ಹಗಲಲ್ಲಿ ಇಲ್ಲಿ ಟ್ರಾಫಿಕ್ ಜಾಮ್ ಆಗುವುದರಿಂದ ಭಾರಿ ಗಾತ್ರದ ಲಾರಿ ಚಲಿಸಲು ಆಗದು.

ನಾವು ಹೋಗುವಾಗ ಟ್ರಾಫಿಕ್ ಜಾಮ್ ಆಗಿತ್ತು. ನಾವು ಕಾರನ್ನು ಒಂದು ಬದಿಯಲ್ಲಿ ನಿಲ್ಲಿಸಿ ನಡೆದೇ ಹೋಗಿದ್ದೆವು. ನಾವು ಬಹಳ ಪ್ರಯಾಸದಿಂದ ಒಂದೆಡೆ ಗಾಡಿ ನಿಲ್ಲಿಸಿ ನಡೆದುಕೊಂಡೇ ಹೋದೆವು.

ಹೆಚ್ಚಾಗಿ ಜಲ್ಲಿಕಲ್ಲುಗಳು ಬಾಂಗ್ಲಾದಿಂದ ಬಂದು ಇಲ್ಲಿ ಅನ್‌ಲೋಡ್ ಆಗುತ್ತಿದ್ದುವು. ಎಲ್ಲಾ ಸರಕುಗಳನ್ನು ಇಲ್ಲಿ ಅನ್‌ಲೋಡ್ ಮಾಡಿ ಮತ್ತೆ ಭಾರತದ ಲಾರಿಗಳಿಗೆ ತುಂಬಿಸಿ ಭಾರತಕ್ಕೆ ಸಾಗಿಸಲಾಗುತ್ತಿತ್ತು.

ಅಮೃತಸರದ ವಾಘಾ ಬಾರ್ಡರ್‌ನಲ್ಲಿ ಇರುವಂತಹ ಯಾವ ನಿಬಂಧನೆಗಳೂ ಇಲ್ಲಿಯ ಲಾರಿಗಳಿಗೆ ಇರಲಿಲ್ಲ.

**ಡಾ|| ಇಂದಿರಾ ಹೆಗ್ಗಡೆ**
ನಂ. ೬, 'ಕೃಷ್ಣಾ ರೆಸಿಡೆನ್ಸಿ', ೪ನೇ ಕ್ರಾಸ್, ಅಮರಜ್ಯೋತಿ ನಗರ
ಬೆಂಗಳೂರು - ೫೬೦ ೦೪೦

*(೫೦ನೇ ಪುಟದಿಂದ)*

ಒತ್ತಾಯಿಸುತ್ತಿದ್ದರು. ಮೂರು ವರ್ಷಗಳಿಂದ ನಡೆಯುತ್ತಿದ್ದ ಈ ಜುಗ್ಗಾಟ ಸಂವಿಧಾನ ಸಭೆಯನ್ನು ಒಂದು ರೀತಿಯಲ್ಲಿ ಸ್ಥಗಿತಗೊಳಿಸಿ, ಅಸ್ಥಿರತೆಗೆ ಎಡೆಮಾಡಿತ್ತು. ಈಗ ನವೆಂಬರ್ ೧ರಂದು ಸಂಬಂಧಪಟ್ಟ ಪಕ್ಷಗಳು ಐತಿಹಾಸಿಕ ಒಪ್ಪಂದಕ್ಕೆ ಬಂದಿವೆ. ಇದರಲ್ಲಿ ಎರಡೂ ಕಡೆ ಕೊಡುಕೊಳ್ಳುವಿಕೆ ನಡೆದಿರುವುದರಿಂದ ಯಾರದೂ ಮೇಲುಗೈ ಇಲ್ಲ ಎನ್ನಬಹುದು.

ಈ ಒಪ್ಪಂದದಂತೆ ಮಾವೋವಾದಿ ಸೈನಿಕರಲ್ಲಿ ಒಂದು ಭಾಗವನ್ನು ವಿಶೇಷ ವಿಭಾಗದಲ್ಲಿ ನೇಪಾಳಿ ಸೇನೆಯಲ್ಲಿ ಭರ್ತಿಮಾಡಿಕೊಳ್ಳಲಾಗುವುದು ಮತ್ತು ಉಳಿದವರಿಗೆ ಪರಿಹಾರವನ್ನು ನೀಡಿ ಮುಖ್ಯವಾಹಿನಿಗೆ ಬರಲು ಅನುವು ಮಾಡಿಕೊಡಲಾಗುವುದು. ಒಪ್ಪಂದದಲ್ಲಿನ ಇನ್ನೊಂದು ಮುಖ್ಯ ಅಂಶವೆಂದರೆ ಇವೆಲ್ಲವನ್ನು ಒಂದು ನಿರ್ದಿಷ್ಟ ಕಾಲಾವಧಿಯಲ್ಲಿ ಅಂದರೆ ಮೂವತ್ತು ದಿನಗಳಲ್ಲಿ ಪೂರೈಸಿ, ಸಂವಿಧಾನದ ಕರಡನ್ನು ಸಿದ್ಧಗೊಳಿಸಬೇಕೆನ್ನುವುದಾಗಿದೆ. ಹೊಸ ಸಂವಿಧಾನದಂತೆ ಮೊದಲ ಮಹಾಚುನಾವಣೆಗಳನ್ನು ನೇಪಾಳಿ ಕಾಂಗ್ರೆಸ್ಸಿನ ನೇತೃತ್ವದಲ್ಲಿ ನಡೆಸಲು ನಿರ್ಧರಿಸಲಾಗಿದೆ. ಈ ಒಪ್ಪಂದವನ್ನು ಜಾರಿಗೊಳಿಸಿದರೆ ಮುಂದಿನ ದಾರಿ ಸುಗಮವಾದೀತು. ಹಿಂದೆ ಮಾವೋವಾದಿಗಳ ಜೊತೆ ಒಪ್ಪಂದವಾದಾಗ ಭಾರತ ಅದರ ಬಗ್ಗೆ ಸಂಶಯ ಹೊಂದಿದ್ದುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಪರಿವರ್ತನೆಯ ಹಾದಿಯಲ್ಲಿರುವ ನೇಪಾಳ ಹೊಸ ಒಪ್ಪಂದವನ್ನು ಜಾರಿಗೊಳಿಸುವಾಗ ಉದ್ಭವಿಸುವ ಸಮಸ್ಯೆಗಳನ್ನು ಸಾಮರಸ್ಯದಿಂದ ಬಗೆಹರಿಸಿಕೊಳ್ಳುವುದೆಂದು ಆಶಿಸೋಣ. ಯಾವ ಒತ್ತಡಗಳಿಗೂ ಮಣಿಯದೆ ಹೊಸ ಸಂವಿಧಾನ ರೂಪುಗೊಂಡು, ಚುನಾವಣೆಗಳು ಸುಗಮವಾಗಿ ನಡೆಯಲಿ ಎಂದು ಹಾರೈಸೋಣ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್
ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

# ಆಪದ್ಬಾಂಧವ – ರಸಾಯನಶಾಸ್ತ್ರಜ್ಞ ಹೇಬರ್

ಪ್ರೊ|| ಎಂ. ಆರ್. ನಾಗರಾಜು

ಉಸಿರಾಡದೆ ಬದುಕಲು ಸಾಧ್ಯವಿಲ್ಲ; ಉಸಿರಾಡಲು ಗಾಳಿ ಬೇಕು ಎಂಬ ನಂಬಿಕೆ ಆಚೆಗೆ, ಉಸಿರಾಡಿದಾಗ ಪ್ರಧಾನವಾಗಿ ಬಳಕೆ ಆಗುವುದು ಆಕ್ಸಿಜನ್ ಮಾತ್ರ ಎಂಬ ಸತ್ಯವನ್ನು ಜೋಸೆಫ್ ಪ್ರೀಸ್ಟ್ಲೈ ಪ್ರಯೋಗದ ಮೂಲಕ ಸಾಧಿಸಿ ಕೆಲವೇ ಶತಕಗಳು ಕಳೆದಿವೆ. ಗಾಳಿಯಲ್ಲಿನ ಆಕ್ಸಿಜನ್‌ಅನ್ನು ಪ್ರಾಣವಾಯು ಎಂದು ಹೆಸರಿಸಿದ್ದಲ್ಲದೆ, ಉಸಿರಾಟವನ್ನು ಮಂದದಹನ ಎಂದೂ ಕರೆಯಲಾಯಿತು.

ಇದನ್ನು ಶಾಲೆಯಲ್ಲಿ ನಮಗೆ ಕಲಿಸಿದಾಗ ನಿಸರ್ಗ ಎಂತಹ ಜಿಪುಣ, ಶೇಕಡ ನೂರರಷ್ಟು ಆಕ್ಸಿಜನ್ ಗಾಳಿಯಲ್ಲಿದ್ದಿದ್ದರೆ ಜೀವನ/ಉಸಿರಾಟ ಸುಗಮವಾಗುತ್ತಿತ್ತು ಎನಿಸಿದ್ದು ಈಗಲೂ ನೆನಪಿದೆ.

ಆಕ್ಸಿಜನ್‌ಗಿಂತಲೂ ಅದರ ಇನ್ನೊಂದು ರೂಪ ಓಝೋನ್ ಗಾಳಿಯಲ್ಲಿರುವ ಆಕ್ಸಿಜನ್‌ನಲ್ಲಿ ಎರಡು ಆಕ್ಸಿಜನ್ ಪರಮಾಣುಗಳ ಅಣು ಇದ್ದು, ಓಝೋನ್‌ನಲ್ಲಿ ಮೂರು ಆಕ್ಸಿಜನ್ ಪರಮಾಣುಗಳು ಕೂಡಿರುತ್ತವೆ. ಇದು ಆಕ್ಸಿಜನ್‌ಗಿಂತಲೂ ಚುರುಕು ಅನಿಲ ಎಂದು ತಿಳಿದಾಗ ವಾಯುಮಂಡಲದಲ್ಲಿ ಆಕ್ಸಿಜನ್ ಬದಲು ಓಝೋನ್ ಇರಬಾರದಿತ್ತೇ ಅನಿಸಿ ಈ ಉತ್ಸಾಹ ತಡೆಯಲಾರದೆ ನಮ್ಮ ಅಧ್ಯಾಪಕರ ಬಳಿ ಹೇಳಿದೆ.

ಅವರು ಹೇಳಿದರು – ''ಓಝೋನ್ ಏನಾದರೂ ಆಕ್ಸಿಜನ್‌ನ ಬದಲಾಗಿ ಇದ್ದಿದ್ದರೆ ಭೂಮಿಯ ಮೇಲೆ ಜೀವಿ ಕಾಣಿಸಿಕೊಳ್ಳುತ್ತಲೇ ಇರಲಿಲ್ಲ. ಏಕೆಂದರೆ ಓಝೋನ್ ತನ್ನ ಚುರುಕು ರಾಸಾಯನಿಕ ಗುಣದಿಂದಾಗಿ ಎಲೆಗಳನ್ನೆಲ್ಲಾ ಬಿಳಿಚುವಂತೆ ಮಾಡುತ್ತಿತ್ತು (ಓಝೋನ್ ಚಲುವೆಕಾರಕ ಅರ್ಥಾತ್ ಬ್ಲೀಚಿಂಗ್ ಏಜೆಂಟ್) ಎಂದು ಹೇಳಿದರು. ಆಗ ನನಗೆ ರಸಾಯನಶಾಸ್ತ್ರದ ಸಂಕೀರ್ಣತೆ ಅರಿವಾಯಿತು. ಚುರುಕಾದ ಅನಿಲ ಅತಿ ಚುರುಕಾದರೆ ಅಪಾಯಕಾರಿ ಎಂಬುದು ಕಟು ಸತ್ಯ.

ಈಗ ಬಾಲ್ಯದಲ್ಲಿನ ಊಹೆಯನ್ನು ನೆನಪು ಮಾಡಿಕೊಂಡು ಪರಿಶೀಲಿಸೋಣ. ವಾಯುಮಂಡಲದಲ್ಲಿ ಕೇವಲ ಆಕ್ಸಿಜನ್ ಇದ್ದಿದ್ದರೆ – ಆಗ ಜೀವ ಉಗಮ ಆಗುವುದು ಅನುಮಾನ. ಏಕೆಂದರೆ ಮಾನವ ದೇಹದಲ್ಲಿರುವ ಪ್ರಧಾನ ಸಂಯುಕ್ತಗಳು ಪ್ರೋಟೀನ್‌ಗಳು ಹಾಗೂ ನ್ಯೂಕ್ಲಿಯಿಕ್ ಆಮ್ಲಗಳು, ನೈಟ್ರೋಜನ್ ಸಂಯುಕ್ತಗಳು. ಹೀಗಾಗಿ ಉಸಿರಾಟದಲ್ಲಿ ಭಾಗಿಯಾಗಿ ದೇಹವನ್ನು ನೈಟ್ರೋಜನ್ ಪ್ರವೇಶಿಸುವುದಿಲ್ಲ, ನಿಜ. ಆದರೆ ನಾವು ತಿನ್ನುವ ಆಹಾರದ ಮೂಲಕ ನೈಟ್ರೋಜನ್ ಸಂಯುಕ್ತಗಳು ದೇಹವನ್ನು ಪ್ರವೇಶಿಸುತ್ತವೆ. ಆಕ್ಸಿಜನ್ ಮತ್ತು ಕಾರ್ಬನ್ ರಾಸಾಯನಿಕವಾಗಿ ಸಂಯೋಜನೆಗೊಂಡು ಆಮ್ಲವನ್ನು ಉತ್ಪಾದಿಸುವುವು – ಅದಕ್ಕೆ ಪೈಪೋಟಿಯಾಗಿ ಪ್ರತ್ಯಾಮ್ಲ ನಿರ್ಮಾಣ ಆಗುವುದು ನೈಟ್ರೋಜನ್ ಮತ್ತು ಹೈಡ್ರೋಜನ್ ಸಂಯುಕ್ತಗಳಿಂದಾಗಿ! ಹೀಗಾಗಿ ಈ ಎರಡೂ ಘಟಕಗಳನ್ನು ಸದ್ಬಳಕೆ ಮಾಡಿಕೊಂಡೇ ಜೀವ ಉಗಮಿಸಿದೆ.

ನೈಟ್ರೋಜನ್ ವಾಯುಮಂಡಲದಿಂದ ಸಸ್ಯಗಳಿಗೆ ಸೇರಿ ಸಸ್ಯಗಳಿಂದ ಮಾನವ ದೇಹವನ್ನು ಸೇರುತ್ತದೆ. ಕೆಲವು ಸಸ್ಯಗಳು ಮಾತ್ರ ನೈಟ್ರೋಜನ್ ಅನಿಲವನ್ನು ನೇರವಾಗಿ ಉಪಯೋಗಿಸಿಕೊಳ್ಳಬಲ್ಲವು. ಮಳೆ, ಮಿಂಚಿನಿಂದಾಗಿ ನೈಟ್ರೋಜನ್ ನಿಯುಕ್ತರೂಪ ತಳೆದು ಭೂಮಿಯನ್ನು ನೈಟ್ರೇಟ್ ರೂಪದಲ್ಲಿ ಸೇರಿ ಅನಂತರ ಸಸ್ಯವನ್ನು ಪ್ರವೇಶಿಸುವುದು. ಸಸ್ಯಗಳ ಮೂಲಕ ಸಾಮಾನ್ಯವಾಗಿ ನೈಟ್ರೋಜನ್ ಪ್ರಾಣಿಗಳಿಗೆ ಪೂರೈಕೆ ಆಗುವುದು.

ಮೊದಲೇ ಜಡವಾದ ಅನಿಲ ನೈಟ್ರೋಜನ್. ಹೀಗಾಗಿ ಅದು ರಾಸಾಯನಿಕ ಕ್ರಿಯೆಯಲ್ಲಿ ಭಾಗವಹಿಸುವುದು ಕಠಿಣ. ಇದರ ಸಲುವಾಗಿ ರಾಸಾಯನಿಕ ಕ್ರಿಯೆಯ ವೇಗ ಹೆಚ್ಚಿಸಲು ಇದು ಅಧಿಕ ಪ್ರಮಾಣದಲ್ಲಿ ಇರುವುದೇ ವಾಸಿ ಎಂಬ ಸತ್ಯ ತಡವಾಗಿ ತಿಳಿಯಿತು.

ಮೇಲಿನ ಉದಾಹರಣೆಯನ್ನು ಪ್ರಸ್ತಾಪ ಮಾಡಲು ಕಾರಣವಿದೆ. ನಿಸರ್ಗದ ಅಧ್ಯಯನದಲ್ಲಿ ನಮಗೆ ತಿಳಿದ ಒಂದು ಮಾಹಿತಿಯನ್ನು ಆಧರಿಸಿ ದುಡುಕಿ ತೀರ್ಮಾನಕ್ಕೆ ಬಂದು ನಂತರ ವ್ಯಾಪಕ ಹಿನ್ನಲೆಯಲ್ಲಿ ಗಮನಿಸಿದಾಗ ಆ ತೀರ್ಮಾನ ದೋಷಪೂರ್ಣವೆಂದು ಗೊತ್ತಾಗುತ್ತದೆ. ಅರಿವಿನ ಮೊದಲ ಹಂತಗಳ ತೀರ್ಮಾನ - ವ್ಯಾಪಕ ಹಿನ್ನೆಲೆಯಲ್ಲಿ ಪರಿಶೀಲಿಸಿದಾಗ – ಅರ್ಥಹೀನವೆನಿಸುವುದು ತೀರಾ ಸಹಜ. ರಸಾಯನಶಾಸ್ತ್ರದಂತಹ ಸಂಕೀರ್ಣ ವಿಷಯಗಳನ್ನು ನಿಸರ್ಗಕ್ಕೆ ಅನ್ವಯಿಸುವಾಗ ವಿಶೇಷ ಎಚ್ಚರ ಅನಿವಾರ್ಯ.

ಈಗ ಚರ್ಚೆಯನ್ನು ಮುಂದುವರಿಸೋಣ. ನಾನು ಕಲಿಕೆಯ ಮುಂದಿನ ಹಂತಗಳಿಗೆ ತಲುಪಿದಾಗ ಮತ್ತೊಂದು ಸೋಜಿಗ ಕಾದಿತ್ತು. ವಾಯುಮಂಡಲದಲ್ಲಿ ಆಕ್ಸಿಜನ್ ಮೊದಲಿನಿಂದಲೂ ಇದ್ದಿದ್ದರೆ ಭೂಮಿಯ ಮೇಲೆ ಜೀವದ ಉಗಮವೇ ಆಗುತ್ತಿರಲಿಲ್ಲ ಎಂಬ ಹಾಗೂ ವಾಯುಮಂಡಲದಲ್ಲಿ ಆಕ್ಸಿಜನ್ ಮೂಡಿಬರಲು ನೈಟ್ರೋಜನ್ ಅನಿಲವೇ ಕಾರಣವೆಂಬ ಸಂಗತಿ!

ನಿರ್ಜೀವ ವಸ್ತುಗಳು ಇದ್ದು ಜೀವಿಯ ಉಗಮಕ್ಕೆ ಬೇಕಾದ ಕಾರ್ಬನಿಕ್ ಸಂಯುಕ್ತಗಳನ್ನು ರೂಪಿಸಬೇಕು. ಹಾಗೆ ಆದಾಗಲೆ ಜೀವಿಯ ಉಗಮ ಸಾಧ್ಯ. ಆದರೆ ಕಾರ್ಬನಿಕ್ ಸಂಯುಕ್ತಗಳಾದರೋ ಚುರುಕು ಆಮ್ಲದೊಡನೆ ವರ್ತಿಸಿ ಹಾಳಾಗುತ್ತಿದ್ದವು. ಅಂದಮೇಲೆ, ಜೀವಿಯ ಉಗಮವಾಗುವಾಗ ವಾಯುಮಂಡಲದಲ್ಲಿ ಆಕ್ಸಿಜನ್ ಇರದ ಕಾಲವೊಂದಿತ್ತು ಎಂದು ಜೀವಿ ಉಗಮ ಸಿದ್ಧಾಂತಕಾರರಾದ ಒಪ್ಯಾರಿನ್ ಅಭಿಪ್ರಾಯಪಟ್ಟರು. ಅನಂತರದಲ್ಲಿ ಅಂತಹ ಪರಿಸರ ಇದ್ದ ಬಗ್ಗೆ ಪುರಾವೆಯೂ

ನಿಸರ್ಗದ ಅಧ್ಯಯನದಲ್ಲಿ ನಮಗೆ ತಿಳಿದ ಒಂದು ಮಾಹಿತಿಯನ್ನು ಆಧರಿಸಿ ದುಡುಕಿ ತೀರ್ಮಾನಕ್ಕೆ ಬಂದು ನಂತರ ವ್ಯಾಪಕ ಹಿನ್ನಲೆಯಲ್ಲಿ ಗಮನಿಸಿದಾಗ ಆ ತೀರ್ಮಾನ ದೋಷಪೂರ್ಣವೆಂದು ಗೊತ್ತಾಗುತ್ತದೆ. ಅರಿವಿನ ಮೊದಲ ಹಂತಗಳ ತೀರ್ಮಾನ – ವ್ಯಾಪಕ ಹಿನ್ನೆಲೆಯಲ್ಲಿ ಪರಿಶೀಲಿಸಿದಾಗ – ಅರ್ಥಹೀನವೆನಿಸುವುದು ತೀರಾ ಸಹಜ. ರಸಾಯನಶಾಸ್ತ್ರದಂತಹ ಸಂಕೀರ್ಣ ವಿಷಯಗಳನ್ನು ನಿಸರ್ಗಕ್ಕೆ ಅನ್ವಯಿಸುವಾಗ ವಿಶೇಷ ಎಚ್ಚರ ಅನಿವಾರ್ಯ.



# ಹಾಲಿರುವೆಗಳಿಗೆ

ಹಾಲಿರುವೆ ಪ್ರಿಯ ಹಾಲಿರುವೆ
ನಾನೂ ನಿಮ್ಮ ಜೊತೆ ಬರುವೆ

ಬಾಯಲಿ ಮುತ್ತಿನ ಮೊಟ್ಟೆಯ ಚಂದ
ಚುರುಕಿನ ನಡಿಗೆಗೆ ಪರಮಾನಂದ
ಮಕ್ಕಳ ಹಾಗೆ ಎಲ್ಲವೂ ಖಿಲ್ಲಾ
ಕೊಡುವೆನು ಬನ್ನಿ ಸಿಹಿಸಿಹಿ ಬೆಲ್ಲಾ

ಹಾಲಿರುವೆ ಪ್ರಿಯ ಹಾಲಿರುವೆ
ನಾನೂ ನಿಮ್ಮ ಜೊತೆ ಬರುವೆ

ಬುರು ಬುರು ಬುರು ಬುರು ಓಡುತ ಬರುವೆ
ದಾಯಾದಿಗಳೇ ಕಚ್ಚುವ ಇರುವೆ ?...
ಮನೆಯೆಲ್ಲಿರುವುದು ಹೇಳಿರಿ ನನಗೆ
ಉರಿಉರಿ ಬಿಸಿಲಲಿ ಎಲ್ಲಡಗಿರುವೆ ?...

ಹಾಲಿರುವೆ ಪ್ರಿಯ ಹಾಲಿರುವೆ
ನಾನೂ ನಿಮ್ಮ ಜೊತೆ ಬರುವೆ

ಕಚ್ಚದೆ ಇರುವುದೇ ಪ್ರೀತಿಯ ಗುಟ್ಟು
ಉಳಿದವರಂತೆ ಇಲ್ಲಾ ಸಿಟ್ಟು
ಆಡುವೆ ಓಡುವೆ ಮ್ಯ-ಮನೆತುಂಬಿ
ಶುಭವೆನ್ನುವರು, ಮನೆ ಹಿರಿ ಮಂದಿ.

ಹಾಲಿರುವೆ ಪ್ರಿಯ ಹಾಲಿರುವೆ
ನಾನೂ ನಿಮ್ಮ ಜೊತೆ ಬರುವೆ

ವಿಷ್ಣು ನಾಯ್ಕ
'ಪರಿಮಳ', ಅಂಬಾರಕೊಡ್ಲ, ಅಂಕೋಲಾ, ಉತ್ತರ ಕನ್ನಡ ಜಿಲ್ಲೆ.

ದೊರಕಿತು. ಹಾಗಿದ್ದಲ್ಲಿ, ಜೀವಿಯ ಉಗಮಕ್ಕೆ ಕಾರಣವಾದದ್ದು ಆಕ್ಸಿಜನ್ ಅಲ್ಲ ನೈಟ್ರೋಜನ್ ! ಜೀವಿಯ ಉಗಮಕ್ಕೆ ಅಡ್ಡಿಯಾಗಿದ್ದುದು ಆಕ್ಸಿಜನ್. ಇದು ಜೀವಿಯ ಉಗಮ ಕಾಲದ ಸತ್ಯ. ಆದರೆ ಇಂದು ಆಕ್ಸಿಜನ್ ಇಲ್ಲವಾದರೆ ಇಡೀ ಜೀವಸಂಕುಲವೇ ನಾಶವಾಗುತ್ತದೆ ! ಇದು ವರ್ತಮಾನದ ಸತ್ಯ.

ಅದು ಸರಿ, ಆಕ್ಸಿಜನ್ ವಾಯುಮಂಡಲದಲ್ಲಿರಲು ನೈಟ್ರೋಜನ್ ಅನಿಲವೇ ಕಾರಣ ಎಂಬುದನ್ನು ಸಮರ್ಥಿಸುವುದು ಹೇಗೆ ? ನೈಟ್ರೋಜನ್ ವಾಯುಮಂಡಲದಲ್ಲಿದ್ದದ್ದು ಜೀವಿಯ ಉಗಮಕ್ಕೆ ಕಾರಣವಾದ ಸಂಯುಕ್ತಗಳನ್ನು ಸಂಶ್ಲೇಷಿಸಿತು. ಆಗ ಜೀವಿಯು ಉಗಮಗೊಂಡು ಆಕ್ಸಿಜನ್ ರಹಿತ ಪರಿಸರದಲ್ಲಿ ಕಾರ್ಬನ್ ಡೈಆಕ್ಸೈಡ್‌ಅನ್ನು ಹೀರಿಕೊಂಡು ಅವಾಯುಕ ಹುದುಗುವಿಕೆಯಿಂದ ವಾಯುಮಂಡಲಕ್ಕೆ ಆಕ್ಸಿಜನ್‌ಅನ್ನು ಸೇರ್ಪಡೆಮಾಡಿತು. ಅನಂತರ ಆಕ್ಸಿಜನ್ ಬಳಕೆ ಮಾಡುವ ಜೀವಿಗಳೂ ಭೂಮಿಯಲ್ಲಿ ರೂಪುಗೊಂಡವು !

ಜೀವಿಯ ಉಗಮಕ್ಕೆ ಕಾರಣವಾದದ್ದು ನೈಟ್ರೋಜನ್. ಆದರೆ ಅದು ದಕ್ಷವಾಗಿ ಶಕ್ತಿ ಉತ್ಪಾದನೆ ಮಾಡುವಂತೆ ಮಾರ್ಪಾಡುಗೊಳ್ಳಲು ಕಾರಣವಾದ ಆಕ್ಸಿಜನ್ ಅನಂತರದಲ್ಲಿ ಕಾಣಿಸಿಕೊಂಡಿತು. ಅದೂ ಜೀವಿಯೇ ರೂಪಿಸಿದ ಆಕ್ಸಿಜನ್ !

ಸಸ್ಯಗಳನ್ನು ಅವಲಂಬಿಸಿ ಬದುಕುತ್ತಿದ್ದ ಮಾನವ ಕ್ರಮೇಣ ಸಸ್ಯಗಳನ್ನು - ಬೆಂಕಿಯ ಸಲುವಾಗಿ, ಮನೆ ಕಟ್ಟಿಕೊಳ್ಳುವ ಸಲುವಾಗಿ, ಮತ್ತಿತರ ಕಾರಣಗಳಿಗಾಗಿ ಬಳಕೆ ಮಾಡಿಕೊಳ್ಳತೊಡಗಿದಾಗ ಒಂದು ಗಂಡಾಂತರ ಕಾಣಿಸಿಕೊಂಡಿತು. ಅದೇನೆಂದರೆ ಸಸ್ಯಗಳು ತಾವು ತಯಾರಿಸಿದ ಎಲೆ ಮುಂತಾದ ತ್ಯಾಜ್ಯಗಳನ್ನು ಭೂಮಿಗೆ ಸೇರಿಸಿ ಆ ನೆಲವನ್ನು ಫಲವತ್ತು ಮಾಡುತ್ತಿದ್ದವು. ಮುಂದೆ ಸಸ್ಯಗಳ ಬೆಳವಣಿಗೆಗೆ ಅದು ಪೀಠಿಕೆ ಆಗುತ್ತಿತ್ತು. ಆದರೆ ಯಾವಾಗ ಮಾನವನ ಜೀವನಶೈಲಿಗೆ ಸಸ್ಯತ್ಯಾಜ್ಯಗಳ ಬೇಡಿಕೆ ಹೆಚ್ಚಾಯಿತೋ ಆಗ ಸಸ್ಯತ್ಯಾಜ್ಯಗಳು ಭೂಮಿಗೆ ಹಿಂತಿರುಗದೆ ಭೂಮಿಯು ಬರಡಾಗುವುದು, ಸಸ್ಯದಟ್ಟಣೆಯೇ ಕಡಿಮೆಯಾಗುವುದು ಕಂಡುಬಂದಿತು. ಆ ಸ್ಥಿತಿಯೇ ಮುಂದುವರಿದಿದ್ದರೆ ಈ ವೇಳೆಗಾಗಲೆ ಜೀವಿಗಳು ಅನ್ನವಿಲ್ಲದೆ ಸಾಯಬೇಕಾದ ಪರಿಸ್ಥಿತಿ ಉದ್ಭವವಾಗಬೇಕಾಗಿತ್ತು. ಏಕೆಂದರೆ ವಾಯುಮಂಡಲದ ನೈಟ್ರೋಜನ್‌ಅನ್ನು ಎಲ್ಲ ಸಸ್ಯಗಳೂ ನೇರವಾಗಿ ಹೀರಲಾರವು. ಆದ್ದರಿಂದ ಭೂಮಿಗೆ ನೈಟ್ರೋಜನ್ ಸೇರ್ಪಡೆ ಆಗುತ್ತಿದ್ದುದೇ ಸಸ್ಯತ್ಯಾಜ್ಯ ಹಾಗೂ ಪ್ರಾಣಿತ್ಯಾಜ್ಯದಿಂದ. ಇದರಿಂದಾಗಿ ಭೂಮಿ ಬಂಜೆಯಾಗುವ ಸ್ಥಿತಿಯು ಉಂಟಾಯಿತು.

ಈ ಗೋಜಲಿನಿಂದ ಹೊರಬರಲು ರಸಾಯನಶಾಸ್ತ್ರಜ್ಞ ಹೇಬರ್‌ನ ಸಂಶೋಧನೆ ಸಹಾಯಕ್ಕೆ ಬಂದಿತು. ದಡ್ಡ ವಿದ್ಯಾರ್ಥಿಗೆ ಕಲಿಸುವುದರಲ್ಲಿ ಎರಡು ಸಮಸ್ಯೆಗಳಿವೆ; - ಅವನಿಗೆ/ಳಿಗೆ ಉತ್ಸಾಹ ತುಂಬಿ ಹೊಸ ವಿಚಾರಗಳಿಗೆ ಬದಲಾಯಿಸುವುದು ಕಠಿಣವಾದ ಕೆಲಸ. - ಬದಲಾಯಿಸಿದ ಮೇಲೂ, ಓದಿ ದೃಢಮಾಡಿಕೊಳ್ಳದೆ ಮರೆತು ಮುನ್ನಾಸ್ಥಿತಿಗೇ ಹಿಂತಿರುಗಿಬಿಡುವ ಸಾಧ್ಯತೆ ಇದೆ !

ನೈಟ್ರೋಜನ್ ವಿಷಯದಲ್ಲೂ ಇದೇ ಬಗೆ. ಮೊದಲೇ ಜಡ ಅನಿಲವಾದ ನೈಟ್ರೋಜನ್ ರಾಸಾಯನಿಕ ಕ್ರಿಯೆಯಲ್ಲಿ ಪಾಲ್ಗೊಳ್ಳುವ ಬಗೆಗೆ ಉತ್ಸುಕವಾಗಿರುವುದಿಲ್ಲ, ಅದರ ಜೊತೆಗೆ ಬಲಾತ್ಕಾರವಾಗಿ ರಾಸಾಯನಿಕ ಕ್ರಿಯೆಗೆ ಒಳಪಟ್ಟರೂ ಹಿಂದಕ್ಕೆ ಮರಳಿ ನೈಟ್ರೋಜನ್ ಆಗಿಯೇ ಪರಿವರ್ತನೆಗೊಂಡು ಮುನ್ನಾಸ್ಥಿತಿಯನ್ನು ತಲುಪುತ್ತದೆ !

ಈ ಎರಡೂ ಸಮಸ್ಯೆಗಳನ್ನೂ ಹೇಬರ್ ಸಂಶೋಧನೆಯ ಮೂಲಕ ಪರಿಹರಿಸಿ ನೈಟ್ರೋಜನ್‌ಅನ್ನು ಕೃತಕ ರಸಗೊಬ್ಬರದ ಕಚ್ಚಾಸಾಮಗ್ರಿ ಆಗಿಸುವಲ್ಲಿ ಯಶಸ್ವಿಯಾದದ್ದು ಅಚ್ಚರಿಯ ಸಾಧನೆ. ಈ ಸಾಧನೆಯ ಸಲುವಾಗಿ, ರಾಸಾಯನಿಕ ಕ್ರಿಯೆಗೆ ಬೇಕಾದರೆ ಚಿನ್ನವನ್ನು ಬಳಕೆ ಮಾಡಲೂ ಆಗಿನ ಜರ್ಮನ್ ಸರ್ಕಾರ ಸಿದ್ಧವಿತ್ತು.

ನಿಸರ್ಗದಲ್ಲಿ ವಿಳಂಬವಾಗಿ ಸಂಯುಕ್ತರೂಪಕ್ಕೆ ಬಂದು ಸಸ್ಯಗಳಿಗೆ, ತನ್ಮೂಲಕ ಪ್ರಾಣಿಗಳಿಗೆ ಒದಗಿಬರುತ್ತಿದ್ದ ನೈಟ್ರೋಜನ್, ಸಸ್ಯ ತ್ಯಾಜ್ಯಗಳ ಅನ್ಯಬಳಕೆಯಿಂದಾಗಿ ಮತ್ತಷ್ಟು ವಿಳಂಬವಾಯಿತು.

ಭಗೀರಥನು ದೇವಗಂಗೆಯನ್ನು ಭೂಮಿಗೆ ಕರೆದುತಂದನೆಂದು ಪುರಾಣ ಹೇಳುತ್ತದೆ. ಅದಕ್ಕೆ ಗಂಗೆ-ಭಾಗೀರಥಿ ಎನ್ನುವರು. ನೈಟ್ರೋಜನ್‌ಯುತ ರಸಗೊಬ್ಬರಗಳಿಗೆ ಹೇಬರಿ ಎನ್ನಬೇಕೆ !

ನೈಸರ್ಗಿಕ ವಿದ್ಯಮಾನವೊಂದಕ್ಕೆ ಸಮಾಂತರ ಹಾಗೂ ದಕ್ಷ ವಿಧಾನವನ್ನು ಬಳಕೆಮಾಡಿ ಜಡವಾದ ಧಾತುವನ್ನು ಸಂಯುಕ್ತವಾಗಿ ಸಸ್ಯಗಳಿಗೆ ತನ್ಮೂಲಕ ಜೀವಿಗಳಿಗೆ ಉಣಬಡಿಸಿದ ಹೇಬರ್ ಸಂಶೋಧನೆಯ ಫಲಾನುಭವಿಗಳು – ಇಡೀ ಜೀವಿಗೋಲದ ಜೀವಿಗಳು. ಇದಕ್ಕೇ ಈ ಸಂಶೋಧನೆಗೆ ೨೦ನೇ ಶತಮಾನದ ಅತ್ಯಂತ ಮಹತ್ವಪೂರ್ಣ ಸಂಶೋಧನೆ ಎಂದು ಮನ್ನಣೆ ದೊರಕಿತು.

ಆಕ್ಸಿಜನ್ ಮತ್ತಿತರ ನೈಸರ್ಗಿಕ ಸಂಪನ್ಮೂಲಗಳೂ ಬರಿದಾಗುತ್ತಿವೆ. ಮಾಲಿನ್ಯವು ಮಾನವರನ್ನು ಕಿತ್ತು ತಿನ್ನುತ್ತಿದೆ. ಮತ್ತೊಬ್ಬ ಹೇಬರ್ ಬಂದರೆ ಸಾಲದು, ಅಂತಹವರ ಪಡೆಯೇ ಸೃಷ್ಟಿಯಾಗಬೇಕಾಗಿದೆ. ಅಸಹಾಯಕರಾಗಿ ಅಳಿವಿನಂಚಿನಲ್ಲಿರುವ ಜೀವಿಗಳು ಮಾನವರ ಕಡೆ ನೋಡುತ್ತಿವೆ.

ಶುದ್ಧ ವಿಜ್ಞಾನ ಕಲಿಕೆಯೇ ಉಪೇಕ್ಷೆಗೆ ಒಳಗಾಗಿರುವಾಗ ರಸಾಯನಶಾಸ್ತ್ರಜ್ಞ - ಆಪದ್ಬಾಂಧವ ಮೂಡಿಬರುವುದಾದರೂ ಹೇಗೆ ? ಅದಕ್ಕೇ ೨೦೧೧ನೇ ವರ್ಷವು ಅಂತರರಾಷ್ಟ್ರೀಯ ರಸಾಯನಶಾಸ್ತ್ರ ವರ್ಷ.

ಜಡತ್ವವನ್ನು ಚುರುಕಾಗಿಸಿ ಸಂಯುಕ್ತವಾಗಿಸುವ, ಸಂಯುಕ್ತವನ್ನು ಸದ್ವಿನಿಯೋಗಕ್ಕೆ ಅನ್ವಯಮಾಡಿಕೊಡುವ ರಸಾಯನಶಾಸ್ತ್ರಕ್ಕೆ ನಮ್ಮ ಕೃತಜ್ಞತೆ ಸಲ್ಲಬೇಕಲ್ಲವೆ !

**ಪ್ರೊ॥ ಎಂ. ಆರ್. ನಾಗರಾಜು**
ಎಫ್-೩, ಎಸ್.ಎಫ್.ಎಸ್. ನಿವಾಸಗಳು, ೭ನೇ 'ಬಿ' ಅಡ್ಡರಸ್ತೆ,
ಯಲಹಂಕ ಉಪನಗರ, ಬೆಂಗಳೂರು - ೫೬೦ ೧೦೬

# ತಪ್ಪಿದ ಲೆಕ್ಕ

ರಾತ್ರಿಪೂರ ಕಿವಿಗಡಚಿಕ್ಕುವಂತೆ ಕೇಳುತ್ತಿದ್ದ ಅರೆ-ದೋಣುಗಳ ಸದ್ದಿಗೆ ನಿದ್ದೆ ಬಾರದೆ ಹಾಸಿಗೆಯ ಮೇಲೆ ಹೊರಳಾಡುತ್ತಾ, ಹುಚ್ಚುಚ್ಚು ಮಾತನಾಡುತ್ತಾ, ಗಂಟೆಗೊಮ್ಮೆ ಒಂದಾ ಮಾಡಲು ಎಬ್ಬಿಸುತ್ತಾ, 'ನೀವು ನನ್ನ ಕೂಡೆ ಒಂದಾ ಮಾಡಿ, ಕೆಳಗೆ ಕೂತ್ಕೊಳ್ಳಿ, ನಿಂತೇ ಒಂದಾ ಮಾಡ್ತೀರಲ್ಲಾ...' ಅಂತಾ ಏನೇನೋ ಬಡಬಡಿಸುತ್ತಾ, ಹಾಸಿಗೆಯ ಮೇಲೆ ಹೊಟ್ಟೆ ಹಿಡಿದು ಹೊರಳಾಡುತ್ತಾ ನರಳಿದ ಹೆಂಡತಿ ಲಕ್ಷ್ಮಿಯನ್ನು ಸಂತೈಸುತ್ತಲೇ ಸುಸ್ತಾಗಿ ಹೋಗಿದ್ದ ಸುಬ್ಬಯ್ಯ ಭಟ್ಟರ ಕಣ್ಣು ಕೆಂಪಾಗಿ, ನಿದ್ರೆ ಅವರ ತಲೆ ಹಿಡಿದು ಕೆಳಗೆಳೆಯುತ್ತಿದ್ದರೂ, ಇವತ್ತು ಆಸ್ಪತ್ರೆಗೆ ಹೋಗಿ ಕೆಲಸಕ್ಕೆ ಹಾಜರಾಗಬೇಕಾದ ಅನಿವಾರ್ಯತೆಯಲ್ಲಿ ಎದ್ದು, ನೆನ್ನೆ ತಾನೇ ಬಂದು ಸೇರಿಕೊಂಡ ಬಾಡಿಗೆಮನೆಯ ಬಾಗಿಲು ತೆರೆಯುತ್ತಿರುವಾಗಲೇ ಮೂಗಿಗೆ ರಾಚಿದ ಸಗಣಿ ವಾಸನೆಯಿಂದ ಮೂಗು ಮುಚ್ಚಿಕೊಂಡು ಬಾಗಿಲ ಕಡೆ ನೋಡಿದರು. ಬಾಗಿಲ ತುಂಬ ಸಗಣಿ ಮೆತ್ತಿಕೊಂಡಿತ್ತು. ಸಗಣಿಯ ತುಂಬ ಒಡಕಲಾಗಿ, ಅರೆ ನುರಿದಿದ್ದ ರಾಗಿ, ಜೋಳ, ಹುಲ್ಲು-ಪ್ಲಾಸ್ಟಿಕ್ ಚೂರುಗಳು. ಭಟ್ಟರು ಮುಖ ಸಿಂಡರಿಸಿಕೊಂಡು ಕೊಂಚ ಮುಂದೆ ಬಂದು, ಹೊರಗೆ ಆಡುತ್ತಿದ್ದ ಹುಡುಗನನ್ನು ಕೂಗಿ, ''ಲೇ... ಏನೋ ಇದು, ಬಾಗಿಲ ಮೇಲೆ ಸಗಣಿ? ಯಾರೋ ಹಾಕಿದ್ದು?'' ಎಂದರು. ಅದಕ್ಕೆ ಆ ಹುಡುಗ ''ಸಾ... ನಮಸ್ಕಾರ ಸಾ..... ಅದು ಕಸರೆ ಸಾ, ರಾತ್ರಿ ಮಾರಿ ಹಬ್ಬ ಅಲ್ಲವಾ... ಮಾರಮ್ಮ ಗದ್ದಿಗೆ ಮೇಲೆ ಕೂತ್ಕತ್ತಳೆ. ಆ ಟೈಮಿಗೆ ಹಲ್ಲು ಮರಿ ಸಿಗಿತಾರೆ ಸಾ...''

''ಹಲ್ಲು ಮರಿ... ಹಂಗಂದ್ರೇನೋ?'' ಭಟ್ಟರು ಕೇಳಿದರು. ಅದಕ್ಕೆ ಆ ಹುಡುಗ ಇನ್ನೂ ಕೊಂಚ ಮುಂದೆ ಬಂದು ''ಸಾ ಒಂದು ಕುರಿಮರಿ ಹಿಡ್ಕಂಡು, ಗ್ವಾಮಾಳೆಗೆ ಬಾಯಿ ಹಾಕಿ ರಕ್ತ ಕುಡ್ದು ಅದ್ನ ಸಿಗ್ದಹಾಕ್ತಾರೆ ಸಾ... ಆಮೇಲೆ ಅದರ ಹೊಟ್ಟೇಲಿರೋ ಕಳ್ಳು ಕಸರೇನೆಲ್ಲ, ಊರಿಗೆ ಮೈಲಿ ಬ್ಯಾನೆ ಬರ್ದೇ ಇರಲಿ ಅಂತ, ಅಮ್ಮನ ಪ್ರಸಾದ ಅನ್ಕೊಂಡು ಊರು ಮನೆ ಬಾಗ್ಲಿಗೆಲ್ಲಾ ರಾತ್ರಿ ಹೊತ್ನಲ್ಲೆ ಎರಚ್ತಾರೆ ಸಾ...'' ಎಂದು ಆ ಹುಡುಗ ಹುರುಪಿನಲ್ಲಿ ವಿವರಿಸುತ್ತಲೇ ಇದ್ದ. ಭಟ್ಟರು ಉಸಿರುಬಿಟ್ಟರು.

ಶಿರಸಿ ಬಳಿಯ ಹಳ್ಳಿಯೊಂದರಲ್ಲಿ ಹುಟ್ಟಿ, ಶಿರಸಿಯಲ್ಲೇ ಪಿಯುಸಿ ತನಕ ಓದಿ, ಮುಂದೆ ಓದಲಾಗದೆ ಅಪ್ಪ ಪೂಜೆ ಮಾಡುತ್ತಿದ್ದ ಗಣಪತಿ ದೇವಸ್ಥಾನದಲ್ಲಿ ಅಪ್ಪನ ಜೊತೆ ಪಂಚಪಾತ್ರೆ-ಉದ್ಧರಣೆಗಳ ಸೇವೆ ಮಾಡುತ್ತಾ, ಭಕ್ತಾದಿಗಳಿಗೆ ಮಹಾ ಮಂಗಳಾರತಿ, ಪಂಚಾಮೃತ ಸೇವೆ, ಸಹಸ್ರನಾಮಕ್ಕೆ ರಶೀದಿ ಬರೆಯುತ್ತಾ ಬದುಕು ಕಳೆಯಲು ತೀರ್ಮಾನಿಸಿದ್ದು ಇದೇ ಸುಬ್ಬಯ್ಯ ಭಟ್ಟರು. ಸಣ್ಣದರಿಂದಲೂ ಮಂತ್ರ ಕಲಿಯಲು ಪಡಿಪಾಟಲು ಪಡುತ್ತಾ ಅಪ್ಪನ ಕೈಯಲ್ಲಿ ಕಿವಿ ಹಿಂಡಿಸಿಕೊಂಡು, 'ದಡ್ಡ ಮುಂಡೇದೇ ಯಾರೋ ನಿನ್ನ ನಾಲಿಗೆ ತಿದ್ದಿದ್ದು? ಮಂತ್ರ ಕಲಿಸೋಕೆ ಶುರು ಮಾಡಿ ಒಂದು ವರ್ಷ ಆಯ್ತಾ ಬಂತು, ಇನ್ನೂ ಓಂ ಪ್ರಥಮದಲ್ಲೇ ಇದ್ದೀಯಲ್ಲೋ ಹೊಲಸು ನಾಲಿಗೆಯವನೇ, ಏನಾಗಿದೆ ನಿನ್ನ ನಾಲಿಗೆಗೆ? ನಮ್ಮ ವಂಶದ ಯಾವಳೋ ಯಾವನೋ ಮೂರ್ಖನ ಜೊತೆ ಮಲಗಿ ಎದ್ದಿರಬೇಕು, ಆ ಸಾಲಿಗೆ ನೀನು ಹುಟ್ಟಿದ್ದೀಯಲ್ಲೋ... ಎಬರೇಶಿ''...ಹೀಗೆ ಎಲ್ಲೆಂದರಲ್ಲಿ

**ಸುಬ್ಬಯ್ಯ ಭಟ್ಟರು ಸಣ್ಣದರಿಂದಲೂ ಮಂತ್ರ ಕಲಿಯಲು ಪಡಿಪಾಟಲು ಪಡುತ್ತಾ ಅಪ್ಪನ ಕೈಯಲ್ಲಿ ಕಿವಿ ಹಿಂಡಿಸಿಕೊಂಡು, 'ದಡ್ಡ ಮುಂಡೇದೇ ಯಾರೋ ನಿನ್ನ ನಾಲಿಗೆ ತಿದ್ದಿದ್ದು? ಮಂತ್ರ ಕಲಿಸೋಕೆ ಶುರು ಮಾಡಿ ಒಂದು ವರ್ಷ ಆಯ್ತಾ ಬಂತು, ಇನ್ನೂ ಓಂ ಪ್ರಥಮದಲ್ಲೇ ಇದ್ದೀಯಲ್ಲೋ ಹೊಲಸು ನಾಲಿಗೆಯವನೇ, ಏನಾಗಿದೆ ನಿನ್ನ ನಾಲಿಗೆಗೆ? ನಮ್ಮ ವಂಶದ ಯಾವಳೋ ಯಾವನೋ ಮೂರ್ಖನ ಜೊತೆ ಮಲಗಿ ಎದ್ದಿರಬೇಕು, ಆ ಸಾಲಿಗೆ ನೀನು ಹುಟ್ಟಿದ್ದೀಯಲ್ಲೋ... ಎಬರೇಶಿ''...ಹೀಗೆ ಎಲ್ಲೆಂದರಲ್ಲಿ ಬಾಯಿಗೆ ಬಂದಂತೆ ಬೈಯುತ್ತಿದ್ದರು ಅಪ್ಪಯ್ಯ.**



ಬಾಯಿಗೆ ಬಂದಂತೆ ಬೈಯುತ್ತಿದ್ದರು ಅಪ್ಪಯ್ಯ. ಪೂಜೆಯ ಸಮಯದಲ್ಲಿ ಆರತಿ ತಟ್ಟೆಯನ್ನೋ, ತೀರ್ಥದ ಬಟ್ಟಲನ್ನೋ ಸರಿಯಾದ ಸಮಯಕ್ಕೆ ಕೊಡದೇ ಇದ್ದರೆ ದೇವರ ಎದುರಿನಲ್ಲೇ ಸಹಸ್ರನಾಮಾರ್ಚನೆ ಶುರುವಾಗುತ್ತಿತ್ತು. ಕೊನೆಗೆ ಮಂತ್ರ ಕಲಿಯಲಾಗದೆ ಯಾವುದೋ ನಾಕು ಶ್ಲೋಕಗಳನ್ನು ಕಲಿತುಕೊಂಡು, ಪೂಜಾ ಸಮಯದಲ್ಲಿ ಅಪ್ಪಯ್ಯನಿಗೆ ಕೆಮ್ಮು ಬಂದಾಗಲೋ, ನಾಲಿಗೆ ಒಣಗಿ ಹೋದಾಗಲೋ ಯಾವುದಾದರೊಂದು ಶ್ಲೋಕವನ್ನು ಹೇಳುತ್ತಾ ಅಪ್ಪಯ್ಯನಿಗೆ ಸಾಥಿ ಕೊಡುತ್ತಿದ್ದರು. ಉಳಿದಂತೆ ರಶೀದಿ ಪುಸ್ತಕದ ಜೊತೆ ಬದುಕು ಕಳೆಯುತ್ತಾ, ಅದರೊಳಗೇ ಒಂದು ಪರಮಾರ್ಥ ಜ್ಞಾನವನ್ನು ಅರಸುತ್ತಾ, ಲೆಕ್ಕವೆಂದರೆ ಅದು ಬರೀ ಲೆಕ್ಕವಲ್ಲ, ಅದರಲ್ಲಿ ಬೇರೆ ಏನೋ ಇದೆ. ಇಲ್ಲದಿದ್ದರೆ ಇಡೀ ಜಗತ್ತೇ ಲೆಕ್ಕದ ಮೇಲೆ ನಿಂತಿದೆ. ಅಷ್ಟೇಕೆ... ದೇವರೂ ಕೂಡ ಇದಕ್ಕೆ ಹೊರತಲ್ಲ. ಪುಣ್ಯದ ಲೆಕ್ಕ ಬರೆಯೋನು ಒಬ್ಬ, ಪಾಪದ ಲೆಕ್ಕ ಬರೆಯೋನು ಒಬ್ಬ, ಶಿಕ್ಷೆ ಕೊಡೋಕೂ ಲೆಕ್ಕ ಮಾಡಬೇಕು, ಸ್ವರ್ಗಕ್ಕೆ ಕಳಿಸೋಕೂ ಲೆಕ್ಕ ಮಾಡಬೇಕು. ಹೀಗೆ ತನಗೆ ಇದ್ದ ತರ್ಕ ಜ್ಞಾನದಲ್ಲೇ ಲೆಕ್ಕದ ಆಂತರ್ಯವನ್ನು, ಅದರ ಒಳಗನ್ನು ವಿಶ್ಲೇಷಿಸುತ್ತಾ, ಓಹೋ! ಇದರ ಲೆಕ್ಕ ಬೇರೇನೇ ಇದೆ ಎಂದುಕೊಂಡು ಖುಷಿಪಡುತ್ತಾ, ಓಹೋ ತನ್ನ ಲೆಕ್ಕ ಸರಳವಾಗಿಲ್ಲ ಎಂದುಕೊಂಡು, ತನ್ನನ್ನು ಚಿತ್ರಗುಪ್ತನಿಗೆ ಹೋಲಿಸಿಕೊಂಡು ಹೆಮ್ಮೆಪಡುತ್ತಾ ಬದುಕುತ್ತಿರುವಾಗಲೇ ಸುಬ್ಬಯ್ಯ ಭಟ್ಟರ ಬದುಕನ್ನು ಬದಲಾಯಿಸಲೆಂದೇ ಬಂದವಳು ಆ ಹುಡುಗಿ. ದಿನವೂ ಪೂಜೆಗೆಂದು ಬರುತ್ತಿದ್ದ ಆ ಹುಡುಗಿಯನ್ನು ನಮ್ಮ ಸುಬ್ಬಯ್ಯ ಭಟ್ಟರು ದಿನವೂ ನೋಡುತ್ತಿದ್ದರೂ ಅವಳ ಮೇಲೆ ಪ್ರೀತಿ ಹುಟ್ಟಿದ್ದು ಒಂದು ವಿಶೇಷ ಕಾರಣದಿಂದಲೇ. ದಿನವೂ ದೇವಸ್ಥಾನಕ್ಕೆ ಬರುತ್ತಿದ್ದ ಆ ಹುಡುಗಿ, ಮಹಾ ಮಂಗಳಾರತಿ ಸೇವೆಗೆಂದೋ, ಅಭಿಷೇಕ ಸೇವೆಗೆಂದೋ ರಶೀದಿ ತೆಗೆದುಕೊಳ್ಳಲು ಇವನ ಬಳಿಗೇ ಬರುತ್ತಿದ್ದಳು. ಇವನೂ ಸಹಜವಾಗಿಯೇ ರಶೀದಿ ಬರೆದುಕೊಟ್ಟು ತನ್ನ ಲೆಕ್ಕದ ಚಿಂತನೆಯಲ್ಲಿ ಮುಳುಗಿಬಿಡುತ್ತಿದ್ದ. ಒಂದು ದಿನ ಆ ಹುಡುಗಿ ಯಾರೋ ಹರೆಯದ ಹುಡುಗನಿಗೆ ಗುರುವಿನಂತೆ ಉಪದೇಶ ಮಾಡುತ್ತಿದ್ದುದನ್ನು ಕೇಳಿ ಅತ್ತ ಕಡೆ ಕಣ್ಣು ಹಾಯಿಸಿದಾಗ, ವಿನಯವಂತ ಶಿಷ್ಯನಂತೆ ಕೈಕಟ್ಟಿ ನಿಂತುಕೊಂಡ ಹುಡುಗ. ಸೊಂಟದ ಮೇಲೆ ಕೈಯೇರಿಸಿಕೊಂಡು ಕಣ್ಣರಳಿಸಿಕೊಂಡು ದೊಡ್ಡ ದನಿಯಲ್ಲಿ ''...ಏ, ವಿವೇಕಾನಂದರು ಹುಟ್ಟಿ ಬೆಳೆದ ನಾಡು ಕಣೋ ಇದು. ನಿಮ್ಮಂಥ ಯುವಕರು ಹೀಗೆ ಪ್ರೀತಿ ಪ್ರೇಮಾ ಅಂತ ಹಾಳಾಗದೇ ಬದುಕೋದು ಕಲಿತುಕೊಳ್ಳಿ. ಯಾವುದಾದರೂ ಕೆಲಸ ಹಿಡಿದು ತಂದೆ ತಾಯೀನ ಪ್ರೀತಿಯಿಂದ ಸಾಕೋಕೆ ನೋಡಿ. ತಂದೆ ತಾಯಿ ಅಂದರೆ ನಮಗೆ ಜನ್ಮ ಕೊಟ್ಟ ದೇವರು ಕಣೋ... ಇಪ್ಪತ್ತು ವರ್ಷ ಸಾಕಿ ಬೆಳೆಸಿದ ತಂದೆ ತಾಯಿಗಿಂತ ಹುಡುಗಿ ದೊಡ್ಡವಳಲ್ಲ ತಿಳುಕೊಳ್ಳಿ...'' ಹಾಗೆ ಮಾತಾಡುವಾಗ ಕಿರುಗಣ್ಣಲ್ಲಿ ಸುತ್ತಮುತ್ತ ಗಮನಿಸುತ್ತಾ ಇನ್ನೂ ಹೆಚ್ಚು ಹುರುಪಿನಿಂದ, ''ನೋಡು, ಇನ್ನ ಮೇಲೆ ನನ್ನ ಹಿಂದೆ ಅಲೆಯೋ ಪ್ರಯತ್ನ ಮಾಡಬೇಡ ತುಂಬ ಕೆಟ್ಟವಳು ನಾನು'' ಎಂದು ಕೊನೆಯ ಮಾತನ್ನು ಘಟ್ಟಿಸಿ ಹೇಳಿ ಬರಬರನೆ ಮುಂದೆ ಬಂದು ನಿಧಾನಕ್ಕೊಮ್ಮೆ




ಹಿಂತಿರುಗಿ ನೋಡಿ, ಆ ಹುಡುಗ ಮೆಟ್ಟಿಲಿಳಿದು ಕೆಳಗೆ ಹೋಗುತ್ತಿರುವುದನ್ನು ಅದ್ಯಾವುದೋ ಹೇಳಲಾರದ ಭಾವದಲ್ಲಿ ಗಮನಿಸಿ ಸೀದಾ ರಶೀದಿಯನ್ನು ಪಡೆಯಲು ಬಂದ ಹುಡುಗಿಯನ್ನು ನೋಡಿ ಸುಬ್ಬಯ್ಯ ಒಂದು ಸಾರಿ ಉಗುಳು ನುಂಗಿದ. ರಾತ್ರಿ ವಿವೇಕಾನಂದರ ರಾಜಯೋಗ ಪುಸ್ತಕದ ಮೇಲಿದ್ದ ವಿವೇಕಾನಂದರ ಚಿತ್ರವನ್ನು ಕಣ್ತುಂಬಿಕೊಳ್ಳುತ್ತಿರುವಾಗಲೇ, ತಾನೇ ವಿವೇಕಾನಂದರಂತೆ ಕಾಷಾಯ ವಸ್ತ್ರಧಾರಿಯಾಗಿ ತಂಬಿಟ್ಟಿನಂತಹ ಗಲ್ಲಗಳನ್ನು ಬೆಳೆಸಿಕೊಂಡು, ಕಣ್ಣಲ್ಲಿ ವಿಶೇಷವಾದ ಕಾಂತಿಯನ್ನು ಮೂಡಿಸಿಕೊಂಡಂತೆಯೂ, ಕೈ ಕಟ್ಟಿಕೊಂಡು ಅರೆ ಊರ್ಧ್ವ ಮಸ್ತಕನಾಗಿ ಕಿರುಗಣ್ಣಲ್ಲಿ ಅತೀತದ ಧ್ಯಾನ ಮಾಡುತ್ತಾ ನಿಂತಂತೆಯೂ, ಇದ್ದಕ್ಕಿದ್ದಂತೆ ಸಾಗರ ಬಂದು ತನ್ನ ಸುತ್ತಾ ಸುತ್ತುವರಿದಂತೆಯೂ, ಆ ಹುಡುಗಿ ತನ್ನನ್ನು ತೋರಿಸುತ್ತಾ ಇದು ವಿವೇಕಾನಂದರು ಹುಟ್ಟಿದ ನಾಡು ಎಂದು ತಿರುತಿರುಗಿ ತನ್ನನ್ನು ತೋರಿಸಿದಂತೆಯೂ ಯೋಚನೆ ಬಂದು, ಆ ಹುಡುಗಿ ಬೈಯುತ್ತಿದ್ದ ಮೋಡಿಯನ್ನು, ಆ ಭಾಷೆಯ ಲಾಲಿತ್ಯವನ್ನು, ಸೊಗಸನ್ನು, ನೆನೆಯುತ್ತಾ ಕೂತಿದ್ದಂತೆ ಇಂಚಿಂಚೇ ಆ ಹುಡುಗಿಯ ರೂಪ ಎದೆಯಲ್ಲಿ ಬಂದು ಅಂಕುರಿಸುತ್ತಾ, ಆ ಬೈಗುಳಗಳೆಲ್ಲಾ ತನ್ನ ತಲೆಯ ಮೇಲೆ ಪುಷ್ಪಾರ್ಚನೆಯಾದಂತೆ, ರಶೀದಿ ಕೇಳಲು ಬಂದ ಆ ಹುಡುಗಿ ತನ್ನ ಕೈ ಹಿಡಿದು ಮೇಲೆತ್ತಿದಂತೆ ಭಾಸವಾಗಿ, ರೋಮಾಂಚಿತವಾಗಿ, ಬಿಸಿಯುಸಿರು ಚೆಲ್ಲುತ್ತಾ, ಉಸಿರಿನೊಂದಿಗೆ ಬಂದ ಆ ಹುಡುಗಿಯ ನೆನಪು ಎದೆಯಲ್ಲಿ ಪಲ್ಲವಿಸಿ ಪ್ರೇಮವಾಗಿ ಪರಿವರ್ತನೆಯಾಗೇಬಿಟ್ಟಿತು.

೨

''ಎಂತಾ ಊರಿಗೆ ಬಂದು ಬಿಟ್ಟೆನಪ್ಪಾ, ಕರುಣೆ, ದಯೆ ಇಲ್ದಿರೋ ಊರು, ತಥ್, ಸರ್ಕಾರದವರಿಗೆ ಬುದ್ಧಿ ಬೇಡವಾ. ಇಂಥ ಹಾಳಾದ ಊರಿಗೆ ನನ್ನ ವರ್ಗಾ ಮಾಡಿಬಿಟ್ಟರಲ್ಲಾ, ಹೆಂಗಪ್ಪಾ ಬದುಕೋದು ಇಲ್ಲಿ? ಆ ಹಡಬೇಗುಟ್ಟಿದವನು ಎಲ್ಲೂ ಮನೇ ಸಿಗಲಿಲ್ಲಾಂತ ಈ ಮನೇಗೆ ತಂದು ಹಾಕಿದ್ನಲ್ಲಾ... ಆ ಡಾಕ್ಟರ್ಗೆ ಒಂದು ಮುರುಕಲು ಕ್ವಾರ್ಟರ್ಸ್, ನಾನು ಕಾಂಪೌಂಡರ್, ಅದಕ್ಕೆ ಈ ಹಾಳೂರಲ್ಲಿ ಒಂದು ಮುರುಕಲು ಬಾಡಿಗೆ ಮನೆ. ಎಂಥಾ ರಾಕ್ಷಸರು ಇಲ್ಲಿ ಬದುಕಿತ್ತಾರೆ'', ಎಂದುಕೊಂಡು ನೋಡುತ್ತಿರುವಾಗಲೇ ಒಳಗೆ ಹೆಂಡತಿ ಲಕ್ಷ್ಮಿ ಒಂದಾ ಮಾಡಬೇಕು ಎನ್ನತೊಡಗಿದಳು. ಅಷ್ಟೊತ್ತಿಗೆ ಪಕ್ಕದಲ್ಲಿ ಏನೋ ಗಲಾಟೆ ಆಗ್ತಿರೋದು ಕೇಳಿದ್ದರಿಂದ, ತಿರುಗಿ ಆ ಕಡೆ ನೋಡುತ್ತಿದ್ದಾಗಲೇ ಆ ದೃಶ್ಯ ಕಣ್ಣಿಗೆ ಬಿದ್ದು ಭಟ್ಟರ ಎದೆ ಝಲ್ಲೆಂದಿತು. ದಿಬ್ಬದ ಮೇಲಿದ್ದ ಭಟ್ಟರ ಬಾಡಿಗೆ ಮನೆಯಿಂದ ಆ ದೃಶ್ಯ ಸ್ಪಷ್ಟವಾಗಿಯೇ ಕಾಣುತ್ತಿತ್ತು. ಚಪ್ಪಡಿ ಕಲ್ಲಿನ ಮೇಲೆ ತಲೆ-ಮೈ ಬೇರೆ ಬೇರೆಯಾದ ಸತ್ತ ಕುರಿ; ಅದರ ಪಕ್ಕದಲ್ಲಿ ಒಂದೆರಡು ಜನ ಕೂತಿದ್ದಾರೆ. ಮತ್ತೊಂದೆರಡು ಜನ ನಿಂತು ಏನೋ ದೊಡ್ಡ ದನಿಯಲ್ಲಿ ಮಾತಾಡುತ್ತಿದ್ದಾರೆ. ಅಲ್ಲಿ ರಾತ್ರಿ ಅಮ್ಮನ ಸೇವೆಗೆಂದು ಕಡಿದ ಕುರಿಯ ತಲೆ-ಕಾಲು ನನಗೇ ಬೇಕೆಂದು ಪಟ್ಟುಹಿಡಿದು ಕೂತಿದ್ದ ಕುಣಿಮಿಣಿ ಚೆನ್ನಯ್ಯನನ್ನು ಕಂಡು ಉಳಿದ ಸರೀಕರು ಒಪ್ಪದೆ ಜಗಳಕ್ಕೆ ಬಿದ್ದಿದ್ದರು. ಕುರಿ ಬಾಡು, ಗೋಟಿ, ತಲೆ-ಕಾಲು ಎಲ್ಲಾ ಸಮ ಸಮ ಪಾಲಾಗ್ಬೇಕು. ಇಲ್ಲಿ ಯಾರೂ ಹೆಚ್ಚಲ್ಲ ಯಾರೂ ಕಮ್ಮಿಯಿಲ್ಲ ಎಂದ ಗಂಗಣ್ಣನ ಮಾತನ್ನು ಕೇಳಿ ಕುಣಿಮಿಣಿ ಚೆನ್ನಯ್ಯ ಎಗರಿ ಬಿದ್ದು ''ಲೇ... ರಾತ್ರಿ ಅಮ್ಮ ಗದ್ದುಗೆ ಏರೋ ಹೊತ್ನಲ್ಲಿ ಎಲ್ಲಾ ಕುಡ್ದು ವಾಲಾಡ್ತಿದ್ರಿ ಮಕ್ಕಳ. ಕೈ ಸೇದಿಹೋಗಂಗೆ ಕುಣಿಮಿಣಿ ಬಡದವನು ನಾನು; ಅದ್ಕೆ ಕುರಿ ತಲೆ-ಕಾಲು ನನಗೇ ಬರಬೇಕು ಕಣಿರ್ಲಾ'', ಎನ್ನುತ್ತಾ ತನ್ನ ವರಾತವನ್ನು ನಿಲ್ಲಿಸದೆ ಜಗಳ ತೆಗೆಯುತ್ತಿದ್ದನು. ಪಕ್ಕದಲ್ಲಿ ಮಂಕರಿ ತುಂಬ ಕೋಳಿ ತಲೆಗಳನ್ನು ಎಣಿಸಿ ಪಾಲುಹಾಕುತ್ತಿದ್ದ ಲಕ್ಷ್ಮಪ್ಪನು, ಅಮ್ಮನ ಗುಡಿ ಮುಂದೆ ಕೋಳಿ ಕುಯ್ಯುವ ಯಡಂಗಿಯನ್ನು ಬೈಯುತ್ತಾ ''ಲೇ ಯಡಂಗಿ, ಕೋಳಿ ಕುಯ್ಯುವಾಗ ಮ್ಯಾತೆ ಶಿರದ ಕೊನೇಗಂಟ ಕುಯ್ಯಬೇಕು ಕಣ್ಲಾ... ತುದಿಗೆ ಕುಯ್ದುಬುಟ್ರೆ ನಾವೇನು ಮಣ್ಣು ತಿನ್ಬೇಕಾ...'' ಎಂದನು. ಅದಕ್ಕೆ ಯಡಂಗಿ ತಲೆ ಕೆರೆದುಕೊಳ್ಳುತ್ತಾ, ''ಏ ಬುಡಣ್ಣಾ ನಾಳಿಕ್ಕೆ ಹಂಗೆ ಕುಯ್ತೀನಂತೆ; ನಾಳಿಕ್ಕೂ ಜನ ಬರ್ತಾರಂತೆ. ನಮ್ಮೂರ ಅಮ್ಮ ಅಂದ್ರೆ ಏನು ಸಾಮಾಂದಳಲ್ಲ. ದೇಶ ದೇಶಕ್ಕೇ ಗೊತ್ತು ಅವಳು'' ಅಮ್ಮನ ಮಹಿಮೆಯನ್ನು ಹಾಡಿ ಹೊಗಳಿದ ಯಡಂಗಿ. ಅಂತೂ ಏನೋ ಒಪ್ಪಂದಕ್ಕೆ ಬಂದ ಗುಂಪು ಕುರಿಯನ್ನಿಡಿದು ಸಿಗಿಯತೊಡಗಿತು. ಕುಣಿಮಿಣಿ ಚೆನ್ನಯ್ಯನೇ ಮುಂದಾಳಾಗಿ ಚರ್ಮ ಸುಲಿಯುತ್ತಿದ್ದನು. ಲಕ್ಷ್ಮಪ್ಪನು ಅವನನ್ನು ಎಚ್ಚರಿಸುತ್ತಾ ''ಲೇ ಹುಶಾರು ಕಣೋ, ನೂರೈವತ್ತು ರೂಪಾಯಿ ದುಡ್ಡದು ಹರ್ದುಗಿರ್ದೀಯಾ'', ಅಂದಿದ್ದಕ್ಕೆ ಚೆನ್ನಯ್ಯನು ಎಚ್ಚರದಿಂದ ಚರ್ಮವನ್ನು ಬಿಡಿಸುತ್ತಾ, ''ನತ್ತಲ ಹೆಪ್ಪುಗಟ್ಟೈತೆ ಒಂದು ಪಾತ್ರೆ ತಗಂಬಾರೆ ಇವಳೇ'' ಎಂದು ತನ್ನ ಹೆಂಡತಿಯನ್ನು ಕೂಗಿ ಕರೆದು, ''ನತ್ತಲದ ಹುರುಕ್ಲು ಎದೆನೋವಿಗೆ ಒಳ್ಳೇದಂತೆ ನಿಜವಾ ಯಣ್ಣಾ...?'' ಎಂದು ಕೇಳಿದ್ದಕ್ಕೆ ಯಡಂಗಿ ಏನನ್ನೋ ನೆನೆಸುತ್ತಾ ''ಎದೆನೋವಿಗೆ ಒಳ್ಳೇದೋ ಏನೋ ಗೊತ್ತಿಲ್ಲಾ... ಆದ್ರೆ ರಾತ್ರಿ ನಂಚಿಕೇಗಂತು ಬೊಂಬಾಟಾಗಿರ್ತದೆ ಕಣಿರ್ಲಾ'' ಎಂದು ನಕ್ಕ. ಅವರ ಬಾಡು ಕುಯ್ಯುವ ಕೆಲಸ ಮುಂದುವರಿಯಿತು.

ನೋಡುತ್ತಾ ನಿಂತಿದ್ದ ಭಟ್ಟರ ಕರುಳು ಕಿವುಚಿ

ಬಂದಂತಾಯಿತು. ತಾನು ಊರಲ್ಲಿದ್ದೇನೋ ಅಥವಾ ನರಕದಲ್ಲಿದ್ದೇನೋ ಎನಿಸಿ ಬಾಗಿಲು ಝಾಡಿಸಿ ಒಳಗೆ ನಡೆದರು. ಬವಳಿ ಬಂದಂತಾಗುತ್ತಿತ್ತು. ಒಳಗೆ ಹೆಂಡತಿ ಲಕ್ಷ್ಮಿ ಒಂದಾ ಮಾಡ್ಬೇಕು ಎಂದು ಅರಚಾಡುತ್ತಿದ್ದಳು. ಅವಳಿಗೊಂದು ವಿಚಿತ್ರ ಕಾಯಿಲೆ ಅಂಟಿಕೊಂಡಿತ್ತು. ನಿಮಿಷ ನಿಮಿಷಕ್ಕೂ ಒಂದಾ ಮಾಡಬೇಕು ಎಂದು ಅರಚಾಡುವುದು, ಕರೆದುಕೊಂಡು ಹೋಗಿ ಬಚ್ಚಲಿಗೆ ಕೂರಿಸಿದರೆ, ಗಂಡನ ಕಡೆ ತಿರುಗಿ, ''ನಿಂತೇ ಇದ್ದೀರಲ್ಲಾ, ನೀವು ನನ್ನ ಕೂಡೆ ಒಂದಾ ಮಾಡಿ'' ಎಂದು ಒತ್ತಾಯ ಮಾಡುತ್ತಿದ್ದಳು. ಎಂಟು ವರ್ಷದಿಂದ ಭಟ್ಟರಿಗೆ ಇದು ಅಭ್ಯಾಸವಾಗಿಹೋಗಿತ್ತು.

''ಲಕ್ಷ್ಮಿ, ನಾನು ಆಸ್ಪತ್ರೆಗೆ ಹೋಗಬೇಕು ಇವತ್ತು.''

''ನನ್ನನ್ನ ಆಸ್ಪತ್ರೆಗೆ ಕರಕೊಂಡು ಹೋಗೋದಿಲ್ಲವೆ? ನನ್ನ ರೋಗಕ್ಕೆ ಏನಾದ್ರೂ ಮದ್ದು ಹುಡುಕಿ ಅಂದ್ರೆ. ನನಗೆ ಸಾಕಾಗಿಹೋಗಿದೆ; ಇಲ್ಲಾಂದ್ರೆ ನಾನು ಸತ್ತುಹೋಗ್ತೀನಿ.''

''ಲಕ್ಷ್ಮಿ ಅಂತದ್ದೇನೂ ಆಗಿಲ್ಲ ನಿನಗೆ, ಒಂದಾ ಮಾಡೋದು ಮನುಷ್ಯನಿಗೆ ಸಹಜ ತಾನೇ, ನಾನು ತಾನೇ ಏನು ಮಾಡಲಿ? ಶಿರಸಿ ಆಸ್ಪತ್ರೆಯಿಂದ ಹಿಡಿದು ಬೆಂಗಳೂರು ಆಸ್ಪತ್ರೆ ತನಕ ಎಲ್ಲಾ ಕಡೆ ತೋರಿಸಿ ಆಯ್ತು. ಈ ಊರಲ್ಲಿ ಯಾರಾದ್ರೂ ನಾಟಿ ವೈದ್ಯರಿದ್ರೆ ಹುಡುಕಿ ನೋಡೋಣ, ತಡಿ.''

''ನನ್ನ ಸೀರೇನಾ ಎಷ್ಟು ದಿನಾಂತ ಒಗೀತೀರಾ, ಬೇರೆ ಒಂದು ಮದುವೆನಾದ್ರೂ ಆಗಬಾರ್ದಾ?'

''ಈ ವಯಸ್ಸಿನಲ್ಲಿ ನನಗೆ ಯಾರು ಹೆಣ್ಣು ಕೊಡ್ತಾರೆ ಲಕ್ಷ್ಮಿ, ನೋಡೋಣ ಇರು''.

''ಏನೂಂದ್ರೆ ನನ್ನ ಬಿಟ್ಟು ಬೇರೆಯವಳನ್ನ ಮದುವೆ ಆಗೋ ಮನಸ್ಸಿದೆ ಅಲ್ಲವಾ ನಿಮಗೆ?''

''ಇಲ್ಲಮ್ಮ... ಒಂದಾ ಮಾಡೋ ಹಂಗಾದ್ರೆ ಎದ್ದು ಬಚ್ಚಲಿಗೆ ಹೋಗ್ಬಿಡು. ನಾನು ಬೇಗ ಬರ್ತೀನಿ ಆಯ್ತಾ...''

ಎಂದವರೇ ಒಳಗೆ ಹೋಗಿ ಅವಲಕ್ಕಿಗೆ ಒಗ್ಗರಣೆ ಕೊಟ್ಟು, ತಾನೂ ತಿಂದು ಹೆಂಡತಿಗೂ ತಿನ್ನಿಸಿ ಹುಷಾರಾಗಿರಲು ಹೇಳಿ ಬಾಗಿಲಿಗೆ ಬೀಗ ಹಾಕಿ ಹೊರನಡೆದರು.

ಸುತ್ತಮುತ್ತ ಎಲ್ಲೆಲ್ಲೂ ಕೆಂಪು ಹೂವು ಬಿಟ್ಟ ರೋಜಾ ಮೆಳೆಗಳದೇ ಕಾರುಬಾರು. ಎಲ್ಲಿ ನೋಡಿದರಲ್ಲಿ ತಲೆ ಎತ್ತಿರುವ ಕಾಡು ಜಾಲಿ ಗಿಡಗಳು. ಕೇರಿಯಲ್ಲಿ ಇದ್ದ ಏಳೆಂಟು ಮನೆಗಳ ಹೆಂಚುಗಳ ಮೇಲೆ ಹೊಗೆ ಸುರುಳಿ ಸುರುಳಿಯಾಗಿ ಹರಡಿಕೊಂಡು ಮೇಲೇರುತ್ತಿತ್ತು. ವಿಚಿತ್ರ ಘಾಟು ವಾಸನೆ. ತನ್ನ ಜೀವನದಲ್ಲಿ ಯಾವತ್ತೂ ಈಥರದ್ದೊಂದು ವಾಸನೆಯನ್ನು ಕುಡಿದಿರಲಿಲ್ಲ. ಗೊಣ್ಣೆ ಸುರುಕ ಮಕ್ಕಳೆಲ್ಲಾ ವಿಚಿತ್ರವಾದ ಉತ್ಸಾಹದಲ್ಲಿ ಮನೆಯಿಂದ ಮನೆಗೆ ಅಡ್ಡಾಡುತ್ತಿದ್ದರು. ದೊಡ್ಡವರು ಕತ್ತಿ, ಕೊಡಲಿ ಹಿಡಿದು ಅಡ್ಡಾಡುತ್ತಿದ್ದರು. ಆ ವಿಚಿತ್ರ ಪರಿಸರದಲ್ಲಿ ಅಪ್ಪಯ್ಯ ನೆನಪಾದದ್ದು ಆಶ್ಚರ್ಯ ಹುಟ್ಟಿಸಿತು.

ಸುಬ್ಬಯ್ಯ ಭಟ್ಟರ ಪ್ರೇಮ ಪ್ರಸಂಗ ಅಪ್ಪಯ್ಯನ ಕಿವಿಗೆ ಬಿದ್ದು ದೊಡ್ಡ ರಾದ್ಧಾಂತವಾಗುತ್ತದೆ ಎಂದುಕೊಂಡ ಭಟ್ಟರಿಗೆ ಅಪ್ಪಯ್ಯನಿಗೆ ಅದೆಲ್ಲಾ ಗೊತ್ತಾಗಿದ್ದೂ ಸುಮ್ಮನಿರುವುದನ್ನು ನೋಡಿ ಆಶ್ಚರ್ಯವಾಗಿತ್ತು. ಎರಡು ದಿನ ಅಪ್ಪ, ಮಗ ಇಬ್ಬರ ನಡುವೆ ಯಾವುದೇ ಮಾತುಕತೆಗಳಾಗಿರಲಿಲ್ಲ. ಒಂದು ದಿನ ಭಟ್ಟರೇ ಮನಸ್ಸು ಮಾಡಿ ಅಪ್ಪಯ್ಯನ ಎದುರು ನಿಂತು, ನಾನು ಆ ಹುಡುಗಿಯನ್ನು ಮದುವೆ ಆಗುತ್ತೇನೆಂದು ಹೇಳಿದಾಗ, ಒಂದು ಕ್ಷಣ ಮೌನವಾದ ಅಪ್ಪಯ್ಯ, ''ಆಯ್ತು.... ಒಳ್ಳೇದು'', ಎಂದರು. ಭಟ್ಟರು ಗಲಿಬಿಲಿಯಾದರು. ಅನುಮಾನದಿಂದ ಅಪ್ಪಯ್ಯನ ಮುಖವನ್ನೇ ನೋಡಿದರು. ಒಂದು ಕ್ಷಣ ಸುಮ್ಮನಿದ್ದ ಅಪ್ಪಯ್ಯ, ''ನಿನ್ನ ದಾರಿ ಸರಿ ಇಲ್ಲ ಸುಬ್ಬು. ಆ ಹುಡುಗಿ ವಿಚಾರದಲ್ಲಿ ಏನೋ ಲೆಕ್ಕ ತಪ್ಪಾಗಿದೆ. ನೀನು ಲೆಕ್ಕ ತಪ್ಪಿದ್ದೀಯ.'' ಭಟ್ಟರು ಏನೂ ಮಾತಾಡಲಿಲ್ಲ. ಮತ್ತೆ ಅಪ್ಪಯ್ಯನೇ ಮಾತು ಮುಂದುವರಿಸಿ ''ಅವರಮ್ಮನ ಗುಣ ಸರಿ ಇಲ್ಲ. ಅಮ್ಮನ ತಪ್ಪಿಗೆ ಮಗಳೇನು ಮಾಡ್ತಾಳೆ ಅಂತ ನೀನು ಕೇಳಬಹುದು, ಆದ್ರೆ ಆ ಪ್ರಶ್ನೆಗೆ ಯಾವತ್ತೂ ಉತ್ತರ ಸಿಗೋದಿಲ್ಲ. ಅದು ಹಾಗೇ,'' ಭಟ್ಟರು ಸುಮ್ಮನಿರಲಾರದೆ ''ಅದು ಹೇಗೆ ಗೊತ್ತು ನಿನಗೆ ಅವರಮ್ಮನ ನಡತೆ ಸರಿ ಇಲ್ಲಾ ಅಂತ?'' ಎಂದು ಕೇಳಿದರು. ಒಂದು ಕ್ಷಣ ಸುಮ್ಮನಿದ್ದ ಅಪ್ಪಯ್ಯ ದೀರ್ಘವಾದ ನಿಟ್ಟುಸಿರು ಬಿಟ್ಟು, ''ನಿಮ್ಮಮ್ಮ ಸತ್ತು ಹದಿನೆಂಟು ವರ್ಷ ಆಯ್ತು. ತುಂಬ ಕಷ್ಟ ಅಲ್ಲವಾ ಒಬ್ಬನೇ ಬದುಕೋದು. ಸುಬ್ಬು, ಮನಸ್ಸಿನ ಮುಂದೆ ಯಾವುದೂ ನಿಲ್ಲೋದಿಲ್ಲ. ಕೋಡಿ ಬಿದ್ದ ಕಟ್ಟೇಲಿ ಎಲ್ಲ ಕೊಚ್ಚಿ ಹೋಗ್ತಾವೆ; ನಿಯಮಗಳು, ನಂಬಿಕೆಗಳು. ಅರ್ಥ ಆಯ್ತಲ್ಲ?. ನಾಳೆ ಶ್ಯಾಮಭಟ್ಟರ ಮನೇಗೆ ಹುಡುಗಿ ನೋಡೋಕೆ ಹೋಗಬೇಕು. ನಿನ್ನ ವಿಷಯ ಅವರಿಗೆ ಹೇಳಿದ್ದೀನಿ. ಅವರ ಮಗಳು ಲಕ್ಷ್ಮಿ ಬಿ.ಎ. ಓದಿದ್ದಾಳೆ. ಸಂಪ್ರದಾಯ ಗೊತ್ತಿರೋ ಹುಡುಗಿ. ಶ್ಯಾಮಭಟ್ಟರು ಒಂದು ಕೆಲಸಾನೂ ಕೊಡಿಸ್ತಾರಂತೆ. ನಾಳೆ ಅಲ್ಲಿಗೆ ಹೋಗಬೇಕು.''

# ಮತ್ತೊಂದು ಗೋರಿಯೊಳಗೆ....,



ಮಣ್ಣ ಸಾಲಲಿ ಮುಚ್ಚಿದ ಸಿಡಿಲ ಕಾಳು
ಹನಿಯೊಳಗೆ ಅಡಗಿರುವ ಭವದ ಸ್ವರೂಪ
ಜಿಗಿಯುವ ಜಲಪಾತದಲಿ ಹದವಾದ ಹಿಂಡು
ಜರಡಿಗೊಂಡ ಹನಿಯಿಂದ ಜಾರಿ ಬರಲಿರುವ ರೂಪ
ಇಣುಕುತಿದೆ ತವಕದಲಿ ಪೂರ್ಣಚಂದ್ರನ ಕಾಣಲು

ಚಿಗಿತ ಕುಸುರಿಗೆ ಬೆಚ್ಚನೆ ಕಂಬಳಿ ಹೊದಿಕೆ
ಜಾಗಟೆಯ ಗದ್ದಲದಲಿ ಮುದಗೊಂಡ ಬಿಂದು
ಪಲ್ಲಕ್ಕಿಯ ಮೇಲೆ ನಡೆದಾಡುವ ಹಂಬಲದಲಿ
ಸೆರಗ ಹಾಸಿದವರೂ ಒಡ್ಡಿದವರೂ ಸುರಿಸಿದ ಬೆವರಿನ ಫಲ

ಎಲ್ಲೋ ಮುಣುಗಿದವು ನಡುರಾತ್ರಿಯ ಕದನಗಳು
ತುಳಿದ ಗುರುತುಗಳಿಲ್ಲ ನೆತ್ತಿಯ ಮೇಲೆ
ಜಾರಿದ ಗಡಿಗೆಯಲಿ ಫಳ್ಳೆಂದ ಮಿಂಚು
ಕಲೆಯಿರದ ಮುಗುಳು ನಗು ಗಾಜಿನಂತೆ ನಿಚ್ಚಳ

ಕರೆದಂತೆ ತಿರುಗಿ ನಡೆವಂತೆ ಕೈ ಚಾಚಿದ ಹನಿ
ಆಸುಪಾಸಿನಲಿ ಕೊಂಡಿಗಳದೆ ಕಂತೆ
ಮುಳ್ಳು ಮೆತ್ತಿದ ಹೂವು ನುಂಗಿ ಹೀರಿದ ತೊಟ್ಟು
ಪಿಳುಕಿಸುವ ಕಣ್ಣಲಿ ಗೆಲುವಿನ ನಿರಾಳತೆ

ಗೆರೆ ಬರೆದು ರೂಪಿಸಿದ ಉಸಿರಾಟದ ಹುರಿಯಲಿ
ಮೆಲಕು ಹಾಕುತಿದೆ ಗರ್ಭದೊಳಗಿನ ಗುಟ್ಟನು
ಹೆಣದ ರಾಶಿಯ ಮೇಲೆ ಹಾದಿ ಮಾಡಿದ ಪಾಪ
ರೆಪ್ಪೆ ಸರಿಸಿದರೆ ಇಲ್ಲಿಯೂ ಅದರದೇ ರೂಪ
ಮುದುರಿ ಸರಿಯಲು ಹಿಂದೆ ಒಡೆದುಹೋಗಿದೆ ಮೊಟ್ಟೆ
ನಡೆಯಲೇಬೇಕು ಮಲಗಲು ಮತ್ತೊಂದು ಗೋರಿಯೊಳಗೆ...!


ತಿಪ್ಪೇಸ್ವಾಮಿ ದಾಮುಹಳ್ಳಿ
ನಂ. ೨೦೩೫/೧೫, ಶ್ರೀ ಗಿರಿರಂಗನಾಥಸ್ವಾಮಿ ನಿಲಯ, ೧೩ನೇ ಅಡ್ಡರಸ್ತೆ,
ಆಂಜನೇಯ ಬಡಾವಣೆ, ದಾವಣಗೆರೆ

ಭಟ್ಟರು ನಿಟ್ಟುಸಿರು ಬಿಟ್ಟರು. ಅಪ್ಪಯ್ಯ ನನಗೆ ಮೋಸ ಮಾಡ್ಬಿಟ್ಟ. ಇಂಥ ಹೆಂಗಸನ್ನು ತಂದು ಜೀವನ ಪೂರ್ತಿ ನರಕ ಅನುಭವಿಸೋ ಹಾಗೆ ಮಾಡ್ಬಿಟ್ಟ. ಈಗ ಬದುಕದೇ ವಿಧಿಯಿಲ್ಲ. ದಿನಾ ಮೂತ್ರದ ವಾಸನೆ ಕುಡ್ಕೊಂಡು ಬದುಕಬೇಕು. ಇವಳು ಸರಿಯಾದರೂ ಇವಳ ಜೊತೆ ಬಾಳೋಕಾಗದಷ್ಟು ಅಸಹ್ಯ ಬಂದುಬಿಟ್ಟಿದೆ ನನಗೆ. ...ಹೀಗೆ ನಾನಾ ಯೋಚನೆಗಳು ಅವರ ಮನಸ್ಸಿನಲ್ಲಿ ಮೂಡಿ ಮಾಯವಾಗುತ್ತಿದ್ದವು. ಆಸ್ಪತ್ರೆಗೆ ಬಂದಾಗ ಡಾಕ್ಟರ್ ರೋಗಿಗಳನ್ನು ಪರೀಕ್ಷೆ ಮಾಡುತ್ತಿದ್ದರು. ಭಟ್ಟರು ಅವರನ್ನು ಹೋಗಿ ಮಾತಾಡಿಸಿದಾಗ, ಅವರು ತಮ್ಮ ಕೆಲಸ ಮಾಡುತ್ತಲೇ ಇವರ ಜೊತೆ ಮಾತಾಡತೊಡಗಿದರು. ''ಏನು ಭಟ್ಟರೆ ಹೇಗಿದೆ ನಮ್ಮ ಊರು ?'' ಅದಕ್ಕೆ ಭಟ್ಟರು ಹಲ್ಗಿಂಜುತ್ತಾ ''ಎಂಥಾ ಊರು ಸಾರ್ ಇದು ? ಹೇಗೆ ಬದುಕ್ತಿದ್ದೀರಾ ಇಲ್ಲಿ ?'' ಎಂದರು. ಡಾಕ್ಟರ್ ''ನನಗೇನು ಹಂಗನ್ನಿಸಿಲ್ಲ. ಯಾರು ಹೆಂಗಾದ್ರೂ ಇರಲಿ, ನಾವು ಬದುಕೋದು ಮುಖ್ಯ ಅಲ್ಲವಾ ಭಟ್ಟರೆ. ನಿಮ್ಮ ಹೆಂಡತಿ ಕಾಯಿಲೆ ಹೇಗಿದೆ ?'' ಎಂದರು. ಅದಕ್ಕೆ ಭಟ್ಟರು ಚಕಿತರಾಗಿ, ''ಸಾರ್, ನಿಮಗೆ ಹೇಗೆ ಗೊತ್ತು'' ಎಂದು ಕೇಳಿದರು. ಅದಕ್ಕೆ ಡಾಕ್ಟರ್, ''ನನಗೆ ಶ್ಯಾಮಭಟ್ಟರ ಪರಿಚಯ ಇದೆ. ಅವರು ಎಲ್ಲಾ ವಿಷಯ ಹೇಳಿದ್ರು. ಅವರ ಕಡೆಯವರೇ ತಾನೆ ನೀವು ? ಹಾಂ ಒಂದು ವಿಷಯ; ಇಲ್ಲಿ ರಂಗಪ್ಪ ಅಂತ ಒಬ್ಬನಿದ್ದಾನೆ ನನ್ನ ಮಟ್ಟಿಗೆ ಅವನೊಬ್ಬ ವಂಡರ್, ಎಲ್ಲಾ ಗೊತ್ತು ಅವನಿಗೆ. ಅವಧೂತ ಅಂತಾರಲ್ಲ ಹಾಗಿದ್ದಾನೆ. ನಾವು ಡಾಕ್ಟರ್ಸ್ ವಾಸಿ ಮಾಡಕ್ಕಾಗದೇ ಇರೋ ಎಷ್ಟೋ ಕಾಯಿಲೇನಾ ಅವನು ವಾಸಿ ಮಾಡಿದ್ದಾನೆ. ನಾನು ಪರೀಕ್ಷೆ ಮಾಡಿದ್ದೇನೆ. ನಾವು ಹಳ್ಳಿ ಜನ ಮೂಢರು ಅಂತೆಲ್ಲಾ ಅನ್ಕೊಂಡಿರ್ತೀವಿ. ಅವರ ಲೆಕ್ಕ ತಾಳೆ ನೋಡೋಕೆ ಯಾರಿಗೂ ಸಾಧ್ಯವಿಲ್ಲ ಗೊತ್ತಾ. ಅವನ ಹತ್ತಿರ ನಿಮ್ಮ ಹೆಂಡತೀನ ಒಂದು ಸಾರಿ ಕರ್ಕೊಂಡುಹೋಗಿ. ಏನಾದ್ರೂ ಪ್ರಯೋಜನ ಆಗುತ್ತೆ.'' ಎಂದರು. ಅದಕ್ಕೆ ಭಟ್ಟರು, ''ನಾನು ಟ್ರಾನ್ಸ್‌ಫರ್ ತಗೋಳೋ ಯೋಚನೆ ಮಾಡ್ತಿದ್ದೀನಿ'' ಎಂದರು. ಅದಕ್ಕೆ ಡಾಕ್ಟರ್ ನಗುತ್ತಾ, ''ಯೋಚನೆ ಮಾಡಬಾರದು ಇವರೆ, ಕೆಲಸ ಮಾಡಬೇಕು. ಶ್ಯಾಮಭಟ್ಟರು ಹೇಳ್ತಿದ್ದರು. ಎಲ್ಲೂ ಮೂರು ತಿಂಗಳಿಗಿಂತ ಜಾಸ್ತಿ ಕೆಲಸ ಮಾಡಿಲ್ಲವಂತೆ ನೀವು.'' ಭಟ್ಟರು ಮುಖ ಕೆಳಗೆ ಹಾಕಿದರು.




೩

''ಡಾಕುಟ್ರು ಸಾರ್ ಮಗೀಗೆ ಹುಷಾರಿಲ್ಲ. ಒಂದು ಮಲೇರಿ ಮಾತ್ರೆ ಇದ್ರೆ ಕೊಡ್ತೀರಾ ?'' ರಂಗಪ್ಪ, ಭಟ್ಟರ ಮನೆ ಎದುರಿಗೆ ಬಂದು ನಿಂತಿದ್ದ. ಭಟ್ಟರು ಆಪಾದಮಸ್ತಕ ಅವನನ್ನೊಮ್ಮೆ ನೋಡಿ, ''ನಾಳೆ ಆಸ್ಪತ್ರೆಗೆ ಬಾ, ನಾನೇನು ಡಾಕ್ಟರಲ್ಲ, ಕಾಂಪೌಂಡರ್; ಅಲ್ಲಿ ಡಾಕ್ಟರ್ ಇರ್ತಾರೆ. ಅವರು ಮಾತ್ರೆ ಕೊಡ್ತಾರೆ.'' ''ಓ ಹಂಗಾ, ನಮಗೇನು ಗೊತ್ತಾಗುತ್ತೆ ಹೇಳಿ ? ಬಿಳಿ ಅಂಗಿ ಹಾಕ್ಕೊಂಡ್ರೆ ಡಾಕ್ಟರ್ ಅಂತಾನೆ ಅನ್ಕೊತೀವಿ. ಹಿಂದಿನವರನ್ನೂ ಹಂಗೆ ಕರೀತಾ ಇದ್ದುವು. ಹಂಗಾದ್ರೆ ಮಾತ್ರೆ ಇಲ್ಲುವುರಾ ?'' ಎಂದ ರಂಗಪ್ಪಣ್ಣ. ಭಟ್ಟರು ಮುಖ ಸಿಂಡರಿಸುತ್ತಾ ಏನು ಕಾಯಿಲೆ ಎಂದು ಕೇಳಿದರು. ಅದಕ್ಕೆ ರಂಗಪ್ಪಣ್ಣ ''ನೆನ್ನೆ ಒಂಚೂರು ಖಂಡ ಜಗೀತು ಸಾರ್. ಜಾಸ್ತಿ ಆಯ್ತು ಅನ್ನಿಸ್ತದೆ. ವಾಂತಿ ಮಾಡ್ಕತ್ತು. ಒಂದು ಮಲೇರಿ ಮಾತ್ರೆ ನುಂಗಿದ್ರೆ ಎಲ್ಲಾ ಸರಿಯಾಗುತ್ತೆ ಕೊಡ್ರಿ.''

''ಏನಯ್ಯಾ, ಮಗೂಗೆ ಮಾಂಸ ತಿನ್ನಿಸ್ತಾರೇನಯ್ಯಾ, ಎಂಥಾ ಅನಾಗರೀಕರಯ್ಯಾ ನೀವು ?''

''ಹೌದ ಸಾರ್, ಮಗೂಗೆ ಮಾಂಸ ತಿನ್ನಿಸ್ಬಾರ್ದಾ ? ಆಯ್ತು ಸಾರ್. ನಾವು ಹಿಂಗೆಯಾ... ನಾಲಾಯಕ ಸೂಳೆಮಕ್ಕಳು. ಬಂದಂಗೆ ಬದುಕಿಬಿಡ್ತೀವಿ. ಅರ್ಥಗಿರ್ಥ ನಕ್ಕಾ ನಯಿ.''

''ಪ್ರಾಣಿಗಳ ತರಹ ಬದುಕ್ತಿದ್ದೀರಲ್ಲಯ್ಯಾ... ಸತ್ತ ಪ್ರಾಣಿಯ ಮಾಂಸ ತಿನ್ಕೊಂಡು ? ಮೊನ್ನೆ ನೋಡಿದ್ನಲ್ಲ ನಿಮ್ಮ ಅವತಾರಗಳನ್ನ ? ನಮ್ಮ ಸಮಾಜ ಎಷ್ಟು ಸುಶಿಕ್ಷಿತವಾಗಿದೆ. ನಾಗರಿಕವಾಗಿದೆ. ನೀವು ಅನಾಗರೀಕರು, ದೇವರು ಎಂದಾದ್ರೂ ಕೋಳಿ ಕುರಿ ಕೊಡೋಕೆ ಕೇಳಿತ್ತೇನಯ್ಯಾ ?'' – ಭಟ್ಟರು ಇದ್ದ ಬದ್ದ ಸಿಟ್ಟನ್ನೆಲ್ಲಾ ತೀರಿಸಿಕೊಳ್ಳುವವರಂತೆ ಒದರತೊಡಗಿದರು.

ಅದಕ್ಕೆ ರಂಗಪ್ಪಣ್ಣ ನಗುತ್ತಾ ''ಸತ್ತ ಪ್ರಾಣೀನ ಅಲ್ದೆ ಬದುಕಿರೋದನ್ನು ತಿನ್ನೋಕಾಗುತ್ತಾ ? ಸರಿ ಬುಡಿ.''

''ಪ್ರಾಣಿಗಳನ್ನು ಕೊಲ್ಲುವಾಗ ಪಾಪ ಅನ್ನಿಸೊಲ್ವ ನಿಮಗೆ ?'

''ಅಯ್ಯೋ ದೇವರು ಪಾದಕ್ಕೆ ಸೇರೋ ಪ್ರಾಣಿಗಳ ಜೀವ ಪುಣ್ಯ ಮಾಡಿರ್ಬೇಕಲ್ವಾ ? ಮನುಷ್ಯರು ಸತ್ತರೆ ಆಯ್ಯೋ ಪಾಪ ಅನ್ನೋವರಿಲ್ಲ ಈ ಕಾಲ್ದಲ್ಲಿ, ಇನ್ನು ಕೋಳಿ ಕುರಿ ಸತ್ತರೆ ಪಾಪ ಅನ್ನಬೇಕಾ ಸಾರ್ ?''

ಭಟ್ಟರಿಗೆ ಇವನ ಮಾತಿನ ತಲೆ ಬುಡ ಅರ್ಥವಾಗದೆ ಕುದಿಯತೊಡಗಿದರು. ಅವರನ್ನು ನೋಡಿ ನಗುತ್ತಾ ರಂಗಪ್ಪ ''ನಮ್ಮ ಪ್ರಪಂಚ ಬಾರೀ ಸಣ್ಣದು ಸಾರ್, ದಿನಾ ಪೂರ್ತಿ ದುಡೀತೀವಿ. ದೇವರ ಪೂಜೆ ಮಾಡ್ಕೊಂಡು ಕುಣೀತೀವಿ. ಸತ್ರೆ ಅಳೋಕೆ ಊರಿನ ಜನಾ ಎಲ್ರೂ ಕೂಡಿಕೊಳ್ತಾರೆ. ಮದುವೇಗೂ ಊರಿನ ಜನಾ ಎಲ್ಲಾ ಸೇರ್ಕೊಂಡು ಖುಷಿಪಡ್ತೀವಿ. ರಾತ್ರಿ ಚೂರು ಹೆಂಡ, ಹಬ್ಬದ ಟೈಮಲ್ಲಿ ಹೊಟ್ಟೆ ತುಂಬ ಬಾಡು. ದುಡ್ಡು ಬೇಕೂಂದ್ರೆ ಹುಲ್ಲು ಹಾಕಿ ಸಾಕಿದ ಕುರೀನಾ ಕಟುಕ್ರಿಗೆ ಮಾರ್ಲೇಬೇಕಲ್ಲಾ, ಜಾಸ್ತೀ ಯೋಚನೆ ಮಾಡೋಕೆ ಹೋಗಬಾರದು ಸಾ. ಎಲ್ಲಾ ಶಿವನಾಟ. ಬಂದಂಗೆ ಬದುಕಬೇಕು. ಇಲ್ಲಿ ನೋಡಿ ಈ ನನ್ನ ಮಗಾ ನಾಳಿಕ್ಕೆ ನನಗೆ ಹಿಟ್ಟಾಕೋದು ಗ್ಯಾರಂಟಿ ಇಲ್ದಿದ್ರೂ ನಾನು ಸಾಕ್ತಿಲ್ಲವಾ, ಏನೋ ನಮಗೆ ಗೊತ್ತಿಲ್ಲಾ ಸಾರ್, ಮಾತ್ರೆ ಕೊಡಿ, ನಾ ಹೋಗ್ಬಕು.'' ಭಟ್ಟರಿಗೆ ಮತ್ತೂ ಲೆಕ್ಕ ತಪ್ಪಿದಂತೆನಿಸುತ್ತಿತ್ತು. ತನ್ನ ಸ್ವಂತವಾದ ಯಾವ ಲೆಕ್ಕ ಪತ್ರವೂ ಇಲ್ಲದಂತೆ, ದಾರಿ ತಪ್ಪಿದಂತೆನಿಸುತ್ತಿತ್ತು. ಅಷ್ಟರಲ್ಲಾಗಲೇ ಒಳಗಿನಿಂದ ಒಂದಾ ಮಾಡ್ಬೇಕು ಎಂಬ ಶಬ್ದ ಕೇಳಿ ಭಟ್ಟರು ತಳಮಳಗೊಳ್ಳುತ್ತಿದ್ದಾಗಲೇ, ರಂಗಪ್ಪ ಒಳಗೆ ಇಣುಕಿ ನೋಡಿ ''ನಿಮ್ಮ ಹೆಂಡ್ತೀನಾ ಸಾರ್ ?'' ಎಂದು ಕೇಳಿದ. ಅದಕ್ಕೆ ಭಟ್ಟರು ಸಿಡಿಮಿಡಿಗೊಳ್ಳುತ್ತಾ, ''ಏ ಅದೆಲ್ಲಾ ನಿನಗ್ಯಾಕೆ ಹೋಗಯ್ಯಾ ಸುಮ್ಮನೆ'' ಎಂದು ಅವನಕಡೆ ಉರಿಗಣ್ಣಿನಿಂದ ನೋಡಿ ಒಳಗೆ ಹೋಗಬೇಕೆನ್ನುವಷ್ಟರಲ್ಲಿ ರಂಗಪ್ಪ ಭಟ್ಟರನ್ನು ಕೂಗಿ ಕರೆದು, ''ನಿಮ್ಮ ಹೆಂಡತಿಗೆ ಏನೋ ಕಾಯಿಲೆ ಅನ್ಸುತ್ತೆ'' ಎಂದು ಕೇಳಿದ. ಅಷ್ಟರಲ್ಲೇ ಹೆಂಡತಿ ಲಕ್ಷ್ಮಿ ತೆವಳುತ್ತಾ ಹೊರಬಂದು ''ನಾನು ಒಂದಾ ಮಾಡ್ಬೇಕು ಅಂದ್ರೆ'' ಅಂದಳು. ಅದಕ್ಕೆ ರಂಗಪ್ಪ ಅವಳ ಮುಖವನ್ನೇ ದಿಟ್ಟಿಸಿ ನೋಡಿ ''ಓ ಈ ಕಾಯಿಲೇನಾ ನಮ್ಮ ದೊಡ್ಡವ್ವಂಗೂ ಇದೇ ತರಹ ಖಾಯಿಲೆ ಇತ್ತು. ಸಾರ್ ಉಡದ ಬಾಡು ತಿನ್ನಸಿದ್ರೆ ಎಲ್ಲಾ ಸರಿಹೋಗುತ್ತೆ. ದಿಟವಾಗ್ಲೂ.'' ರಂಗಪ್ಪ ಉಡದ ಬಾಡು ಎಂದಿದ್ದೇ ಭಟ್ಟರು ಕೋಪದಿಂದ ಸಿಡಿದು ''ಏ ನೀನು ಮೊದಲು ಇಲ್ಲಿಂದ ಜಾಗ ಖಾಲಿ ಮಾಡು. ಉಡದ ಬಾಡಂತೆ. ನನ್ನ ಹೆಂಡತಿ ಸತ್ತರೂ ಪರವಾಗಿಲ್ಲ, ಆ ಕೆಲಸ ನಾನು ಮಾಡೋದಿಲ್ಲ. ನಾವು ಬ್ರಾಹ್ಮಣರು ಕಣಯ್ಯಾ ನಿಮ್ಮ ತರಹ ಹೀನ ಕುಲದವನಲ್ಲ. ಹೋಗು ಮೊದಲು ಇಲ್ಲಿಂದ ಜಾಗ ಖಾಲಿ ಮಾಡು'' ಎನ್ನುತ್ತಿದ್ದಂತೆ ಮೇಲೆದ್ದ ರಂಗಪ್ಪ, ''ನಾನು ನಾಳೆ ಆಸ್ಪತ್ರೆತಾವ ಬರ್ತೀನಿ ಸಾರ್, ನನ್ನ ಹೆಸರು ರಂಗಪ್ಪಾಂತ'' ಎಂದು ಹೇಳಿ ಹೊರಟುಬಿಟ್ಟ. ಭಟ್ಟರು ಏನೂ ಮಾಡಲು ತೋಚದೆ, ಸ್ವಲ್ಪ ಹೊತ್ತು ಅಡ್ಡಾಡಿ, ಏನೋ ಮನಸ್ಸಿನಲ್ಲಿ ಯೋಚಿಸಿಕೊಂಡು, ಹೋಗಿ ಚಾಪೆಯ ಮೇಲೆ ಕುಳಿತು ಪತ್ರವೊಂದನ್ನು ಬರೆದು ಜೇಬಿಗಿಟ್ಟುಕೊಂಡರು. ರಾತ್ರಿ ಕಳೆದು ಬೆಳಗಾಗುತ್ತಲೇ ಲಕ್ಷ್ಮಿಗೆ ಹೇಳಿ ತಾನು ವರ್ಗಾ ಮಾಡಿಸಿಕೊಳ್ಳುತ್ತಿರುವುದಾಗಿಯೂ, ಅದಕ್ಕಾಗಿ ಅಧಿಕಾರಿಗಳನ್ನು ಭೇಟಿ ಮಾಡಲು ಹೋಗುವುದಾಗಿ ಹೇಳಿ ಹೊರಟರು. ಆವತ್ತು ಸಂಜೆ ಕೆಲಸ ಮುಗಿಸಿಕೊಂಡು ಮನೆಗೆ ಬಂದಾಗ ಮನೆಯ ತುಂಬ ವಿಚಿತ್ರ ಘಾಟು ವಾಸನೆಯೊಂದು ತುಂಬಿಕೊಂಡಿತ್ತು. ಒಳಗೆ ಬಂದು ನೋಡಿದಾಗ, ಅಡುಗೆ ಮನೆಯಲ್ಲಿ ಲಕ್ಷ್ಮಿ ಕುದಿಯುತ್ತಿದ್ದ ಪಾತ್ರೆಗೆ ಸೌಟು ಹಾಕಿ ಏನನ್ನೋ ತಿರುವುತ್ತಿದ್ದಳು. ಕೊತಕೊತನೆ ಕುದಿಯುತ್ತಿದ್ದ ಅದರೊಳಗಿನ ಮಾಂಸದ ತುಂಡುಗಳು ಕುಣಿಯುತ್ತಿದ್ದವು. ಅವು ತಮ್ಮನ್ನು ಅಣಕಿಸಿ ಕಿಸಿಕಿಸಿ ನಗುತ್ತಿರುವಂತೆ, ಲೆಕ್ಕ ಹಾಕಲು ಸಾಧ್ಯವಾಗದ ಅಸಂಖ್ಯ ರಾಶಿಗಳಂತೆ ಕಂಡವು. ಭಟ್ಟರ ಹೃದಯದ ಪಾತ್ರೆಯಲ್ಲಿ ಅದೇನೋ ಕುದಿಯುತ್ತಿರುವಂತೆ ಕಂಡರೂ ಅದೇನೆಂದು ಗೊತ್ತಾಗಲಿಲ್ಲ.

ಅಭಿಜಾತ
ನೀನಾಸಂ, ಹೆಗ್ಗೋಡು - ೫೭೭ ೪೧೭, ಸಾಗರ ತಾಲೂಕು, ಶಿವಮೊಗ್ಗ ಜಿಲ್ಲೆ

ಸ. ರಾ. ಸುಳಕೂಡೆ

ಯಾವ ಯಾವ ರಾಷ್ಟ್ರಗಳಲ್ಲಿ ಯಾವ ಯಾವ ದೇವರು - ದೇವತೆಗಳು ಸಿದ್ಧಿ-ಪ್ರಸಿದ್ಧಿ ಪಡೆದುಕೊಂಡು ಕ್ರಿಯಾಶೀಲವಾಗಿವೆ ಎಂಬುದನ್ನು ಖಚಿತವಾಗಿ ಹೇಳುವುದು ಸಾಹಸದ ಕೆಲಸವಾಗಿದೆ. ದೇವರು - ದೇವತೆಗಳು ಎಲ್ಲಿವೆ, ಎಂದು ಹುಡುಕಾಟದಲ್ಲಿ ನಿರತರಾಗಿ, ನಿಪುಣರಾಗಿ ನಿರ್ಗುಣ, ಪಾಲ್ಗುಣ ಎಂದವರೂ ದೇವರು - ದೇವತೆಗಳಾಗಿ ನಿಂತಿದ್ದಾರೆ. ದೇವರು - ದೇವತೆಗಳ ಕುರುಹು ಅರಹುವವರೂ - ಕೊಡುವವರೂ ದೇವರಾಗಿ ಪೂಜ್ಯರಾಗಿದ್ದಾರೆ. ನಮ್ಮ ಪೂರ್ವಜರ ಪ್ರಕಾರ ಭಾರತದಲ್ಲಿ ಛತ್ತೀಸ್ ಕೋಟಿ ದೇವರು ಇವೆ ಎಂದು ಬಣ್ಣಿಸಲಾಗಿದೆ. ದೇವರು ದೇವರು, ಮನೆಯೊಳಗಿನ ದೇವರು, ಓಣಿಯ ದೇವರು, ಬೀದಿಯ ದೇವರು, ಊರಿನ ದೇವರು, ಊರ ಹೊರಗಿನ ದೇವರು, ಪುಣ್ಯಕ್ಷೇತ್ರದ ದೇವರು, ವತಾರದ ದೇವರು ಎಲ್ಲೆಲ್ಲೂ ದೇವರ ಖ್ಯಾತಿ-ಪ್ರಖ್ಯಾತಿ ಇದೆ. ಪುಂಡರಿಗೂ, ಸಾತ್ವಿಕರಿಗೂ ಪುರುಷ-ಮಹಿಳೆ-ಷಂಡರಿಗೂ ಅವರವರ ದೇವರು ಇರುವುದು ಕಂಡುಬರುತ್ತದೆ. ರಾಕ್ಷಸರಿಗೂ ದೇವರು, ಒಟ್ಟು ಎಷ್ಟು ದೇವರು ಎಂಬುದನ್ನು ಲೆಕ್ಕ ಹಾಕುವುದು ಹಗುರ ಕೆಲಸವಲ್ಲ. ಲೆಕ್ಕ ಹತ್ತದಕ್ಕೆ ಗಣಿತಶಾಸ್ತ್ರದಲ್ಲಿ ಹೇಳುವಂತೆ ದೇವರು ಅಸಂಖ್ಯೆ ಎಂದು ಹೇಳುವುದೇ ಉತ್ತಮ. ದೇವರ ಹರಡುವಿಕೆಯನ್ನು ಗಮನಿಸಿದ ಮಾನವತಾವಾದಿ ಬಸವಣ್ಣ ಅನುಭಾವ ಹಂಚಿಕೊಂಡಿರುವುದು ಹೀಗಿದೆ :

ಮಡಕೆ ದೈವ, ಮೊರ ದೈವ, ಬೀದಿಯ ಕಲ್ಲು ದೈವ,
ಹಣಿಗೆ ದೈವ, ಬಿಲ್ಲನಾರಿ ದೈವ, ಕಾಣಿರೋ,

# ದೇವರು–ದೇವತೆಗಳು : ರಾಷ್ಟ್ರ ಬದುಕು ಏನಾಗುತ್ತಿದೆ?



*ಕೊಳಗ ದೈವ, ಗಿಣ್ಣಿಲು ದೈವ, ಕಾಣಿರೋ !*
*ದೈವ, ದೈವವೆಂದು ಕಾಲಿಡಲಿಂಬಿಲ್ಲಾ !!*

ಕಾಲಿಡಲಿಂಬಿಲ್ಲದಂತೆ ಸೃಷ್ಟಿಸಿಕೊಂಡಿರುವ ದೇವರುಗಳ ಪ್ರತಾಪ- ಪ್ರಭಾವ ಮತ್ತು ಮನುಷ್ಯರ ನಡವಳಿಕೆಯನ್ನು ಬಸವಣ್ಣನವರು ಚಿತ್ರಿಸಿರುವ ಅನುಭಾವದ ಇನ್ನೊಂದು ವಚನ ಇಲ್ಲಿ ಉಲ್ಲೇಖನೀಯ :

*ಅರಗು ತಿಂದು ಕರಗುವ ದೈವವ,*
*ಉರಿಯ ಕಂಡರೆ ಮುರುಟುವ ದೈವವನೆಂತು*
*ಸರಿಯೆಂಬೆನಯ್ಯಾ ?*
*ಅವಸರ ಬಂದರೆ ಮಾರುವ ದೈವವನೆಂತು*
*ಸರಿಯೆಂಬೆನಯ್ಯಾ ?*
*ಅಂಜಿಕೆಯಾದರೆ ಹೂಳುವ ದೈವವನೆಂತು*
*ಸರಿಯೆಂಬೆನಯ್ಯಾ ?*
*ಸಹಜಭಾವ ನಿಜೈಕ್ಯ ಕೂಡಲ*
*ಸಂಗಮದೇವನೊಬ್ಬನೇದೇವ.*

ದೇವರುಗಳು ತಮ್ಮಿಂದ ತಾವೇ ಪ್ರಚಲಿತಕ್ಕೆ ಬಂದವೋ ಅಥವಾ ಮನುಷ್ಯನು ತನ್ನ ಅನುಕೂಲತೆಗಾಗಿ ಸೃಷ್ಟಿಸಿಕೊಂಡನೋ ಎಂಬುದಕ್ಕೆ ನಿಖರ ಸಾಕ್ಷಿ ಇನ್ನೂವರೆಗೆ ದೊರೆತಿಲ್ಲ. ದೇವರ ಸೃಷ್ಟಿಯೊಳಗೆ ಮಾನವನ ಹಿತ, ಉದ್ಧಾರ, ಪರಮಾನಂದ ಅಡಗಿದೆ ಎಂದು ಎಲ್ಲೆಲ್ಲೂ ಡಂಗುರ ಸಾರಲಾಗಿದೆ. ಭಾರತವು ಪುಣ್ಯಭೂಮಿ ಎಂಬುದಕ್ಕೆ ದೇವರ ಅವತಾರ ಪದೇ ಪದೇ ಇಲ್ಲಿಯೇ ಜರುಗಿದ್ದು ಎಂದು ಜಯಕಾರ ಮೊಳಗಿಸಲಾಗಿದೆ. ಇದಲ್ಲದೆ ದೇವರ ಪ್ರಮುಖ ಸಂವಿಧಾನ ದುಷ್ಟರ ಸಂಹಾರ, ಶಿಷ್ಟರ ಪಾಲನೆಯಾಗಿದೆ. ಇಂಥ ಉದಾತ್ತ ಸಂವಿಧಾನ ಹೊಂದಿರುವ ದೇವರುಗಳ ನಾಡಿನಲ್ಲಿ ಇಂದು ಬೆಳಕಿಗೆ ಬರುತ್ತಿರುವ ಅವ್ಯವಹಾರ, ಭ್ರಷ್ಟಾಚಾರ, ಹಿಂಸಾಚಾರ, ಸಭ್ಯರ ಕಗ್ಗೊಲೆಗಳನ್ನು ಗಮನಿಸಿದರೆ ದೇವರು ಇವುಗಳನ್ನು ನಿಗ್ರಹಿಸುವದನ್ನು ಮರೆತು ಮತ್ಯಾವುದೋ ಜರೂರಿ ಪರಾತ್ಪರ ಕಾರ್ಯದೊಳಗೆ ಮಗ್ನವಾದಂತೆ ತೋರುತ್ತಿದೆ. ಹೀಗಾಗಿ ದೋಚುವಿಕೆ, ಪರಪೀಡನೆ, ಹಾಹಾಕಾರ, ಅರಾಜಕತೆ ಭವ್ಯವಾಗಿ ಬೆಳಗುತ್ತಲಿದೆ. ಮಾನವೀಯ ಬದುಕಿಗೂ ಸಂಚಕಾರ ಬಂದಿದ್ದರೂ ದೇವರು ಸುಮ್ಮನೇ

ಇರುವುದಕ್ಕೆ ಕಾರಣವಿದೆ ಎಂದು, ಪಾಪದ ಕೊಡ ಇನ್ನೂ ತುಂಬಿಲ್ಲೆಂದು ಸಕಾರಣವನ್ನು ಮನುಷ್ಯನೇ ಕೊಡುತ್ತಿರುವುದು ಸೋಜಿಗದ ಸಂಗತಿಯಾಗಿದೆ.

ದೇವರು ಬೆಳಕಿನ, ಪ್ರಗತಿಯ, ಸಮೃದ್ಧಿಯ, ಶಾಂತಿಯ, ಸತ್ಯ-ನಿತ್ಯತೆಯ, ಮಧುರ ಬಾಂಧವ್ಯದ ಪ್ರತೀಕವೆಂದು ನಂಬಲಾಗಿದೆ. ಈ ನಂಬಿಕೆಯನ್ನು ಪೀಳಿಗೆಯಿಂದ ಪೀಳಿಗೆಗೆ ವರ್ಗಾಯಿಸುತ್ತಲೇ ಬಂದಿದ್ದೇವೆ. ಹೀಗಿದ್ದೂ ನಮ್ಮ ದೇಶದ ಒಂದು ಮೂರಂಶ ಜನರಿಗೆ ಓದಲು-ಬರೆಯಲು ಬರುತ್ತಿಲ್ಲ, ಪ್ರತಿಶತ ಇಪ್ಪತ್ತೆರಡು ಕುಟುಂಬಗಳು ದಟ್ಟ ದಾರಿದ್ರ್ಯತೆಯಲ್ಲಿ ಹೊರಳಾಡುತ್ತಿವೆ. ಸಾಂಕ್ರಾಮಿಕ ರೋಗಗಳು ಹತೋಟಿಯೊಳಗಿಲ್ಲ, ಏಡ್ಸ್ ಎಂಬ ಭಯಾನಕ ರೋಗವು ಭಯಾನಕತೆಯ ಮಟ್ಟವನ್ನು ತಲುಪಿದೆ. ಹೆಣ್ಣುಮಕ್ಕಳು ಮತ್ತು ಚಿಕ್ಕ ಮಕ್ಕಳು ರಕ್ತಹೀನತೆಯಿಂದ ಬಳಲುತ್ತಿದ್ದಾರೆ. ನಿರುದ್ಯೋಗ ಬದುಕಿನ ಭಾಗವಾಗಿದೆ, ಶುದ್ಧ ಕುಡಿಯುವ ನೀರು, ಸಂಚಾರಕ್ಕೆ ಯೋಗ್ಯವಾದ ರಸ್ತೆ ಸಂಪರ್ಕಗಳು ಲಭ್ಯವಾಗುತ್ತಿಲ್ಲ. ಗುಣಮಟ್ಟದ ಶಿಕ್ಷಣ ಸಿಗುತ್ತಿಲ್ಲ. ಜಾತಿಭೇದ, ಲಿಂಗಭೇದ ತಪ್ಪಿಲ್ಲ. ಮಾನವ ಅಭಿವೃದ್ಧಿ ಸೂಚ್ಯಂಕದಲ್ಲಿ ನಮ್ಮ ದೇಶವು ೧೩೪ನೇ ಸ್ಥಾನ ಪಡೆಯುವ ಮೂಲಕ ಜಗತ್ತಿನ ಹಿಂದುಳಿದ ರಾಷ್ಟ್ರಗಳ ಸಾಲಿಗೆ ಸೇರಿದೆ. ಇದೆಲ್ಲವೂ ದೇವರ ಮಹಿಮೆಯೇ ಎಂದು ಹೇಳಿಕೊಂಡರೆ ನಮಗೆ ನಾವೇ ವಂಚಿಸಿಕೊಂಡಂತಾಗುತ್ತದೆ.




ದೇವರು ತನ್ನ ಲೀಲೆಗಾಗಿ ತನ್ನ ಪ್ರತಿರೂಪದಂತಿರುವ ಮನುಷ್ಯ ವರ್ಗವನ್ನು ಸೃಷ್ಟಿಸಿದನೆಂಬ ಮಾತೊಂದು ಇದೆ. ಅಂದರೆ ದೇವರು ಹೊಂದಿರುವ ಶಕ್ತಿ-ಸಾಮರ್ಥ್ಯಗಳು ಮನುಷ್ಯನಲ್ಲಿ ಇವೆ ಎಂಬುದಾಗಿದೆ. ಉದಾತ್ತತೆಯ ಈ ಸೊಬಗಿನಲ್ಲಿ ಮನುಷ್ಯ ಇಂದಿಗೂ ಪಕ್ವವಾಗದಿರುವುದಕ್ಕೆ ನಿರ್ಮಾಣದಲ್ಲಿಯ ಕೊರತೆಯೇ ಕಾರಣವೆನ್ನಬಹುದಾಗಿದೆ. ದೇವರ ಹೆಸರಿನಲ್ಲಿ ಚಾಲ್ತಿಗೆ ಬಂದಿರುವ ಪುರಾಣ-ಪುಣ್ಯ ಕಥೆಗಳು ಮಾನವನ ಬದುಕು ನಿಮಿತ್ತ, 'ಇಲ್ಲಿ ಇರುವುದು ಸುಮ್ಮನೆ, ಅಲ್ಲಿದೆ ನಮ್ಮ ಮನೆ' ಎಂದು ಹೇಳುತ್ತಿವೆ. ಇದಲ್ಲದೆ ಮನುಷ್ಯ ದೇವರ ಕೈಯೊಳಗಿನ ಗೊಂಬೆ ಎಂದು ಪ್ರತಿಪಾದಿಸಿ ತಾಳಿದವನು ಬಾಳುವನೆಂದು ಒತ್ತಡ ಹಾಕಲಾಗುತ್ತಿದೆ. ಇದು ಪಲಾಯನವಾದವಲ್ಲವೇ ?

ದೇವರ ಹೆಸರಿನೊಳಗೆ ಹರಕೆಗಳೂ ಹುಟ್ಟಿಕೊಂಡಿವೆ. ಯಜ್ಞ-ಯಾಗಾದಿಗಳನ್ನು ನಿರ್ವಹಿಸಿ ದೇವರ ಕೃಪೆ ಪಡೆಯುವುದು ಒಂದು ಬೃಹತ್ ಉದ್ಯೋಗವಾಗಿ ನಿರ್ಮಾಣಗೊಂಡಿದೆ. ದೂರದರ್ಶನ ವಾಹಿನಿಗಳಲ್ಲಿ ದೇವಾನುಗ್ರಹದ ಮಾಲೆಗಳು, ಲಾಕೇಟುಗಳು, ಉಂಗುರ-ತಾಯತಗಳ ಭರಾಟೆ, ಭರ್ಜರಿಯಾಗಿಯೇ ಇವೆ. ದೊಡ್ಡ-ದೊಡ್ಡ ನಗರಗಳಲ್ಲಿ ಪ್ರವಚನಗಳು, ಪಾರಾಯಣಗಳು ಆರಂಭಗೊಂಡಿವೆ. ಇದನ್ನೆಲ್ಲ ನೋಡಿದರೆ ದೇವರು ಭಯದೊಳಗೋ ಮನುಷ್ಯರು ಭಯದೊಳಗೋ ಎಂಬುವಂತಾಗಿದೆ.

ಮಾನವನು ದೇವರುಗಳ ಭರಾಟೆಯೊಳಗೆ ವಿಜ್ಞಾನವನ್ನು ಬಳಸಲು ಮುಂದಾಗಿರುವ ಕ್ಷಣಗಳು ದಟ್ಟವಾಗಿದ್ದರೂ ಮೂಢಾಚಾರ-ಮೂಢನಂಬಿಕೆಗಳು ಜಾಗೃತವಾಗಿಯೇ ಉಳಿದುಕೊಂಡಿವೆ. 'ವಿಜ್ಞಾನದ ಪರಿಸರ' ಇಂದು ಮಾನವನಲ್ಲಿ ವಿವೇಕವನ್ನು ಬೆಳೆಸುತ್ತಿದ್ದರೂ ದೇವರ ಅಂಜಿಕೆ ಕಡಿಮೆಯಾಗಿಲ್ಲ, ಕಡಿಮೆಯಾಗುವ ಸಂಭವವೂ ಇಲ್ಲ, ವೈಚಾರಿಕತೆ ಮತ್ತು ವೈಜ್ಞಾನಿಕ ದೇಶಗಳಲ್ಲಿ ದೇವರ ದೇಗುಲಗಳು ಅತ್ಯಂತ ವೈಭವಪೂರಿತವಾಗಿ ಪ್ರಕಾಶಿಸುತ್ತಿರುವುದನ್ನು ಬೇರೆ ಹೇಳಬೇಕಿಲ್ಲ.

ಅಧಿಕಾರಶಾಹಿಗಳು, ಬಂಡವಾಳಶಾಹಿಗಳು, ಪಟ್ಟ-ಪದವಿಯ ಗುತ್ತಿಗೆದಾರರು ದೇವರ ಹೆಸರಿನಲ್ಲಿ ನೀಡುತ್ತಿರುವ ದಾನ-ದತ್ತಿಗಳು, ಭೋಜನ ವ್ಯವಸ್ಥೆಗಳು ದೇವರ ಅಸ್ತಿತ್ವವನ್ನೇ ಅಣಕಿಸುತ್ತಲಿವೆ. ಭಗವಂತನ ಪ್ರತಿನಿಧಿಯಾಗಿರುವ ಮನುಷ್ಯ ಸತತ ಇನ್ನೊಬ್ಬರ ಹಂಗಿನೊಳಗೆ, ಅಧೀನದೊಳಗೆ ಬದುಕುತ್ತಿರುವುದು ಇನ್ನೊಂದು ಅರ್ಥದಲ್ಲಿ ದೇವರ ಅಸಹಾಯಕತೆಯನ್ನೇ ಬಿಂಬಿಸುತ್ತದೆ. ಭಾರತವು ದೇವರ ನಾಡಾಗಿಯೂ ಮೂಲ ಸೌಕರ್ಯಗಳಿಗಾಗಿ ಪರಿತಪಿಸುತ್ತಿರುವುದು, ಭಯೋತ್ಪಾದನೆಗೆ ಗುರಿಗೊಳ್ಳುತ್ತಿರುವುದು ನಾಡವರ ಅಸಮರ್ಥತೆಗೆ ಜೊತೆಗೆ ದೇವರ ಪಲಾಯನತೆಯನ್ನು ಸೂಚಿಸುತ್ತದಲ್ಲವೇ ?

ಈ ದೇವರ ನಾಡಿನಲ್ಲಿ ಪ್ರತಿ ಹಂತದಲ್ಲೂ ಕಾನೂನು-ಕಟ್ಟಳೆ-ನಿರ್ಬಂಧತೆ ಹಾಕಲಾಗಿದೆ. ಧಾರ್ಮಿಕತೆಯ ನೀತಿ ಪಾಠವನ್ನೂ ಪಸರಿಸುತ್ತಲಿದ್ದೇವೆ. ನ್ಯಾಯನೀತಿ ನಮ್ಮ ಉಸಿರೆಂದೂ ಹೆಮ್ಮೆ ಪಡಲಾಗುತ್ತಿದೆ. ವಾಸ್ತವದೊಳಗೆ ಕಾನೂನು ಪರಿಪಾಲನೆ, ನೀತಿಯ ಅನುಷ್ಠಾನಕ್ಕೆ ಕಾಳಜಿ- ಪರಿಜ್ಞಾನವೂ ಸಹ ಇಲ್ಲದಂತೆ ವರ್ತಿಸುತ್ತಿದ್ದೇವೆ. ಕಾನೂನು ಇರುವುದೇ ಅದನ್ನು ಮೀರಿ ನಡೆಯುವುದಕ್ಕೆಂದು ಹೆಮ್ಮೆಪಟ್ಟುಕೊಳ್ಳಲಾಗುತ್ತಿದೆ. ರಾಷ್ಟ್ರದ ಆಯಕಟ್ಟಿನಲ್ಲಿ ಕೆಲಸ ಮಾಡುವವರು ದೇವರ ನಾಮಗಳನ್ನು ಎಳೆದುಕೊಂಡು, ದೇವರಲ್ಲಿ ಭಕ್ತಿಭಾವ ಇರುವಂತೆ ನಟಿಸುವುದರಲ್ಲಿಯೇ ಪಾರಂಗತರಾಗಿದ್ದಾರೆ. ಇವರಿಗೆ ದೇವರ ಬಲವಿದೆ ಎಂದು ಹೇಳುವವರೂ ನಮ್ಮಲ್ಲಿಯೇ ಇದ್ದಾರೆ.

ಭಾರತವು ತ್ಯಾಗ ಮತ್ತು ಸೇವೆಯ ಮೂಲಕ ಗುಲಾಮಗಿರಿಯನ್ನು ಕಳಚಿಕೊಂಡಿದೆ. ಸರ್ವರಿಗೂ ಸಮಬಾಳು, ಸರ್ವರಿಗೂ ಸಮಪಾಲು ಎಂಬ ಉದಾತ್ತ ಧೋರಣೆ ಹೊಂದಿರುವ ಭಾರತದೊಳಗೆ ದೇವರ ಹೆಸರಿನಲ್ಲಿ ಕಚ್ಚಾಡುವುದನ್ನು ನಿಲ್ಲಿಸಬೇಕಿದೆ. ನಮ್ಮ ಬುದ್ಧಿಯನ್ನು ದೇವರ ಹೆಸರಿನಲ್ಲಿ ಹೇಯ ಕೆಲಸಕ್ಕೆ ಮುಂದಾಗದಂತೆ ತಡೆಯಬೇಕಿದೆ. ವೈಮನಸ್ಯಗಳನ್ನು ವಿಸ್ತರಿಸುವ, ದೇವರ ಹೆಸರಿನಲ್ಲಿ ನಡೆಯುತ್ತಿರುವ ಹೇಯಕೃತ್ಯಗಳನ್ನು ಹೀಯಾಳಿಸುವ, ಖಂಡಿಸುವ, ಅವುಗಳ ವಿರುದ್ಧ ಹೋರಾಡುವ ಸಮಂಜಸವಾದ ಪುರುಷ ಶಕ್ತಿಯನ್ನು ಹೊಂದುವ ಅಗತ್ಯವಿದೆ.

ಶಿಕ್ಷಣ, ಆರೋಗ್ಯ, ಕುಡಿಯುವ ನೀರು, ಸಂಪರ್ಕ ರಸ್ತೆ, ಬದುಕಿಗೆ ಅಗತ್ಯವಿರುವ ಸಾಧನ-ಸಾಮಗ್ರಿ ಎಲ್ಲ ಧರ್ಮೀಯರ, ದೇವರ ಆರಾಧಕರ ಅವಶ್ಯಕತೆಗಳೇ ಆಗಿವೆ. ಈ ಮೂಲಭೂತ ಸೌಕರ್ಯಗಳು ಸಕಲರಿಗೂ ಸಿಗುವಂತೆ ವ್ಯವಹರಿಸುವುದೇ ದೇವರ ಕಾರ್ಯವಾಗಿದೆ. ಇದನ್ನು ಮರೆತು ದೇವರು, ದೇವರ ಕುಲದವರು, ಪರಂಪರೆಯವರು ಎಂದು ಗುದ್ದಾಟ ಮಾಡುವುದು ರಾಷ್ಟ್ರ ವಿರೋಧಿ ಕೃತ್ಯವೇ ಆಗುತ್ತದೆ.

ಮನುಷ್ಯ ಪ್ರಯತ್ನವು ಹಲವಾರು ಸೇವಾ-ಸವಲತ್ತುಗಳನ್ನು ಸಾರ್ವತ್ರಿಕಗೊಳಿಸಿದೆ. ಇದರ ಸದುಪಯೋಗಪಡಿಸಿಕೊಳ್ಳುವ ಹೃದಯವಂತಿಕೆ ರಾಷ್ಟ್ರದೊಳಗೆ ಬೆಳೆದು ಬರಬೇಕಿದೆ. ದೇವರು-ದೇವತೆಗಳಾಚೆ, ವಿಚಾರಿಸುವ ವ್ಯವಹರಿಸುವ ಅನೇಕ ಪ್ರಯತ್ನಗಳು ಜಗದೊಳಗೆ ಜರುಗುತ್ತಲಿವೆ. ಭಾರತೀಯರು ಸಂಕುಚಿತ ಭಾವಭಾವನೆಗಳನ್ನು ತೊರೆದು ನಿಲ್ಲದೆ ಹೋದರೆ ಯಾವ ದೇವರು-ದೇವತೆಯೂ ನಮ್ಮನ್ನು ಕಾಪಾಡಲಾರದು.

ನಮ್ಮ ಕಣ್ಮುಂದೆ ಚಿತ್ರಿತಗೊಂಡಿರುವ ದೇವ-ದೇವತೆಗಳು, ದೇವಲೋಕದ ವ್ಯವಹಾರಗಳು, ವೈಭವಗಳು ಇಂದಿನ ಮನುಷ್ಯನ ಆಸಕ್ತಿಯೊಂದಿಗೆ ಹೊಂದಿಕೊಳ್ಳದಂತಿವೆ. ಮನುಷ್ಯನಿಂದು ಗಳಿಸುವ ಜ್ಞಾನ-ವಿಜ್ಞಾನದ ಸೌಕರ್ಯ-ಸವಲತ್ತು ಒಂದು ಅರ್ಥದಲ್ಲಿ ದೇವಲೋಕದ ಚಿತ್ರಿತ ಸೌಕರ್ಯಗಳಿಗಿಂತ ಮಿಗಿಲುಗೊಂಡಿವೆ. ಇಂಥ ಪರಿಸರದಲ್ಲೂ ಸತ್ತ ನಂತರ ಸ್ವರ್ಗ-ಸಂತಸಗೊಳ್ಳುವ ಅತಾರ್ಕಿತ ಗೊಂದಲದಿಂದ ಪಾರಾಗುವುದೇ ಏಳ್ಗೆಯ ಪಥವಾಗಿದೆ. ನಮ್ಮಲ್ಲಿ ಎಲ್ಲ ಐಶ್ವರ್ಯ, ಸಂಪತ್ತು, ಸಡಗರ, ಸೌಕರ್ಯವಿದ್ದರೂ ಪರಲೋಕದ ಚಿಂತೆಯೊಳಗೆ ಆತುರ-ಕಾತುರಗೊಂಡು ದ್ವೇಷ, ಅಸೂಯೆ, ಮೇಲು-ಕೀಳು, ಮಸಲತ್ತು ಮಾಡುತ್ತ ಬದುಕುವುದು ಅನ್ಯಾಯದ ಮಾರ್ಗವೇ ಆಗಿದೆ. ಭಾರತದ ಹಿರಿಮೆ-ಗರಿಮೆ ಪ್ರಜೆಗಳ ತೋಳಬಲದೊಳಗೆ ಇವೆ. ಆ ಶಕ್ತಿಯನ್ನು ಬಳಸಿಕೊಳ್ಳುತ್ತ, ವಿವೇಕಯುತ ನಡೆ-ನುಡಿಯೊಳಗೆ ಬದುಕುವುದೇ ಧೈರ್ಯದ ಮಾರ್ಗವಾಗಿದೆ. ದೇವರು, ದೇವರು ಎಂದು ಮಾನವ ಶಕ್ತಿಯನ್ನು ಕೀಳರಿಮೆಗೆ ಇಳಿಸಿಕೊಂಡು ಭಯದೊಳಗೆ ಬದುಕುವುದು ನಿರ್ಭಾಗ್ಯದ ಪಥವಾಗಿದೆ. ದೇಶಕ್ಕೆ ಉಜ್ವಲತೆ ತರುವ ಸಂಕಲ್ಪದೊಳಗೆ ಸಹಜ ಭಾವದೊಂದಿಗೆ ದುಡಿಮೆಯ ಪಾತ್ರವಿದೆ ಎಂಬುದೇ ದಿವ್ಯವಾಣಿಯಾಗಿದೆ.

ಸ. ರಾ. ಸುಳಕೂಡೆ
ನಂ. ೧೩೯, 'ಶಿವಪ್ರಸಾದ', ಶ್ರೀ ಬಸವೇಶ್ವರ ಬಡಾವಣೆ
ರಾಮತೀರ್ಥನಗರ, ಬೆಳಗಾವಿ - ೫೯೧ ೦೧೬




ಡಾ|| ಚನ್ನೇಶ್ ಹೊನ್ನಾಳಿ

# ಶ್ರೀ ಎಚ್. ದೇವೀರಪ್ಪನವರ ಕಾದಂಬರಿಗಳಲ್ಲಿ ಗ್ರಾಮ ಭಾರತದ ಅನಾವರಣ

ಸೃಜನಶೀಲ, ಗ್ರಂಥ ಸಂಪಾದನೆ ಹಾಗೂ ಸಂಶೋಧನಾ ಕ್ಷೇತ್ರಗಳಲ್ಲಿ ಹೆಸರಾದ ಶ್ರೀ ಎಚ್. ದೇವೀರಪ್ಪನವರು ಹೊನ್ನಾಳಿಯ ಮಲ್ಲಿಗೇನ ಹಳ್ಳಿಯ (ಜನನ: ೦೬-೦೬-೧೯೧೩ ಮರಣ: ೦೩-೦೧-೧೯೮೮) ರೈತಾಪಿ ಕುಟುಂಬದಲ್ಲಿ ಜನಿಸಿದವರು. ಮಲ್ಲಿಗೇನಹಳ್ಳಿ, ದಾವಣಗೆರೆ, ಶಿವಮೊಗ್ಗ, ಮೈಸೂರುಗಳಲ್ಲಿ ವಿದ್ಯಾಭ್ಯಾಸ ಮಾಡಿದ ದೇವೀರಪ್ಪನವರು ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನಾ ಸಂಸ್ಥೆಯಲ್ಲಿ ಸಹಾಯಕ ನಿರ್ದೇಶಕರಾಗಿ, ನಿರ್ದೇಶಕರಾಗಿ ಕೆಲಸ ಮಾಡಿ ೧೯೬೮ರಲ್ಲಿ ನಿವೃತ್ತಿ ಹೊಂದಿದರು.

ಮೇಲೆ ತಿಳಿಸಿದಂತೆ ದೇವೀರಪ್ಪನವರು ಹಳ್ಳಿಯ ಬದುಕು (೧೯೪೭) ಹಾಗೂ ಬೆಳುವಲದ ಮಡಿಲಲ್ಲಿ(೧೯೫೩) ಎಂಬ ಎರಡು ಕಾದಂಬರಿಗಳನ್ನು ಬರೆದಿದ್ದಾರೆ.

ಈ ಎರಡೂ ಕಾದಂಬರಿಗಳು ಪ್ರಗತಿಶೀಲ ಚಳುವಳಿ ದಟ್ಟವಾಗಿದ್ದ ಕಾಲದಲ್ಲಿ ಬಂದವುಗಳು. ವಾಸ್ತವವಾದಿ ನೆಲೆಯಲ್ಲಿ ಕಾದಂಬರಿಗಳು ಚಿತ್ರಿತವಾಗಿದ್ದರೂ ಅತಿರಂಜಿಸಿ ಹೇಳುವುದು, ರೋಚಕತೆ, ಲೈಂಗಿಕ ಅನಾವರಣ ಮೊದಲಾದುವುಗಳಿಂದ ದೂರವುಳಿದಿವೆ. ಕಥನ ನಿರೂಪಣೆಯ ಭರದಲ್ಲಿ ಕಲಾತ್ಮಕತೆ ಮರೆಯಾಗಿಲ್ಲ, ಆದರೆ ಪ್ರಗತಿಶೀಲರ ''ಜೀವನ ಹಸನಾಗಬೇಕು, ಬಾಳು ಸಹ್ಯವಾಗಬೇಕು, ಸಮಾಜದ ಸಮುದಾಯಗಳ ಎಲ್ಲರೂ ಸುಖವಾಗಿರಬೇಕು, ಸಹಬಾಳ್ವೆ ನಡೆಸಬೇಕು...'' ಇತ್ಯಾದಿ ಆಶಯಗಳು ಪರಿಣಾಮಕಾರಿಯಾಗಿ ಮೂಡಿಬಂದಿವೆ.

'ಹಳ್ಳಿಯ ಬದುಕು' ಕೃತಿಯಲ್ಲಿ ಶಂಕರಪ್ಪ, ಗಿರಿಯಪ್ಪ ಹಾಗೂ ವೀರೇಶ ಒಂದು ಕುಟುಂಬದವರಾದರೆ ನಂಜಯ್ಯ, ಶರಭಣ್ಣರದು ಇನ್ನೊಂದು ಕುಟುಂಬ. ನಂಜಯ್ಯನ ತಂಗಿ ನಾಗಮ್ಮನನ್ನು ಶಂಕರಪ್ಪನಿಗೆ ಕೊಟ್ಟಿದ್ದು ಆತ ಗಿರಿಯಪ್ಪನ ಮಗ ನಾಗೇಶನನ್ನು ದತ್ತು ಮಾಡಿಕೊಂಡಿರುತ್ತಾನೆ. ನಂಜಯ್ಯನು ತಂಗಿ ನಾಗಮ್ಮನಿಗೆ ಚಾಡಿ ಹೇಳಿ ಗಿರಿಯಪ್ಪನ ಆಸ್ತಿ ಕಬಳಿಸಲು ತಂತ್ರ ರೂಪಿಸಿದರೂ ಅದರಲ್ಲಿ ವಿಫಲನಾಗುತ್ತಾನೆ. ಕೊನೆಗೆ ಬೆಂಕಿ ಅನಾಹುತದ ನಂತರ ಆಸ್ತಿ ಸಿಗುತ್ತದೆ. ಅಷ್ಟೊತ್ತಿಗಾಗಲೇ ನಾಗಮ್ಮನಿಗೆ ಬುದ್ಧಿ ಬಂದು ತಾನೆಂಥ ವಿಷವರ್ತುಲದಲ್ಲಿ ಸಿಕ್ಕಹಾಕಿಕೊಂಡಿದ್ದೇನೆಂದು ಪಶ್ಚಾತ್ತಾಪ ಪಡುತ್ತಾಳೆ. ಪುನಃ ಗಿರಿಯಪ್ಪನ ಆಶ್ರಯಕ್ಕೆ ಬರುತ್ತಾಳೆ. ಅಂತಿಮವಾಗಿ ಗಿರಿಯಪ್ಪನ ಒಳ್ಳೆಯತನಕ್ಕೆ, ಸಾತ್ವಿಕತೆಗೆ ಗೆಲುವು ದೊರೆಯುತ್ತದೆ. ಇವುಗಳ ಮಧ್ಯೆ ನಾಗೇಶ, ಕಾಳಾಚಾರಿಯರ ವಿದ್ಯಾಭ್ಯಾಸ, ಗೋಪಾಲಯ್ಯನವರ ವಿವೇಕ, ಆಧುನಿಕತೆಯ ಪ್ರವೇಶ, ಅದರ ಪರಿಣಾಮಗಳು, ಸ್ವಾರ್ಥ, ಭ್ರಷ್ಟತೆ ಇತ್ಯಾದಿಗಳು ಚಿತ್ರಿತವಾಗಿವೆ.

'ಬೆಳುವಲದ ಮಡಿಲಲ್ಲಿ' ಕೃತಿಯಲ್ಲಿ ಕಾಣಿಮಾದ ಎಂಬ ಹಳ್ಳಿಹೈದ ಅನಾಥನಾಗಿದ್ದು ಪರರ ಸೇವೆ ಮಾಡುತ್ತ ಪ್ರಾಮಾಣಿಕತೆ, ಸನ್ನಡತೆಗಳಿಂದ ಒಳ್ಳೆಯ ರೈತನಾಗಿ ಸಮಾಜದಲ್ಲಿ ಗಣ್ಯ ವ್ಯಕ್ತಿಯಾಗುವುದು, ತಾನು ನಂಬಿದ ಮೌಲ್ಯಗಳಿಗೆ ವಿರುದ್ಧವಾಗಿ ತನ್ನ ಮಕ್ಕಳು ಪಟ್ಟಣ ಸೇರುವುದು, ಅಸಹಾಯಕನಾದ ಆತ ಕೊನೆಗೆ ಮತಿಭ್ರಮಣನಾಗಿ ಪ್ರಾಣ ಬಿಡುವುದು, ಮಡಿವಾಳಯ್ಯ, ಅಹೋಬಲರಾಯರ ವಿವೇಕ, ಶಾಂತಪ್ಪನಾಯಕ, ಸಂಕಪ್ಪನಂಥವರ ಮನೆಹಾಳುತನ, ಹಳ್ಳಿ ಬದುಕಿನ ನೋವು ನಲಿವುಗಳೆಲ್ಲವೂ ಚಿತ್ರಿತವಾಗಿವೆ. ಒಟ್ಟಿನಲ್ಲಿ ಈ ಎರಡೂ ಕೃತಿಗಳಲ್ಲಿರುವುದು ಬೆಳುವಲ ನಾಡಿನ ರೈತಮಕ್ಕಳ, ಶ್ರಮಜೀವಿಗಳ, ಶ್ರಮ ಸಂಸ್ಕೃತಿಯ ಚಿತ್ರಣ. ಜೊತೆಗೆ ಗ್ರಾಮೀಣ ಬದುಕಿನ ಅನೇಕ ಮಗ್ಗುಲುಗಳು – ಆಧುನಿಕತೆಗೆ ಮುಖಾಮುಖಿಯಾದ 'ಗ್ರಾಮಭಾರತ', 'ಪಲ್ಲಟ'ವಾಗುತ್ತಿರುವ ಚಿತ್ರಣಗಳು ಮೂಡಿಬಂದಿವೆ.

ಈ ಎರಡು ಕೃತಿಗಳಲ್ಲಿ ಮುಖ್ಯವಾಗಿ ಕಾಣುವುದು ಸಂಘರ್ಷ. ಅದು ನಗರ ಭಾರತ – ಗ್ರಾಮ ಭಾರತಗಳ ನಡುವೆ. ಆಧುನಿಕತೆ, ವಸಾಹತುಶಾಹಿ ಸಂಪ್ರದಾಯ; ತಂತ್ರಗಾರಿಕೆ-ಮುಗ್ಧತೆ. ಬೆಳುವಲ ಕೃತಿಯ ಕೆಸರೂರು ಹಾಗೂ ಹಳ್ಳಿಯ ಬದುಕು ಕೃತಿಯ 'ಹೊಸೂರು'ಗಳು ಅಪ್ಪಟ ಹಳ್ಳಿಗಳು. ಬೆಳುವಲ ಕೃತಿಯ ಕಾಣಿಮಾದ ರೈತ, ಶ್ರಮಿಕ ಮತ್ತು ಪ್ರಾಮಾಣಿಕ. ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೇ ಮೇಲು ಎನ್ನುವುದನ್ನು ಬಲವಾಗಿ ನಂಬಿದವ. ಮಡಿವಾಳಯ್ಯನವರ ''ಉತ್ತಮ ವ್ಯವಸಾಯ, ಮಧ್ಯಮ ವ್ಯಾಪಾರ, ಕನಿಷ್ಠ ನೌಕರಿ'' ಎಂಬ ಮಾತನ್ನು ಅಕ್ಷರಶಃ ನಂಬಿದವನು ಮತ್ತು ಕಾರ್ಯರೂಪಕ್ಕೆ ತಂದವನು. ಹಾಗೆಯೇ ''ರೈತ ಶಿವನ ಕುಡಿಮಗ, ಅವನೇ ನಾಡಿನ ಬಾಳುಸಿರು'' ಎಂಬ ಅವರದೇ ಮಾತಿನಂತೆ ನಡೆದವನು. ಅದೇ ರೀತಿ ಅಹೋಬಲರಾಯರ ''ರೈತನು ಬಾದಷಹಾ,'' ಎಂಬ ಮಾತಿನಂತೆ ನಡೆದವನು (ಪುಟ-೧೯೦). ಸಂಘರ್ಷ ಎಂದರೆ ರೈತ ಬದುಕನ್ನು ನಂಬಿ ಭೂಮಿತಾಯನ್ನು ದೇವರೆಂದು ನಂಬಿದ ಕಾಣಿಮಾದನ ಹಿರಿಯ ಮಗ ನೀಲಕಂಠ ಬಿ.ಎಸ್ಸಿ. ಓದಿ ಸರ್ಕಾರಿ ನೌಕರಿ ಹಿಡಿದು ಶೀ ರಸ್ತೆದಾರನಾದವನು. ಎರಡನೆಯ ಮಗ ಮಲ್ಲೇಶ ವ್ಯಾಪಾರಿಯಾಗುತ್ತಾನೆ. ಇಬ್ಬರಿಗೂ ತಮ್ಮ ಕೆಸರೂರು ಹಳ್ಳಿಯೆಂದರೆ ಅಲರ್ಜಿ. ''ಹಳ್ಳಿ ಬದುಕು'' ಕೃತಿಯ ಗೋಪಾಲಯ್ಯನವರು ಬೇಸಾಯದ ಬದುಕನ್ನು ಪ್ರೋತ್ಸಾಹಿಸುವವರಾದರೆ ಅವರ ಮಗ ಮಾಲತೇಶ ಹಳ್ಳಿಯೆಂದರೆ ಆಗದವನು. ಆತ ಪೊಲೀಸ್ ಕೆಲಸಕ್ಕೆ ಸೇರಿದರೆ, ಅವನ ಮಗ ಮುರಳಿ ಮೈಸೂರಿನಲ್ಲಿ ಕೆಲಸಕ್ಕೆ ಸೇರುತ್ತಾನೆ. ತನ್ನ ಮಕ್ಕಳು ತನ್ನ ಮಾತು ಕೇಳುತ್ತಿಲ್ಲ, ತನ್ನ ಹಾಗೆ ಭೂಮಿಯನ್ನು ಪ್ರೀತಿಸುತ್ತಿಲ್ಲ, ಬೇಸಾಯಗಾರರಾಗಲೇ ಇಲ್ಲ ಎಂಬ ಕೊರಗಿನಲ್ಲಿಯೇ ತೀರಿಕೊಳ್ಳುತ್ತಾನೆ. ಆದರೆ ಹಳ್ಳಿ ಬದುಕಿನ ನಾಗೇಶ ಹಾಗೂ ಬೆಳುವಲದ ಮೂರ್ತಿರಾಯರು ಮಾತ್ರ ಬೇಸಾಯವನ್ನೇ ಮುಂದುವರಿಸುತ್ತಾರೆ, ಗ್ರಾಮ ಭಾರತದ ಪರ ವಕಾಲತ್ತು ವಹಿಸುತ್ತಾರೆ.

ಆಧುನಿಕತೆಯ ಗಾಳಿ ಬೀಸಿದ ಹಾಗೆ 'ಸಂಪ್ರದಾಯ'ಗಳು ಛಿದ್ರವಾದರೆ, ವಸಾಹತು ಶಾಹಿಯ ಪರಿಣಾಮ 'ಗ್ರಾಮ ಭಾರತದ' ನೆಮ್ಮದಿಯನ್ನು ಹಾಳುಮಾಡಿದ್ದು. ಹಳ್ಳಿಯ ಬದುಕುವಿನ ಮುರಳಿ, ಮಾಲತೇಶ, ಬೆಳುವಲದ ನೀಲಕಂಠ, ಮಲ್ಲೇಶರು ಆಧುನಿಕತೆ ಹಾಗೂ ನಗರಗಳ ಮುರಳಿಗಾನಕ್ಕೆ ಮನಸೋತವರೆ. ಹಳ್ಳಿಯ ಬದುಕಿನಲ್ಲಿ ಮಠದ ಶಾಲೆಯ ಬದಲು ಸರ್ಕಾರಿ ಶಾಲೆ ಬಂದಿದೆ. ಹಿಟ್ಟಿನ ಗಿರಣಿ, ಕಾಫಿ ಕ್ಲಬ್‌ಗಳು ಬಂದಿವೆ. ವಸಾಹತುಶಾಹಿಯ ದೊಡ್ಡ ಪರಿಣಾಮ ಎಂದರೆ 'ನೆಮ್ಮದಿ' ಮರೆಯಾದದ್ದು. 'ನಾವು' ಎಂಬಲ್ಲಿ 'ನಾನು' ಎನ್ನುವಂತಾದದ್ದು, ಅವಿಭಕ್ತ ಕುಟುಂಬಗಳು ವಿಭಕ್ತ ಕುಟುಂಬಗಳಾದದ್ದು, ನಿಸ್ವಾರ್ಥ ಮನೋಭಾವ ಹೋಗಿ 'ಸ್ವಾರ್ಥ'ತನ ತುಂಬಿದ್ದು, ರಾಜಕೀಯ ಚುನಾವಣೆಗಳು ಘರ್ಷಣೆಗೆ ದಾರಿಯಾದದ್ದು, ಹೀಗೆ ನಗರ ಭಾರತ ಹಾಗೂ ಗ್ರಾಮಭಾರತಗಳ ಮಧ್ಯೆ ಏರ್ಪಟ್ಟ ಸಂಘರ್ಷದ ಚಿತ್ರಣವನ್ನು ದೇವೀರಪ್ಪನವರು ಕಲಾತ್ಮಕವಾಗಿ ಮೂಡಿಸಿದ್ದಾರೆ.

ಹಾಗಾದರೆ ಆಧುನಿಕತೆ, ಅಭಿವೃದ್ಧಿ ಬೇಡವೇ ? ಬೇಕು. ಅದಕ್ಕೆ ಉತ್ತರ 'ಹಳ್ಳಿಯ ಬದುಕು'ವಿನ ನಾಗೇಶನ ಪಾತ್ರದಲ್ಲಿದೆ. ಕಾಳಾಚಾರಿಯ ಅವಿವೇಕದ ಪ್ರಗತಿಗಳಾದ ಕಾಫಿ ಕ್ಲಬ್, ಇಸ್ಪಿಟ್ ಕ್ಲಬ್‌ಗಳು ಬೇಡ. ನಾಗೇಶನ ಆಲೋಚನೆಯ ಪ್ರಕಾರ ಒಳ್ಳೆಯ ರೀತಿಯ ಪ್ರಗತಿಯಾಗಬೇಕಾಗಿದೆ.

ರಾಷ್ಟ್ರೀಯವಾದಿಗಳು ಹಾಗೂ ಉದಾರವಾದಿಗಳಾದ ಲೇಖಕರು ಈ ಕಾರಣಕ್ಕಾಗಿಯೇ ಆದರ್ಶಗಳಿಗೆ ತುಡಿಯುತ್ತಾರೆ. ಮಾನವೀಯ ಮೌಲ್ಯಗಳಿಗೆ ಹಾತೊರೆಯುತ್ತಾರೆ. ಇವರಿಗೆ ನಗರ ಹಾಗೂ ಆಧುನಿಕತೆಯ ಬಗ್ಗೆ ಸ್ವಲ್ಪ ಅಸಹನೆಯಿದ್ದಂತಿದೆ. ಗ್ರಾಮೀಣ

(೬೨ನೇ ಪುಟಕ್ಕೆ)

# ವಿಭಿನ್ನ ದೃಷ್ಟಿಕೋನಗಳು

ನಾವು ವಸ್ತುಗಳನ್ನು ಅವು ಇರುವಂತೆ ಗ್ರಹಿಸುವುದಿಲ್ಲ, ನಮ್ಮ ಮೂಗಿನ ನೇರಕ್ಕೆ ಅವನ್ನು ನೋಡುತ್ತೇವೆ' ಎನ್ನುವ ಮಾತೊಂದಿದೆ. ಇದು ತುಂಬ ಸತ್ಯವಾದ ಮಾತು. ನಮ್ಮ ದೈನಂದಿನ ಆಗುಹೋಗುಗಳಲ್ಲಿ ಈ ಮಾತಿಗೆ ಸಾಕಷ್ಟು ಪುರಾವೆಗಳನ್ನು ಕಾಣಬಹುದು.

ನಾವು ನೋಡುವ ದೃಷ್ಟಿ ಮತ್ತು ನಮ್ಮ ಗ್ರಹಿಕೆಗಳು ವಾಸ್ತವಕ್ಕಿಂತ ಭಿನ್ನವಾಗಿ, ನಮ್ಮ ವೈಯಕ್ತಿಕ ರಾಗದ್ವೇಷಗಳು, ನಮ್ಮ ಬೇಕುಬೇಡಗಳು, ನಮ್ಮ ಮನೋಭಾವಗಳಿಂದ ಪ್ರೇರಿತವಾಗಿರುತ್ತವೆ. 'ವಾಸ್ತವ' ಎನ್ನುವುದು ಒಂದು ಇರುತ್ತದೆ, ನಿಜ. ಆದರೆ ಈ ವಾಸ್ತವ ಒಬ್ಬೊಬ್ಬರಿಗೂ ಬೇರೆಯೇ ಆಗಿರುತ್ತದೆ. ಉದಾಹರಣೆಗೆ, ರಾಜಕೀಯ ನಾಯಕನೊಬ್ಬನ ಹೇಳಿಕೆಯನ್ನು ತೆಗೆದುಕೊಳ್ಳಿ. ಈ ಹೇಳಿಕೆ ಒಂದು ನಿರ್ದಿಷ್ಟ ಸ್ವರೂಪದ್ದಾಗಿರುತ್ತದೆ. ಹಾಗಾದರೂ ಸಹ ಅದನ್ನು ಅರ್ಥೈಸುವವರು ಅವರವರ ಮನೋಧರ್ಮಕ್ಕೆ ಅನುಗುಣವಾಗಿ ಅವರದೇ ರೀತಿಯಲ್ಲಿ ವ್ಯಾಖ್ಯಾನಿಸುತ್ತಾರೆ. ಒಬ್ಬರಿಗೆ ಆ ಹೇಳಿಕೆ ತೀವ್ರಗಾಮಿಯಾಗಿ ಕಂಡುಬಂದರೆ, ಇನ್ನೊಬ್ಬರಿಗೆ ಅದು ಪ್ರತಿಗಾಮಿಯಾಗಿ ಕಾಣಬಹುದು. ಈ ಬಗೆಯ ದ್ವಂದ್ವಕ್ಕೆ ಕಾರಣ ಹೇಳಿಕೆಯಲ್ಲ; ಅದನ್ನು ಗ್ರಹಿಸುವವರ ವಿಭಿನ್ನ ದೃಷ್ಟಿಕೋನಗಳು.




ನಮ್ಮ ರಾಗದ್ವೇಷಗಳು ನಮ್ಮನ್ನು ಹೇಗೆ ವಂಚಿಸುತ್ತವೆ ಎನ್ನುವುದಕ್ಕೆ ಉತ್ತಮ ನಿದರ್ಶನ ನಮ್ಮ ಮಾಧ್ಯಮ ವರದಿಗಳು. ಒಂದು ರಾಜಕೀಯ ಸಮಾವೇಶವನ್ನೇ ತೆಗೆದುಕೊಳ್ಳಿ. ಅಲ್ಲಿ ಒಂದು ನಿರ್ದಿಷ್ಟ ಸಂಖ್ಯೆಯ ಜನ ಹಾಜರಿರುತ್ತಾರೆ. ಇದನ್ನು ವರದಿ ಮಾಡುವವನು ತನ್ನ ಪೂರ್ವಗ್ರಹಗಳಿಗೆ ಅನುಗುಣವಾಗಿ, ಶ್ರೋತೃಗಳ ಸಂಖ್ಯೆಯನ್ನು ''ಅಪಾರ ಜನಸ್ತೋಮ'' ಎಂದೋ, ''ಗಣನೀಯವಲ್ಲದ ಸಂಖ್ಯೆ''ಯೆಂದೋ ವರದಿ ಮಾಡುತ್ತಾನೆ. ಸಭೆಯಲ್ಲಿನ ಸಂಖ್ಯೆ ಒಂದೇ ಆಗಿರುತ್ತದೆ. ಆದರೆ ವರದಿಗಾರರು ಮಾಡುವ ಅಂದಾಜಿನಲ್ಲಿ ಏರುಪೇರುಗಳಿರುತ್ತವೆ – ಅವರವರ ವೈಯಕ್ತಿಕ ನಿರೀಕ್ಷೆ, ಆಕಾಂಕ್ಷೆ, ಮನೋಭಾವಗಳಿಗೆ ಅನುಗುಣವಾಗಿ.

ಮನೋವಿಜ್ಞಾನಿಗಳು ಈ ಬಗೆಯ ಪೂರ್ವಗ್ರಹಗಳು, ಅಭಿಲಾಷೆಗಳು, ಅಗತ್ಯಗಳು ಹೇಗೆ ನಮ್ಮ ಗ್ರಹಿಕೆಗಳನ್ನು ಪ್ರಭಾವಿತಗೊಳಿಸುತ್ತವೆ ಎಂದು ಪ್ರಯೋಗಗಳ ಮೂಲಕ ಸಾಬೀತುಪಡಿಸಿದ್ದಾರೆ. ಮಕ್ಕಳ ಮೇಲೆ ನಡೆಸಿದ ಒಂದು ಪ್ರಯೋಗದಲ್ಲಿ ಒಂದು ನಾಣ್ಯದ ಗಾತ್ರವನ್ನು ಅಂದಾಜು ಮಾಡುವಂತೆ ಕೇಳಲಾಯಿತು. ಕೆಲವು ಮಕ್ಕಳು ಶ್ರೀಮಂತ ಹಿನ್ನೆಲೆಯಿಂದ ಬಂದವರು; ಉಳಿದವರು ಬಡತನದ ಮೂಲದವರು. ಶ್ರೀಮಂತ ಹಿನ್ನೆಲೆಯ ಮಕ್ಕಳು ಆ ನಾಣ್ಯದ ಗಾತ್ರವನ್ನು ಅದರ ನಿಜವಾದ ಗಾತ್ರಕ್ಕಿಂತ ಕಿರಿದಾಗಿಯೂ, ಬಡತನದ ಮೂಲದ ಮಕ್ಕಳು ಅದರ ಗಾತ್ರವನ್ನು ಆ ನಾಣ್ಯದ ನಿಜವಾದ ಗಾತ್ರಕ್ಕಿಂತ ಮಿಗಿಲಾಗಿಯೂ ಅಂದಾಜು ಮಾಡುತ್ತಾರೆ. ಇದರ ಅರ್ಥ ಸ್ಪಷ್ಟ. ಶ್ರೀಮಂತ ಮಕ್ಕಳಿಗೆ ಆ ನಾಣ್ಯದ ಮೌಲ್ಯ ಗೌಣವಾದದ್ದು. ಹಾಗಾಗಿ ಅವರು ಅದನ್ನು ಅದರ ನಿಜವಾದ ಗಾತ್ರಕ್ಕಿಂತ ಚಿಕ್ಕದಾಗಿ ಪರಿಗಣಿಸುತ್ತಾರೆ. ಆದರೆ ಬಡಮಕ್ಕಳಿಗೆ ಆ ನಾಣ್ಯ ಬೆಲೆಯುಳ್ಳದ್ದು; ಸಹಜವಾಗಿಯೇ ಅವರು ಅದರ ಗಾತ್ರವನ್ನು ದೊಡ್ಡದಾಗಿ ಕಾಣುತ್ತಾರೆ.

ನಮ್ಮ ಅಗತ್ಯಗಳು ನಮ್ಮ ಗ್ರಹಿಕೆಗಳನ್ನು ಹೇಗೆ ತಿರುಚುತ್ತವೆ ಎನ್ನುವುದಕ್ಕೆ ಈ ಪ್ರಯೋಗ ಉತ್ತಮ ಸಾಕ್ಷಿಯಾಗಿದೆ.

ಈ ಮೇಲಿನ ಮಾತುಗಳ ತಾತ್ಪರ್ಯ ಇಷ್ಟು. ಸತ್ಯವೆಂಬುದು ಇರಬಹುದಾದರೂ, ಆ ಸತ್ಯ ಎಲ್ಲರಿಗೂ ಒಂದೇ ಆಗಿರುವುದಿಲ್ಲ. ನಮ್ಮ ನಮ್ಮ ವೈಯಕ್ತಿಕ ಹಿನ್ನೆಲೆ, ಮಾನಸಿಕ ಸ್ಥಿತಿಗತಿಗಳನ್ನು ಅವಲಂಬಿಸಿ ಆ ಸತ್ಯ ಬದಲಾಗುತ್ತಾ ಹೋಗುತ್ತದೆ. ಒಬ್ಬರಿಗೆ 'ಸರಿ' ಎನ್ನಿಸಿದ್ದು ಇನ್ನೊಬ್ಬರ ದೃಷ್ಟಿಯಲ್ಲಿ 'ತಪ್ಪು'. ಆದ್ದರಿಂದ ನಾವು ಹೇಳುವುದೇ ಸತ್ಯ, ಬೇರೆಯವರ ತಿಳುವಳಿಕೆ ತಪ್ಪು ಎಂದುಕೊಳ್ಳುವುದು ಬರಿಯ ಅಹಂಕಾರದ ಮಾತಾಗುತ್ತದೆ. ಅದಕ್ಕೆ ಬದಲಾಗಿ, ಬೇರೆಯವರ ವಿಚಾರಗಳನ್ನು ಗೌರವಿಸುವ, ಅವರ ವಿಚಾರಗಳಲ್ಲಿ ಅಡಕವಾಗಿರಬಹುದಾದ ವಾಸ್ತವಗಳನ್ನು ಪರಿಶೀಲಿಸುವ ಸೌಜನ್ಯವನ್ನು, ಹೃದಯ ವೈಶಾಲ್ಯವನ್ನು ನಾವು ಬೆಳೆಸಿಕೊಳ್ಳಬೇಕು. ಈ ಮೂಲಕ, ಒಂದು ವಿಚಾರಕ್ಕೆ ಸಂಬಂಧಿಸಿದ ವಿವಿಧ ಮುಖಗಳನ್ನು ಅರ್ಥಮಾಡಿಕೊಂಡು, ನಮಗಿಂತ ಬೇರೆ ಅಭಿಪ್ರಾಯಗಳನ್ನು ಹೊಂದಿದವರ ಜೊತೆ ಸಹಬಾಳ್ವೆ ನಡೆಸುವುದು ಸುಲಭವಾಗುತ್ತದೆ, ಸಾಧ್ಯವಾಗುತ್ತದೆ.

**ಎಚ್. ಎಸ್. ಈಶ್ವರ**
ಎಚ್.ಐ.ಜಿ. ೧೧, ಕೆ. ಎಚ್. ಬಿ. ಕಾಲೋನಿ, ಮೊದಲನೇ ಹಂತ
ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

---

(೬೧ನೇ ಪುಟದಿಂದ)

ಬದುಕಿನ ಸೊಗಡು, ಪ್ರಾಮಾಣಿಕತೆ, ನೆಮ್ಮದಿ, ಪರಸ್ಪರ ಸಹಕಾರ ಇತ್ಯಾದಿಗಳನ್ನು ಮೆಚ್ಚುವ ಲೇಖಕರು ಅದೇ ಗ್ರಾಮ ಭಾರತದ ಅನೇಕ ಕಡೆಗಳಲ್ಲಿ ತಾಂಡವವಾಡುತ್ತಿರುವ ವರ್ಣಾಶ್ರಮ ಪದ್ಧತಿ, ಅಮಾನವೀಯ ಅಸ್ಪೃಶ್ಯತೆ, ಜಮೀನ್ದಾರರ ದಬ್ಬಾಳಿಕೆ, ಗೌಡ ಪಟೇಲರುಗಳ ದೌರ್ಜನ್ಯಗಳಿಗೆ ಕುರುಡಾಗಿಬಿಡುತ್ತಾರೆ. ಇದು ದೇವೀರಪ್ಪನವರೊಬ್ಬರ ಸಮಸ್ಯೆಯಲ್ಲ, ನವೋದಯದ ಕಾಲ ಘಟ್ಟದಲ್ಲಿ ಬರೆಯುತ್ತಿದ್ದ ಹಾಗೂ ರಾಷ್ಟ್ರೀಯವಾದಿಗಳಾಗಿದ್ದ ಎಲ್ಲ ಲೇಖಕರ ಸಮಸ್ಯೆ ಕೂಡ. ಕೆಲವರಿಗೆ ಇದು ಸಮಸ್ಯೆಯೇ ಅಲ್ಲ ಕಾರಣ ಯಥಾಸ್ಥಿತಿ ವಾದವನ್ನು ಒಪ್ಪಿಕೊಂಡಂತಿರುವ ಅವರಿಗೆ ಸಮಾಜದಲ್ಲಿ ಈ ರೀತಿಯ ಶ್ರೇಣೀಕರಣದ ಅಂತಸ್ತುಗಳು ಇರಲೇಬೇಕೆಂದು ಬಯಸುತ್ತಾರೆ. ದೇವೀರಪ್ಪನವರು ಆ ರೀತಿಯ ಲೇಖಕರಲ್ಲ, ಅವರಿಗೆ ಗ್ರಾಮೀಣ ಪ್ರದೇಶದ ಮೇಲಿನ ಪ್ರೀತಿ ಇವುಗಳ ಬಗ್ಗೆ ಆಲೋಚನೆ ಮಾಡುವುದನ್ನು ಮಸುಕಾಗಿಸಿಬಿಟ್ಟಿದೆ, ಅಷ್ಟೆ.

ಕೃತಿಗಳಲ್ಲಿ ಬಳಸಿರುವ ಗಾದೆ ಮಾತುಗಳು, ಜನಪದ ಗೀತೆಗಳು, ಕೋಲಾಟ, ಬಯಲಾಟ, ನಾಟಕಗಳ ಪ್ರಸಂಗಗಳು, ವಿನೋದ ಇತ್ಯಾದಿಗಳು ಕಲಾತ್ಮಕತೆಯಿಂದ ಕೂಡಿದ್ದು ಗ್ರಾಮೀಣ ಬದುಕಿನ ದಟ್ಟವಾದ ವಿವರಗಳನ್ನೊಳಗೊಂಡಿವೆ. ಜೊತೆಗೆ, ಹೊನ್ನಾಳಿ ಸೀಮೆಯ ಆಕರ್ಷಕ ಭಾಷೆಯ ಬಳಕೆ, ''ಹಾರುವನಿದ್ದ ಊರು ಹಾಳು; ಏಡಿಯಿದ್ದ ಕೆರೆ ಹಾಳು.'' ''ಹಿಂದಿಂದ ನೆನಸಿಕೊಂಡು ಹಿತ್ತಲಾಗ ಅತ್ತಿದ್ದರಂತೆ.'' ಇತ್ಯಾದಿ.

ಕೃತಿಯಲ್ಲಿ ಬಳಸಿರುವ ಜನಪದ ಗೀತೆಗಳಂತೂ ಮತ್ತೆ ಮತ್ತೆ ಮೆಲಕು ಹಾಕುವಂತಿವೆ :

ಯಾರು ಇದ್ದರು ನನ್ನ ತಾಯವ್ವನೋಲರು
ಸಾವಿರ ಕೊಳ್ಳಿ ಒಲೆಯಾಗಿ। ಇದ್ದರೆ
ಜ್ಯೋತಿ ನಿನ್ನಾರು ಹೋಲರು *(ಹಳ್ಳಿ ಬದುಕು : ಪುಟ - ೬)*

ಮಂದಿ ಮಂದಿ ಎಂದು ಮಂದಿನ ನಂಬಲಿ ಹೋದೆ
ಮಂದಿ ಬಿಟ್ಟಾರ ನಡುನೀರ *(ಬೆಳುವಲ : ಪುಟ - ೩೮)*

**ಡಾ|| ಚನ್ನೇಶ್ ಹೊನ್ನಾಳಿ**
ಕನ್ನಡ ಸಹ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಹೊನ್ನಾಳಿ - ೫೭೭ ೨೧೭, ದಾವಣಗೆರೆ ಜಿಲ್ಲೆ



# ರೈತರ ಸಾಧನೆಗಳ ಪ್ರದರ್ಶನ




(ಚಿತ್ರಗಳು : ಕೆ. ಪಿ. ಸ್ವಾಮಿ)

ಬೆಂಗಳೂರು ಕೃಷಿ ವಿಶ್ವವಿದ್ಯಾಲಯದ ಆವರಣದಲ್ಲಿ ನಡೆದ ರಾಷ್ಟ್ರೀಯ ಕೃಷಿಮೇಳ ಪ್ರತಿ ದಿನ ಸುಮಾರು ಎರಡು ಲಕ್ಷಕ್ಕೂ ಹೆಚ್ಚು ಪ್ರೇಕ್ಷಕರನ್ನು ಆಕರ್ಷಿಸಿತು. ರೈತರು ಬೆಳೆದ ಧಾನ್ಯಗಳ, ಹಣ್ಣು ಹಂಪಲುಗಳ, ತರಕಾರಿಗಳ ಪ್ರದರ್ಶನ. ಜೊತೆಗೆ ನಾಟಿ ಕೋಳಿಯಿಂದ ಹಿಡಿದು ಎಮುವರೆಗೆ, ಅತ್ಯುತ್ತಮ ತಳಿಯ ಎತ್ತುಗಳು, ಹಸುಗಳು, ಕುರಿಗಳು, ಆಡುಗಳು, ಹಂದಿಗಳು ಪ್ರೇಕ್ಷಕರ ಮೆಚ್ಚುಗೆ ಗಳಿಸಿದವು. ಬೆಲೆ ಕೇಳಿ ಬಾಯಿ ಮೇಲೆ ಬೆರಳಿಟ್ಟುಕೊಂಡವರುಂಟು. ಕೃಷಿ ವಿಶ್ವವಿದ್ಯಾಲಯದ ಆವರಣದಲ್ಲಿ ಭತ್ತ, ಕಬ್ಬು, ರಾಗಿ, ಅವರೆ, ಹಿಪ್ಪನೇರಳೆ, ಹಣ್ಣುಗಳು, ಸೂರ್ಯಕಾಂತಿ ಹೀಗೆ ರೈತರಿಗೆ ಲಾಭದಾಯಕವಾಗುವ ಬೇರೆ ಬೇರೆ ಬೆಳೆಗಳ ಪ್ರಾತ್ಯಕ್ಷಿಕೆ. ಬೀಜಗಳು, ಗೊಬ್ಬರಗಳ ಬಳಕೆ, ಕೃಷಿಯಲ್ಲಿ ಬಳಕೆಯಾಗುವ ದೊಡ್ಡ ಟ್ರ್ಯಾಕ್ಟರುಗಳಿಂದ ಹಿಡಿದು ಸಣ್ಣ ಉಳುಮೆಯಂತ್ರ, ಕೂರಿಗೆಗಳು, ಸಿಂಪರಣೆಗಳು, ನಾಟಿ ಹಾಕಲು ಬಳಸುವ ಯಂತ್ರ, ತೆಂಗಿನ ಮರ ಹತ್ತಲು, ಮೆಕ್ಕೆ ಜೋಳದ ಕಾಳು ಬಿಡಿಸಲು, ಅಡಿಕೆ ಸುಲಿಯಲು ಉಪಯೋಗವಾಗುವ ಸಣ್ಣ ಪುಟ್ಟ ಉಪಕರಣಗಳ ಕುರಿತು ರೈತರಿಗೆ ತಿಳಿವಳಿಕೆ ಮೂಡಿಸುವ ವಿಚಾರ ವಿನಿಮಯ. ಅವುಗಳ ಬೆಲೆ, ದೊರಕುವ ಸ್ಥಳ, ಸರಕಾರದ ಸಬ್ಸಿಡಿ ಕುರಿತು ಮಾಹಿತಿ. ಅತ್ಯುತ್ತಮ ಸಾಧನೆ ಮಾಡಿದ ರೈತರಿಗ ಪ್ರಶಸ್ತಿಗಳ ವಿನಿಮಯ. ಕರ್ನಾಟಕದ ಎಲ್ಲ ಭಾಗಗಳಿಂದ ಬಂದಿದ್ದ ರೈತರು ಜೊತೆಗೆ ಬೆಂಗಳೂರಿನ ನಾಗರಿಕರು, ಶಾಲಾಮಕ್ಕಳು ಬಹಳ ಉತ್ಸಾಹದಿಂದ ಭಾಗವಹಿಸಿದ ಯಶಸ್ವಿ ಮೇಳ.













Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly / DECEMBER 2011 / Rs. 12
RNI Regd. KARKAN / 1999 / 614. Karnataka Regd. KRNA/BGE/7/2009-11
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)